जानेवाला खेत। ಸೀಮಂತೋತ್ಸವ, ಕಬ್ಬಿನ ಬೆಳೆಗಾಗಿ ಮಾಘದಿಂದ ಆ-ಷಾಢದ ವರೆಗೆ ಹರಗಿದ ಭೂಮಿ.

अठवारा–पु आठ दिन का काल, आठवाँ दिन, सप्ताह। ಎಂಟು ದಿನ, ಎಂಟನೆಯ ದಿನ, ವಾರ, ಸಪ್ತಾಹ.

अठहत्तर– वि ७८। ಎಪ್ಪತ್ತೆಂಟು.

अठाईस– वि. दे 'अट्ठाईस'।

अठानवे– वि ९८। ತೊಂಭತ್ತೆಂಟು.

अठाना– सक्रि. सताना, ठानना। ತ್ರಾಸ ಕೊಡು, ಪೀಡಿಸು, ನಿಶ್ಚಯಿಸು.

अठारह–वि. दो कम बीस। ಹದಿನೆಂಟು.

अठासी– वि दे 'अट्ठासी'।

अठोतरी– स्त्री. १०८ दानोंकी माला। ನೂರಾ ಎಂಟು ಮಣಿಗಳ ಜಪ ಮಾಲೆ.

अड़ंगा– पु अड़चन। ತೊಡಕು, ವಿಘ್ನ, ಅಡ್ಡಿ.

अड– पु जिद, हठ। ಹಟ, ಆಗ್ರಹ, ಜಿದ್ದು, ಮುಸ್ಕರ.

अड़काना– सक्रि उलझाना, टिकाना। ನಿಲ್ಲಿಸು, ತಡೆ, ಸಿಕ್ಕಿಸು, ಅಡ್ಡಿ ಮಾಡು, ಆಧಾರ ಕೊಡು.

अडग– वि दृढ, पुष्ट, अचल। ದೃಢವಾದ, ಪುಷ್ಟ, ಅಚಲ, ಸ್ಥಿರ.

अडगोडा–पु. पशुओंके गलेमें बाधी गयी लकड़ी। ಗುದ್ದಿ, ದಂಡಿ.

अडचन, अडचल– स्त्री कठिनाई, बाधा। ಸಂಕಟ, ತೊಡಕು, ಅಡಚಣಿ, ಅಡ್ಡಿ.

अडतल–पु बाधा, विघ्न, आड़, आश्रय। ಅಡ್ಡಿ, ವಿಘ್ನ, ಮರೆ, ಆಶ್ರಯ, ನೆವ.

अडतला– पु रक्षक। ರಕ್ಷಕ, ಆಶ್ರಯದಾತ.

अडतालीस– वि चालीस और आठ। ನಲವತ್ತೆಂಟು.

अडतीस– वि. तीस और आठ। ಮೂವತ್ತೆಂಟು.

अडदार– वि अडनेवाला। ಅಲ್ಲಲ್ಲಿ ನಿ-ಲ್ಲುವ, ಅಡ್ಡಿಯಾಗುವ, ಹಟಮಾರಿ, ಮೊಂಡ.

अडना– अक्रि रुकना, हठ करना। ತಡೆ, ನಿಲ್ಲು, ಹಟಹಿಡಿ.

अड़बंग–वि. अटपट, टेढ़ामेढ़ा। ಡೊಂಕು-ಡಸಕಾದ, ತಗ್ಗುದಿನ್ನೆಗಳುಳ್ಳ, ಕಠಿಣ, ವಿಚಿತ್ರ.

अडबला– वि हठी। ಹಟಮಾರಿ.

अड़र– वि. निर्भय। ನಿರ್ಭಯ, ಅಂಜಿಕೆಯಿಲ್ಲದ.

अडसठ– वि साठ और आठ। ಅರವತ್ತೆಂಟು.

अडहुल– पु एक लाल फूल। ದಾಸಾಳದ ಹೂವು.

अड़াড– पु. तीर, किनारा, (नदी या तालावका) गोशाला। ನದಿ ಅಥವಾ ಕೆರೆಯ ತೀರ, ಗೋಶಾಲೆ, ಕೊಟ್ಟಿಗೆ.

अडान– स्त्री पडाव, ठहरने या रुकने का स्थान। ನಿಲ್ಲುವ ಅಥವಾ ತಂಗುವ ಸ್ಥಳ, ನಿಲ್ದಾಣ, ಆಧಾರ.

अड़ाना– सक्रि. दे. 'अटकाना'।

**अड़ार**— पु ढेर, लकड़ी बेचनेकी दूकान। ರಾಶಿ, ಗುಂಪು, ಕಟ್ಟಿಗೆಯ ವಖಾರ, ಕಟ್ಟಿಗೆ ಅಡ್ಡೆ.

**अड़ियल**— वि हठी, सुस्त। ಹಟಮಾರಿ, ಪೈಗಳ್ಳ, ಹುಂಬ, ತಲೆಯಿಲ್ಲದ, ಸೋಮಾರಿ.

**अड़ी**— स्त्री. हठ, जिद, टेक। ಅಡ್ಡಿ, ಹಟ, ಆಗ್ರಹ.

**अड़ूसा**—पु एक औषधि विशेष। ಒಂದು ಔಷಧ.

**अडोल**— वि. अटल। ಸ್ಥಿರ, ಅಚಲ, ಸ್ತಬ್ಧ.

**अड़ोस-पड़ोस**—पु आसपास। ನೆರೆಹೊರೆ, ಅಕ್ಕಪಕ್ಕ.

**अड़ोसी-पड़ोसी**— पु. आसपास रहनेवाले। ನೆರೆಹೊರೆಯವರು.

**अड्डा**—पु केन्द्र, डेरा, ठहरने व मिलनेकी जगह, चिड़ियोंके बैठनेकी छड़, कबूतरोंका घोंसला। ಕೇಂದ್ರ, ಬಿಡಾರ, ಆಸರ, ತಂಗುವ ಸ್ಥಳ, ಕೂಡ್ರುವ ಅಥವಾ ಭೆಟ್ಟಿಯಾಗುವ ಸ್ಥಳ, ಪಕ್ಷಿಗಳು ಕೂಡ್ರುವದಕ್ಕಾಗಿ ಹಾಕಿದ ಕೋಲು, ಪಾರಿವಾಳದ ಗೂಡು

**अढ़तिया**—पु आढती। ದಲಾಲ, ಏಜಂಟ, ದಲಾಲಿ ಅಂಗಡಿಯವ, ದಳ್ಳಾಳಿ, ಮಧ್ಯಸ್ತಗಾರ

**अढ़न**— स्त्री मर्यादा, आज्ञा। ಮರ್ಯಾದೆ, ಆಜ್ಞೆ.

**अढ़वना, अढौना**— सक्रि. आज्ञा देना। ಆಜ್ಞೆ ಕೊಡು, ಕೆಲಸಕ್ಕೆ ಹಚ್ಚು. पु सौंपा हुआ काम। ಒಪ್ಪಿಸಿದ ಕೆಲಸ.

**अढाई**— वि ढाई। ಎರಡೂವರೆ.

**अढुकना**— अक्रि ठोकर खाना। ಎಡವು, ಢಿಕ್ಕಿ ಹೊಡೆ

**अढैय्या**—पु ढाई सेरकी तौल, ढाई गुनेका पहाड़ा। ಎರಡೂವರೆ ಸೇರಿನ ತೂಕ, ಎರಡೂವರೆಯ ಮಗ್ಗಿ.

**अतः, अतएव**— क्रिवि इसलिये, इस कारण। ಆದುದರಿಂದ.

**अतर**— पु इत्र। ಗಂಧದ ಎಣ್ಣೆ, ವಾಸನೆ ಎಣ್ಣೆ, ಅತ್ತರು.

**अतरदान**—पु इत्रदान। ಅತ್ತರುಇಡುವ ಪಾತ್ರೆ, ಪನ್ನೀರುದಾನಿ

**अतरसों**— क्रिवि परसों के बादका या पूर्वका दिन। ಮೊನ್ನಿನ ದಿನದ ಪೂರ್ವದ ಅಥವಾ ನಾಡದಿನ ಮಾರನೆಯ ದಿನ, ಆಚೆ ಮೊನ್ನೆ, ಆಚೆ ನಾಡದು.

**अतलस**—स्त्री.एक मुलायम रेशमी कपड़ा। ಒಂದು ಪ್ರಕಾರದ ರೇಶ್ಮೆ ಬಟ್ಟೆ.

**अतवार**— पु बर्ताव, रीति, इतवार। ವರ್ತನ, ನಡೆವಳಿಕೆ, ರೀತಿ, ಪದ್ಧತಿ, ರವಿವಾರ.

**अता**— स्त्री. बख्शिश, दान। ದಾನ, ದೇಣಗೀ, ದತ್ತಿ, ಕೊಡುಗೆ.

**अतानामा**—पु बख्शीशनामा। ಬಕ್ಷೀಸು ಪತ್ರ.

**अताई**— वि चालाक, शैतान, गंवार। ಕುಶಲ, ದಕ್ಷ, ಧೂರ್ತ, ದುಷ್ಟ,

ತಿಳಿದೂ ತಿಳಿದೂ.

**अदबियात–** स्त्री साहित्य, संस्कृति। ಸಾಹಿತ್ಯ, ಸಂಸ್ಕೃತಿ.

**अदम–** पु अभाव, परलोक। ಅಭಾವ, ಪರಲೋಕ.

**अदम हाजिरी–** स्त्री अनुपस्थिति। ಗೈರು ಹಾಜರಿ, ಅನುಪಸ್ಥಿತಿ.

**अदमनीय, अदम्य–** वि जिसका दमन न किया जा सके, प्रबल। ಕುಂದಲಾರದ, ನಾಶವಾಗಲಾರದ, ಪ್ರಬಲ.

**अदरक–** पु एक चरपरी जड या गाठ। ಶುಂಠಿ.

**अदरा–** पु आर्द्रा नक्षत्र। ಆರ್ದ್ರಾ ನಕ್ಷತ್ರ,

**अदराना–** सक्रि आदर पानेकी इच्छा करना, अभिमानी बनना। ಪ್ರತಿಷ್ಠೆ ದೊರಕಿಸುವ ಇಚ್ಛೆ ಮಾಡು, ಅಭಿಮಾನ ತಾಳು, ಪ್ರತಿಷ್ಠೆ ತೋರಿಸು.

**अदरावन–** पु. आदर, गौरव। ಆದರ, ಗೌರವ, ಮಾನ.

**अदल–** पु. न्याय, इन्साफ। ನ್ಯಾಯ, ತೀರ್ಪು.

**अदल-बदल–** पु. हेर फेर, परिवर्तन। ಅದಲುಬದಲು, ಪರಿವರ್ತನೆ.

**अदवाइन, अदवान–** पु ओनचन। ಹೊರಸು ಅಥವಾ ಮಂಚದ ಹೆಣಿಕೆ ಬಿಗಿಯುವ ಹಗ್ಗ.

**अदहन–** पु. दाल आदि पकाने के लिये आग पर चढ़ाया गया पानी। ಎಸರು.

**अदा–** वि ಕಳೆದ, ತೀರಿಸಿದ. स्त्री हावभाव। ಒಯ್ಯಾರ, ಹಾವಭಾವ

**—करना–** स्त्री चुकता करना। ತೀರಿಸು, ಸಾಲ ಕಳೆ, ಪೂರ್ಣ ಮಾಡು.

**अदाबंदी–** स्त्री कर्ज अदा करनेकी अवधि। ಸಾಲ ತೀರಿಸುವ ಅವಧಿ.

**अदालत–** स्त्री न्यायालय। ಕಚೇರಿ, ಕೋರ್ಟು, ನ್ಯಾಯಾಸ್ಥಾನ.

**अदालती–** वि अदालत संबंधी, मुकद्दमा लडनेवाला। ಕೋರ್ಟಿಗೆ ಸಂಬಂಧಿಸಿದ, ನ್ಯಾಯ ಮಾಡುವವ.

**अदावत–** स्त्री वैर, दुश्मनी। ವೈರತ್ವ, ಶತೃತ್ವ.

**अदावती–** वि. अदावत रखनेवाला, वैरी। ವೈರತ್ವದ, ವಿರೋಧಿ, ಹಗೆ, ವೈರಿ.

**अदाह–** स्त्री हावभाव। ಬೆಡಗು, ಹಾವಭಾವ, ಒಯ್ಯಾರ, ಮುರುಕು.

**अदीब–** पु. साहित्यका जाननेवाला। ಸಾಹಿತಿ.

**अदीह–** वि छोटा। ಸಣ್ಣ, ಪುಟ್ಟ, ಚಿಕ್ಕ.

**अदोरी–** स्त्री एक मिठाई। ಉದ್ದಿನ ವಡೆ, ಸಂಡಿಗೆ.

**अद्ध, अद्धा–** पु आधा। ಅರ್ಧ.

**अद्धी–** स्त्री आधी दमडी, महीन तंजेब। ಅರ್ಧ ದಮಡಿ, ಒಂದು ತರದ ಮಲ-ಮಲು ಬಟ್ಟೆ.

**अद्रक–** पु दे 'अदरक'।

**अध–** वि आधा। ಅರ್ಧ. क्रिवि. नीचे। ಕೆಳಗೆ.

**अधकचरा–** वि अपूर्ण, कच्चा, अपरिपक्व। ಅಪೂರ್ಣ, ಅಪರಿಪಕ್ವ,

ಪಾಗದ.

**अधकपारी**– स्त्री आधे सिरमें होनेवाला सिर दर्द। ಅರತಲೆ ನೋವು.

**अधकरिया,अधकरी**– स्त्री आधी किस्त, आधा महसूल। ಕಂದಾಯದ ಅರ್ಧ ಕಂತು, ಹಪ್ತೆ, ಅರ್ಧ ವಸೂಲಿ.

**अधखिला**– वि. आधा खिला हुआ। ಅರ್ಧ ಅರಳಿದ, ಅರ್ಧ ವಿಕಸಿತ, ಅರೆಬಿರಿದ.

**अधजर**– वि. आधा जला हुआ। ಅರ್ಧ ಸುಟ್ಟ.

**अधडा**–वि. विना आधार का। ಆಧಾರ ವಿಲ್ಲದ

**अधनिया**– वि. दो पैसेका। ಅರ್ಧಾಣೆ ಬೆಲೆಯ.

**अधनिया,अधन्ना**– पु दो पैसेका सिक्का। ಅರ್ಧಾಣೆಯ ನಾಣ್ಯ.

**अधवर**–पु. आधा मार्ग, वीचका स्थान। ಅರ್ಧ ಮಾರ್ಗ, ಮಧ್ಯಸ್ಥಾನ.

**अधमरा**–वि. मृतप्राय। ಮೃತಪ್ರಾಯ, ಮರಣಾಸನ್ನ, ಅರ್ಧ ಸತ್ತ.

**अधमुआ**– वि. दे 'अधमरा'।

**अधर**–पु नीचेका ओठ, अंतरिक्ष। ಕೆಳ ದುಟಿ, ಅಂತರಿಕ್ಷ, ಆಕಾಶ. क्रिवि अंतरिक्षमें। ಆಕಾಶದಲ್ಲಿ, ನಡುವೆ.

**अधरज**– पु. ओंठो की लाली। ತುಟಿಗಳ ಕೆಂಪು, ತಾಂಬೂಲರಾಗ.

**अधारी**– स्त्री. आश्रय, मुसाफिरी थैला, साधुओंके आश्रयकी लकड़ी। ಆಧಾರ, ಆಶ್ರಯ,ಪ್ರವಾಸದ ಚೀಲ,Tಆಕಾರದ ಸಾಧುಗಳ ಆಧಾರದ ಕೋಲು, ಯೋಗದಂಡ.

**अधिकता**– स्त्री वहुतायत। ಅಧಿಕತೆ, ಹೆಚ್ಚಳ, ವೃದ್ಧಿ.

**अधिकांश**– पु अधिक भाग। ಹೆಚ್ಚು ಭಾಗ, ಅಧಿಕಾಂಶ. क्रिवि ज्यादातर। ಹೆಚ್ಚಾಗಿ.

**अधिकाई**– स्त्री दे 'अधिकता'।

**अधिकाना**–अक्रि अधिक होना, वढ़ना। ಹೆಚ್ಚಾಗು, ಬೆಳೆ.

**अधिकार**– पु स्वत्व, पद, संवंध, विपय, योग्यता, प्रकरण, चेष्टा। ಅಧಿಕಾರ, ಬಾಧ್ಯತೆ, ವಶ,ಸ್ವತ್ವ, ಪದ,ಹುದ್ದೆ, ಸಂಬಂಧ, ವಿಷಯ, ಯೋಗ್ಯತೆ, ಪ್ರಕರಣ, ಅಧ್ಯಾಯ, ಪ್ರಯತ್ನ.

**अधिकृत**– वि. अधिकारमें आया हुआ। ಆಧಿಕಾರ ಹೊಂದಿದ, ಅಧಿಕಾರ ದಲ್ಲಿ ಬಂದ.

**अधिनायक**– पु. प्रधान नेता। ಸರ್ವಾಧಿಕಾರಿ, ಮುಖ್ಯ ನಾಯಕ.

**अधिमास**– पु अधिक मास। ಅಧಿಕ ಮಾಸ.

**अधिया**– स्त्री आधा भाग। ಅರ್ಧಭಾಗ.

**अधियाना**– सक्रि आधा करना। ಅರ್ಧ ಮಾಡು, ಎರಡು ಸರಿಯಾದ ಭಾಗ ಮಾಡು.

**अधियार**– पु· आधा हिस्सा, आधेका मालिक। ಅರ್ಧ ಪಾಲು, ಅರ್ಧ ಪಾಲಿನವ.

**अधियारी**– स्त्री आधा हिस्सा। ಅರ್ಧ

ಭಾಗ, ಅರ್ಧ ಪಾಲು.

**अधीन**– वि परवश, आश्रित। ಅಧೀನ, ಪರಾಧೀನ, ಆಶ್ರಿತ, ವಿನೀತ पु गुलाम, सेवक। ಗುಲಾಮ, ಆಳು, ಸೇವಕ.

**अधीनता**– स्त्री परतंत्रता, दीनता। ಪಾರತಂತ್ರ್ಯ, ಪರಾಧೀನತೆ, ನಮ್ರತೆ, ದೈನ್ಯ.

**अधीर**– वि घबराया हुआ, कातर, उतावला। ವ್ಯಾಕುಲನಾದ, ಗಾಬರಿಯಾದ, ಅಂಜಿದ, ಆತುರನಾದ, ಅಸ್ಥಿರ.

**अधुना**– क्रिवि अभी, संप्रति। ಈಗಲೇ, ಸದ್ಯಕ್ಕೆ, ನಾಂಪ್ರತ, ಈ ದಿನಗಳಲ್ಲಿ

**अधूरा**– वि अपूर्ण, अस्पष्ट। ಅಪೂರ್ಣ, ಮುಗಿಯದ, ಅಸ್ಪಷ್ಟ, ಅರ್ಧ

**अधेड़**– वि उतरती उम्र का। ಇಳಿಪ್ರಾಯದ, ನಡುಪ್ರಾಯದ.

**अधेला**– पु आधा पैसा। ಅದ್ದೇಲಿ.

**अधेली**– स्त्री अठन्नी। ಎಂಟಾಣೆಯ ನಾಣ್ಯ

**अध्ययन**– पु पढाई, अभ्यास। ಓದು, ಅಭ್ಯಾಸ.

**अध्यवसाय**– पु लगातार परिश्रम, उत्साह, उद्योग, निश्चय। ಸತತ ಪರಿಶ್ರಮ, ಸತತೋದ್ಯೋಗ, ಜಿಗುಟುತನ, ಉತ್ಸಾಹ, ನಿಶ್ಚಯ.

**अध्यवसायी**– वि परिश्रमी, उद्योगी। ಸತತೋದ್ಯೋಗಿ, ಪರಿಶ್ರಮ ಮಾಡುವವ, ಉತ್ಸಾಹಿ

**अध्यापक**– पु पढानेवाला, शिक्षक। ಓದಿಸುವವ, ಕಲಿಸುವವ, ಶಿಕ್ಷಕ, ಮಾಸ್ತರ, ಗುರು.

**अध्यापन**– पु पढाना। ಓದಿಸುವದು, ಕಲಿಸುವದು, ಶಿಕ್ಷಣ.

**अध्यापिका**– स्त्री. शिक्षिका। ಶಿಕ್ಷಕಿ, ಮಾಸ್ತರತಿ, ಉಪಾಧ್ಯಾಯಿನಿ.

**अनअहिवात**– पु वैधव्य। ವೈಧವ್ಯ.

**अनइस**– पु बुराई। ಕೆಡಕು, ಹಾನಿ, वि बुरा। ಕೆಟ್ಟ, ಹಾನಿಕಾರಕ.

**अनक**– पु डंका, नगाडा। ನಗಾರಿ, ಮೃದಂಗ.

**अनकना**– सकि छिपकर सुनना। ಕಿವಿಗೊಟ್ಟು ಕೇಳು, ಗುಪ್ತವಾಗಿ ಕೇಳು.

**अनकरीब**– क्रिवि लगभग, प्राय। ಸುಮಾರು, ಪ್ರಾಯಃ.

**अनकहा**– वि अकथित। ಹೇಳದ.

**अनख**– पु क्रोध, चिढ, दुःख, ईर्ष्या, ढिठौना। ಕ್ರೋಧ, ಸಿಟ್ಟು, ಕೋಪ, ದುಃಖ, ಈರ್ಷೆ, ಕಾಡಿಗೆಯ ಬೊಟ್ಟು. वि विना नख का। ಉಗುರಿಲ್ಲದ

**अनखना, अनखाना**– अकि क्रोध करना। ಸಿಟ್ಟಾಗು, ಮನಸ್ಸಿನಲ್ಲಿ ಕುದಿ

**अनखाहट**–स्त्री नाराजगी, चिढ। ಸಿಟ್ಟು, ಅಪ್ರಸನ್ನತೆ, ರೋಷ

**अनखी**– वि क्रोधी। ಸಿಟ್ಟಿನ, ಸಿಟ್ಟಿಗೇಳುವ, ಕೋಪಿಷ್ಠ.

**अनखीखौंहा, अनखौंहा**– वि क्रोधित, जल्द चिढ जानेवाला। ಕ್ರೋಧಿತ,

ಚೇಗನೆ ಸಿಟ್ಟಿಗೇಳುವ, ಮೂಗಿನ ಮೇಲೆ ಸಿಟ್ಟುಳ್ಳ.

**अनगढ़**–वि विना गढा हुआ,निराकार, कुडौल। ತಯಾರಾಗದ, ಆಕಾರ ಹೀನ, ನಿರಾಕಾರ, ಅಂದಗೆಟ್ಟ, ವಿಲಕ್ಷಣ, ಅವ್ಯವಸ್ಥಿತ.

**अनगन, अनगना, अनगनिया**– वि बेशुमार,बहुत। ಅಸಂಖ್ಯ,ಅಗಣಿತ, ಹೇರಳ, ಬಹಳ.

**अनगवना,अनगाना**– अक्रि देर करना। ತಡಮಾಡು, ಬೇಕೆಂತಲೇ ಮುಂದೆ ನಾಗದಿರು.

**अनगिन, अनगिनत, अनगिना**– वि. दे 'अनगन'।

**अनघडी, अनघरी**– स्त्री कुसमय। ಕೆಟ್ಟ ವೇಳೆ, ಕುಸಮಯ.

**अनघोर**–पु अंधेर, अन्याय। ಕತ್ತಲೆ, ಅನ್ಯಾಯ.

**अनघोरी**– स्त्री अचानक। ಒಮ್ಮಿಂದೊಮ್ಮೆ, ಸುಮ್ಮನೆ, ಅಕಸ್ಮಾತ್ತಾಗಿ.

**अनचहा**–वि अवाञ्छित। ಅವಾಂಛಿತ, ಬೇಡಾದ.

**अनचाहत**– वि. निर्मोही। ಅನಾಸಕ್ತ, ನಿರ್ಮೋಹಿ.

**अनजान**– वि. अपरिचित, अज्ञानी। ಅಪರಿಚಿತ, ತಿಳಿಯದ, ಅಜ್ಞಾನಿ, ಅಬೋಧ.

**अनट**–पु अन्याय,अनीति। ಅನ್ಯಾಯ, ಅನೀತಿ,ಅತ್ಯಾಚಾರ.

**अनत**– क्रिवि. अन्यत्र। ಅನ್ಯತ್ರ, ಎರಡನೆಯ ಕಡೆಗೆ. वि अनम्र, सीधा, दूसरा। ಬಾಗದ, ಸರಳ, ಎರಡನೆಯ.

**अनदेखा**– वि बिना देखा हुआ। ನೋಡದ.

**अनधिकारी**– वि अयोग्य, अधिकार-हीन। ಅಯೋಗ್ಯ, ಅಧಿಕಾರಹೀನ

**अनन्नास**– पु एक फल। ಅನಾನಸು ಹಣ್ಣು.

**अनन्य**– वि एकनिष्ठ। ಏಕನಿಷ್ಠ, ಸ್ವಾಮಿಭಕ್ತ.

**अनन्वित**– वि असम्बद्ध। ಅಸಂಬದ್ಧ, ಅಯೋಗ್ಯ.

**अनपच**– पु अजीर्ण। ಅಜೀರ್ಣ, ಅಪಚನ.

**अनपढ़**– वि बेपढा, अशिक्षित। ಓದದವ, ಓದುಬರಹ ಬಾರದವ, ನಿರಕ್ಷರಿ.

**अनपायिनी**–वि स्त्री एकनिष्ठ, अचल, स्थिर, दुर्लभ। ಏಕನಿಷ್ಠ, ಅಚಲ, ದೃಢ, ಸ್ಥಿರ, ದುರ್ಲಭ.

**अनपेक्षित**– वि जिसकी चाह न हो। ಅವಾಂಛಿತ, ಇಚ್ಛೆಯಿಲ್ಲದ.

**अनबन**– स्त्री बिगड, झगडा, वैर। ಕೆಡಕು, ವಿರೋಧ, ವೈಮನಸ್ಯ.

**अनबूझ**–वि अज्ञानी, गवार। ಅಜ್ಞಾನಿ, ತಿಳಿಯದವ, ಹಳ್ಳಿಗಾಡ.

**अनबोल,अनबोला**– वि गूगा, न बोलने वाला। ಮೂಕ, ಮಾತನಾಡಲಾರದ, ಗುಮ್ಮನಗುಸಕ.

**अनबोलता**– वि गूंगा, न बोलनेवाला (पशु)। ಮೂಕ, ಮಾತನಾಡಲಾರದ (ಪಶು).

**अनब्याहा**– वि अविवाहित । ಅವಿವಾಹಿತ, ಮದುವೆಯಾಗದ.

**अनभल**– पु. अहित, हानि। ಅಹಿತ, ಕೆಡಕು, ಅಮಂಗಲ, ಹಾನಿ.

**अनभला**–वि बुरा, निन्द्य। ಕೆಟ್ಟ, ಹಾನಿಕಾರಕ, ನಿಂದ್ಯ, ಕುತ್ಸಿತ.

**अनभाय, अनभावता**– वि अप्रिय । ಸೇರದ, ಅಪ್ರಿಯ.

**अनभिज्ञ**–वि अनजान; मूर्ख । ಅಪರಿಚಿತ, ಮೂರ್ಖ, ಅಜ್ಞಾನಿ.

**अनभ्यस्त**– वि अभ्यास रहित। ಅಭ್ಯಾಸವಿಲ್ಲದ, ಅಭ್ಯಾಸ ಮಾಡದ.

**अनमन, अनमना**– वि. उदास, सुस्त, निरुत्साहित। ಉದಾಸ, ಖಿನ್ನ, ವೈಗಳ್ಳ, ನಿರುತ್ಸಾಹಿತ.

**अनमिल, अनमिलत**– वि. बेमेल,अलग, निर्लिप्त, शुद्ध। ವಿಸಂಗತ, ಕೂಡದ, ಬೇರೆ, ನಿರ್ಲಿಪ್ತ, ಶುದ್ಧ.

**अनमिलता**– वि अप्राप्य। ಅಪ್ರಾಪ್ಯ, ಸಿಗದ.

**अनमेल**–वि बेजोड, विशुद्ध। ಕೂಡದ, ಶುದ್ಧ.

**अनमोल**– वि अमूल्य, सुंदर। ಅಮೂಲ್ಯವಾದ, ಬಹು ಬೆಲೆಯ, ಸುಂದರ.

**अनरथ**–पु अनर्थ। ಅನರ್ಥ, ಅಯೋಗ್ಯ ಮಾರ್ಗದಿಂದ ಗಳಿಸಿದ ಹಣ.

**अनरस**–पु रसहीनता, दुःख, क्रोध। ರಸಹೀನತೆ, ದುಃಖ, ಕ್ರೋಧ, ಉದಾಸೀನತೆ.

**अनरसना**– आक्रि. उदास होना। ಉದಾಸೀನನಾಗು, ದುಃಖಿತನಾಗು

**अनरसा**– वि उदास, अस्वस्थ। ಉದಾಸ, ಖಿನ್ನ, ಅಸ್ವಸ್ಥ, ಅಶಾಂತ.

**अनरीत, अनरीति**– स्त्री कुरीति,अन्धेर। ದುರ್ನೀತಿ, ಕೆಟ್ಟ ನಡತೆ, ಅನುಚಿತ ವ್ಯವಹಾರ, ಅತ್ಯಾಚಾರ.

**अनरूप**–वि असमान, कुरूप।ವಿಸಂಗತ, ಅಸಮಾನ, ಕುರೂಪಿ

**अनवाँसना**– सक्रि नए वर्तनको प्रथम बार काममें लाना। ಹೊಸ ಪಾತ್ರೆಗಳನ್ನು ಮೊದಲುಬಾರಿ ಉಪಯೋಗಿಸು, ಬಳಸು.

**अनवाँसा**– पु कटी हुई फसलका एक मूठा। ಕೊಯ್ದು ಬೆಳೆಯ ಸಿವುಡು

**अनशन**– पु. उपवास। ಉಪವಾಸ.

**अनसुना**–वि बेसुना। ಕೇಳದ, ಅಶ್ರುತ.

**अनहित**– पु बुराई, शत्रु। ಅಹಿತ, ಹಾನಿ, ಕೆಡಕು, ಶತ್ರು.

**अनहितू**– वि अशुभ चाहनेवाला। ಕೆಟ್ಟದನ್ನು ಬಯಸುವವ.

**अनहोता**–वि दरिद्र, असंभव,अलौकिक। ಬಡವ, ಅಸಂಭವ, ಅಸಾಧಾರಣ, ಅಲೌಕಿಕ.

**अनहोनी**– वि स्त्री असंभव, अलौकिक। ಅಸಂಭವ, ಅಸಾಧಾರಣ. स्त्री. न होनेवाली बात। ಅಸಂಭವವಾದ ಮಾತು

**अनाकनी,अनाकानी**– स्त्री सुनी अनसुनी करना, टालमटोल। ಅಲಕ್ಷ್ಯ, ಲಕ್ಷ್ಯಗೊಡದಿರುವದು, ಕೇಳಿದರೂ ಕೇಳದಂತೆ ನಟಿಸುವದು, ನೆವ ಹೇಳುವದು.

**अनाखर**– वि कुरूप, निरक्षर। ಕುರೂಪಿ, ಅಂದಗೆಟ್ಟ, ನಿರಕ್ಷರ, ಮೂರ್ಖ.

**अनाज**–पु अन्न, धान्य। ಧಾನ್ಯ, ಕಾಳು

**अनाडी**– वि नासमझ, गॅवार। ತಿಳುವಳಿಕೆಯಿಲ್ಲದ, ಮೂರ್ಖ, ಹಳ್ಳಿಗಾಡ, ಅನನುಭವಿಕ, ನಿರಕ್ಷರಿ.

**अनादि**– पु जिस का आदि न हो, ब्रह्म, ईश्वर। ಆದಿಯಿಲ್ಲದ, ಬ್ರಹ್ಮ, ಈಶ್ವರ.

**अनाना**– सक्रि लाना, मागना। ತರು, ಬೇಡಿಸು, ತರಿಸು.

**अनापशनाप**– पु निरर्थक वकवाद। ವ್ಯರ್ಥವಾದ ಮಾತು, ಬಡಬಡಿಕೆ, ಅಸಂಬದ್ಧ ಮಾತು, ತಲೆಹರಟೆ.

**अनार**– पु एक फल। ದಾಳಿಂಬ.

**अनारी**– वि अनार के रंगका, अनाडी, मूर्ख। ದಾಳಿಂಬದ ಬಣ್ಣದ, ಕೆಂಪು ಬಣ್ಣದ, ಹೆಡ್ಡ, ಹಳ್ಳಿಗಾಡ, ಮೂರ್ಖ.

**अनासर**– पु. मूलतत्व। ಮೂಲ ತತ್ವ.

**अनाहत**– वि जिसे चोट न लगी हो। ಪೆಟ್ಟು ತಗಲದ, ಗಾಯವಾಗದ.

**अनिमिष, अनिमेष**– वि. स्थिर दृष्टि। ಸ್ಥಿರ ದೃಷ್ಟಿಯ, ರೆಪ್ಪೆ ಹೊಡೆಯದ. पु. देवता, मछली। ದೇವತೆ, ಮೀನ. क्रिवि. एकटक। ಸ್ಥಿರದೃಷ್ಟಿಯಿಂದ, ನೆಟ್ಟ ನೋಟದಿಂದ.

**अनियंत्रित**– वि विना रोक टोक का। ನಿಯಂತ್ರಣವಿಲ್ಲದ, ಪ್ರತಿಬಂಧವಿಲ್ಲದ, ಸ್ವೇಚ್ಛೆಯ.

**अनियमित**– वि. अव्यवस्थित, अनिश्चित। ಅವ್ಯವಸ್ಥಿತ, ನಿಯಮರಹಿತ, ಅನಿಶ್ಚಿತ.

**अनियारा**– वि नुकीला, तीखा, वहादुर, नीच। ದೊಡ್ಡ ದೊಡ್ಡ ಮುಳ್ಳುಗಳುಳ್ಳ, ಚೂಪಾದ, ತೀಕ್ಷ್ಣವಾದ, ವೀರ, ನೀಚ.

**अनिरुद्ध**–वि. वेरोक। ಅಡೆತಡೆಯಿಲ್ಲದ. पु श्रीकृष्ण के पौत्र। ಶ್ರೀಕೃಷ್ಣನ ಮೊಮ್ಮಗ.

**अनिल**–पु वायु, हवा। ವಾಯು, ಗಾಳಿ, ಹವೆ.

**अनिवार, अनिवार्य**– वि न टलनेवाला। ತಪ್ಪದ, ಕಡ್ಡಾಯದ, ಅನಿವಾರ್ಯ, ನಿವಾರಿಸಲಾಗದ.

**अनी**– स्त्री नोक, सिरा, सेना, समूह। ತುದಿ, ಮೊನೆ, ಸೈನ್ಯ, ಗುಂಪು

**अनीक**– पु. सेना, दल, युद्ध। ಸೈನ್ಯ, ಗುಂಪು, ದಲ, ಯುದ್ಧ. वि वुरा। ಕೆಟ್ಟ.

**अनीठ**–वि. वुरा, अप्रिय, अनिष्ट। ಕೆಟ್ಟ, ಅಪ್ರಿಯ, ಅನಿಷ್ಟಕಾರಕ.

**अनीश, अनीस**– वि. अनाथ, असहाय। ಅನಾಥ, ಅಸಹಾಯ. पु. माया। ಮಾಯೆ.

**अनीस**– वि. दे 'अनीश'। पु. दोस्त।

ಮಿತ್ರ, ಗೆಳೆಯ, ಪ್ರಿಯ

**अनीह**– वि इच्छाविहीन । ಇಚ್ಛೆಯಿಲ್ಲದ, ನಿರೀಚ್ಛ.

**अनुकम्पा**– स्त्री कृपा, दया। ಕೃಪೆ, ದಯೆ, ಸಹಾನುಭೂತಿ.

**अनुगामी**– वि आज्ञाकारी, अनुयायी । ಅನುಚರ, ಆಜ್ಞಾಧಾರಕ, ಅನುಯಾಯಿ.

**अनुग्रह**– पु दया, कृपा । ದಯೆ, ಕೃಪೆ, ಅನುಗ್ರಹ.

**अनुदित**– वि अनुवादित। ಭಾಷಾಂತರಿಸಿದ, ಉದ್ಧೃತ.

**अनुनय**– पु विनय, पार्थना। ವಿನಯ, ವಿನಂತಿ, ಪ್ರಾರ್ಥನೆ.

**अनुपस्थित**– वि. गैर हाजिर। ಗೈರುಹಾಜರಾದ, ಇಲ್ಲದಿರುವ.

**अनुपस्थिति**– स्त्री गैर मौजूदगी। ಗೈರುಹಾಜರಿ, ಅನುಪಸ್ಥಿತಿ.

**अनुपात**– समानभाव, त्रैराशिक क्रिया। ಪ್ರಮಾಣ, ತ್ರೈರಾಶಿಕ.

**अनुभूति**– स्त्री अनुभव। ಅನುಭವ.

**अनुमति**– स्त्री. आज्ञा, सम्मति। ಆಜ್ಞೆ, ಸಮ್ಮತಿ, ಒಪ್ಪಿಗೆ.

**अनुमानना**– सक्रि. अनुमान करना। ಅನುಮಾನ ಮಾಡು, ತರ್ಕಿಸು, ಕಲ್ಪನೆ ಮಾಡು, ಊಹಿಸು.

**अनुमोदन**– पु प्रसन्नता दिखलाना, समर्थन । ಸಂತೋಷ ಪಡುವಿಕೆ, ಸಮರ್ಥನೆ.

**अनुरोध**– पु आग्रह, प्रार्थना, प्रेरणा, बाधा। ಆಗ್ರಹ, ಪ್ರಾರ್ಥನೆ, ಪ್ರೇರಣೆ, ಉತ್ತೇಜನ, ಬಾಧೆ, ಅಡ್ಡಿ.

**अनुवाद**– पु तर्जुमा, पुनरुक्ति। ಭಾಷಾಂತರ, ಪುನರುಕ್ತಿ.

**अनुशासन**–पु आज्ञा, उपदेश, नियंत्रण, नियमन। ಆಜ್ಞೆ, ಉಪದೇಶ, ಸೂಚನೆ, ನಿಯಂತ್ರಣ, ಶಿಸ್ತು, ಆಳಿಕೆ.

**अनुसंधान**– पु खोज, प्रयत्न। ಶೋಧ, ಪ್ರಯತ್ನ.

**अनुसारना**–सक्रि अनुगमन करना, कोई कार्य करना। ಅನುಸರಿಸು, ಅನುಕರಣ ಮಾಡು, ಕಾರ್ಯ ಮಾಡು ಆಚರಿಸು.

**अनुसारी**– वि अनुसरण करनेवाला। ಅನುಕರಣ ಮಾಡುವವ, ಅನುಸರಿಸುವವ

**अनुसाल**– पु दुःख, पीडा। ದುಃಖ, ವೇದನೆ, ತ್ರಾಸ, ಪೀಡೆ

**अनुहार**–वि समान, अनुसार, उपयुक्त। ಸಮಾನ, ಅನುಸಾರ, ಅನುಕೂಲ, ಉಪಯುಕ್ತ स्त्री प्रकार, रूप, सादृश्य। ಪ್ರಕಾರ, ಆಕೃತಿ, ಸಮಾನತೆ, ಸಾದೃಶ್ಯ

**अनुहारि**– वि सदृश, उपयुक्त। ಸಮಾನ, ಸದೃಶ, ಉಪಯುಕ್ತ

**अनुहारी**– वि अनुकरण करनेवाला। ಅನುಕರಣ ಮಾಡುವವ, ಅನುಯಾಯಿ.

**अनूठा**– वि अनोखा। ಅದ್ಭುತ, ಉತ್ಕೃಷ್ಟ, ವಿಚಿತ್ರ.

**अनूढ–** पु अविवाहित आदमी जो अन्य स्त्रीसे प्रेम करे। ಪರಸ್ತ್ರೀಯರ ಮೇಲೆ ಪ್ರೇಮ ಮಾಡುವ ಅವಿವಾಹಿತ ಮನುಷ್ಯ.

**अनूढा–** स्त्री अविवाहिता स्त्री जो दूसरेसे प्रेम करे । ಪರಪುರುಷರ ಮೇಲೆ ಪ್ರೇಮ ಮಾಡುವ ಅವಿವಾಹಿತ ಸ್ತ್ರೀ.

**अनूप–** वि निरुपम, सुंदर। ನಿರುಪಮ, ಅದ್ವಿತೀಯ, ಸುಂದರ. पु सजल देश। ನೀರು ಇರುವ ದೇಶ.

**अनेरा–** वि झूठा, निकम्मा, ऊधमी, व्यर्थ। ಸುಳ್ಳು, ನಿಷ್ಪ್ರಯೋಜಕ, ಉಪದ್ರವಿ, ವ್ಯರ್ಥ.

**अनेस–** पु दे. 'अनइस'।

**अनैसना–**अक्रि रूठना या बुरा मानना। ಸಿಟ್ಟಾಗು, ಕೆಡಕೆನಿಸಿಕೊಳ್ಳು, ಮನಸ್ಸಿಗೆ ಹತ್ತು.

**अनैस–** वि. दे. 'अनइस'।

**अनैसे–** क्रिवि. बुरे भावसे। ದುಷ್ಟ ಹೇತುವಿನಿಂದ, ಕೆಟ್ಟ ವಿಚಾರದಿಂದ.

**अनैहा–** पु. उत्पात। ಉತ್ಪಾತ, ಉಪದ್ರವ, ಉಪದ್ವ್ಯಾಪ.

**अनोखा–** वि. निराला, विचित्र, नया, सुंदर। ವಿಚಿತ್ರ, ಅದ್ಭುತ, ವಿಲಕ್ಷಣ, ಅಸಾಧಾರಣ, ನೂತನ, ಸುಂದರ, ಉತ್ಕೃಷ್ಟ.

**अन्न–** पु. अनाज, धान्य, पकाया हुआ अन्न, जल, पृथ्वी। ಧಾನ್ಯ, ಕಾಳು, ಅಟ್ಟ ಅನ್ನ, ನೀರು, ಪೃಥ್ವಿ.

**अन्य–** वि दूसरा, गैर । ಎರಡನೆಯ, ಭಿನ್ನ, ಪರಕೀಯ.

**अन्याय–** वि. उलटा, असत्य, मिथ्या। ವಿರುದ್ಧ, ಅಸತ್ಯ, ಬೇರೆ ವಿಧವಾದ

**अन्यमनस्क–** वि उदास। ಉದಾಸೀನ, ಮನಸ್ಸಿಲ್ಲದ.

**अन्वेषक, अन्वेषी–** वि. खोजनेवाला। ಶೋಧಕ, ಶೋಧ ಮಾಡುವವ.

**अन्वेषण, अन्वेषन–** पु खोज, अनुसंधान। ಶೋಧ, ಗೊತ್ತು ಹಚ್ಚುವಿಕೆ, ಹುಡುಕುವಿಕೆ.

**अन्हवाना–** सक्रि नहलाना। ಜಳಕಕ್ಕೆ ಹಾಕು, ಸ್ನಾನ ಮಾಡಿಸು.

**अन्हाना–** अक्रि. नहाना। ಸ್ನಾನ ಮಾಡು, ಜಳಕ ಮಾಡು.

**अन्होरी–** स्त्री. दे 'अम्हौरी'।

**अपकाजी–** वि स्वार्थी। ಸ್ವಾರ್ಥಿ, ತನ್ನದನ್ನೇ ಬಗೆಯುವವ.

**अपच–** पु. अजीर्ण। ಅಜೀರ್ಣ, ಅಪಚನ.

**अपछरा–** स्त्री. अप्सरा। ಅಪ್ಸರೆ.

**अपजस–** पु. अपयश। ಅಪಯಶ, ಅಪಕೀರ್ತಿ.

**अपटी–** स्त्री. तंबू, कनात। ಡೇರೆ, ಮಂಟಪ.

**अपडर–** पु शंका, भय। ಸಂದೇಹ, ಭಯ, ಭೀತಿ,

**अपडरना–** अक्रि शंकित होना, भयभीत होना। ಸಂಶಯ ಬರು, ಸಂದೇಹವಾಗು, ಅಂಜು.

**अपढ**– वि अनपढ, मूर्ख। ನಿರಕ್ಷರಿ,ಕಲಿಯದವ, ಓದದವ, ಮೂರ್ಖ

**अपत**– वि विना पत्तोंका, नगा, नीच। ಎಲೆಗಳಿಲ್ಲದ, ವರ್ಣಹೀನ, ಬತ್ತಲೆಯಾದ,ನಾಚಿಕೆಗೇಡಿ, ನೀಚ,ಅಪ್ರತಿಷ್ಠಿತ.

**अपतई**– स्त्री निर्लज्जता, ढिठाई, चंचलता। ನಿರ್ಲಜ್ಜತೆ, ನಾಚಿಕೆಗೇಡಿತನ, ದುಷ್ಟತನ.

**अपदस्त**– वि स्थानभ्रष्ट,अपमानित। ಸ್ಥಾನಭ್ರಷ್ಟ, ಅಪಮಾನಿತ.

**अपनपो, अपनपौ**– पु ज्ञान, अपनापन, आत्मगौरव। ಜ್ಞಾನ, ಆತ್ಮಜ್ಞಾನ, ತನ್ನತನ, ಆತ್ಮಗೌರವ, ಆತ್ಮಾಭಿಮಾನ.

**अपना**– सर्व निजका। ತನ್ನ,ಸ್ವಂತದ.

**—सा मुंह लेकर रह जाना** = लज्जित होना। ಲಜ್ಜಿತನಾಗು, ಅಪಮಾನಿತನಾಗು.

**—सा करना** =अपनी शक्ति के अनुसार काम करना। ತನ್ನ ಶಕ್ತಿ ನೋಡಿ ಕೆಲಸ ಮಾಡು.

**अपनाना**–साक्रि अपना वना लेना,वशमें करना, सहारा देना । ತನ್ನದನ್ನಾಗಿ ಮಾಡಿಕೊಳ್ಳು, ಸ್ವೀಕರಿಸು, ವಶಮಾಡಿಕೊಳ್ಳು, ಆಶ್ರಯ ಕೊಡು.

**अपने**– सर्व निजका, खुद। ಸ್ವಂತದ, ಸ್ವಂತಃ.

**—दिनोंको रोना** = कष्टपूर्ण जीवन विताना। ಕಷ್ಟ ಪೂರ್ಣವಾದ ಜೀವನ ಕಳೆ.

**अपरस**–वि अलग, न छूने योग्य।ಬೇರೆ, ಮುಟ್ಟಲಯೋಗ್ಯವಾದ. पु एक चर्म रोग। ಒಂದು ಚರ್ಮರೋಗ.

**अपरिहार्य**– वि अनिवार्य। ಅನಿವಾರ್ಯ, ತಪ್ಪಿಸಲಾಗದ.

**अपवर्ग**–पु मोक्ष, दान,त्याग।ಮೋಕ್ಷ, ದಾನ, ತ್ಯಾಗ.

**अपवश**– वि अपने वशका, स्वाधीन। ತನ್ನ ವಶದಲ್ಲಿದ್ದ, ಸ್ವಾಧೀನ

**अपसगुन**– पु अपशकुन। ಅಪಶಕುನ

**अपसना, अपसवना**– साक्रि सरकना, चला जाना। ಮಗ್ಗಲಿಗೆ ಸರಿ, ಜಾರಿಕೊಳ್ಳು, ಹೋಗಿ ಬಿಡು, ತಪ್ಪಿಸು

**अपसोस**– पु दुःख, चिंता। ದುಃಖ, ಚಿಂತೆ, ಪಶ್ಚಾತ್ತಾಪ.

**अपाहिज**– वि अंगभंग, आलसी, असमर्थ। ಅವಯವ ಹೀನ, ಕುಂಟ, ಹೆಳವ, ಆಲಸಿ, ಮೈಗಳ್ಳ, ಅಸಮರ್ಥ.

**अपीलांट**– पु निवेदन करनेवाला। ಅರ್ಜದಾರ, ಅರ್ಜಿ ಮಾಡುವವ

**अपूठना**–वि नष्ट करना। ನಾಶಮಾಡು, ಹಾಳುಮಾಡು.

**अपूत**– वि अपवित्र, पुत्रहीन। ಅಪವಿತ್ರ,ಮಕ್ಕಳಿಲ್ಲದ पु बुरा लड़का। ಕೆಟ್ಟ ಹುಡುಗ.

**अपेक्षा**– स्त्री. इच्छा,आवश्यकता,तुलना। ಇಚ್ಛೆ, ಅಭಿಲಾಷೆ, ಆವಶ್ಯಕತೆ. ತುಲನೆ, ಹೋಲಿಕೆ.

**अप्रैल**–पु एक अँगरेजी महीना। ಎಪ್ರಿಲ ತಿಂಗಳು.

**अफ़ई**– पु काला नाग। ಕೃಷ್ಣ ಸರ್ಪ.

**अफकार**– स्त्री. चिता। ಚಿಂತೆ. 'फिक्र' ಶಬ್ದದ ಬಹುವಚನ.

**अफ़गन**– वि गिरानेवाला। ಪರಾಭವ ಗೊಳಿಸುವವ, ಸೋಲಿಸುವವ, ಕೆಡಹುವವ.

**अफ़ज़ाइश**– स्त्री वढोतरी, तरक्की। ವೃದ್ಧಿ, ಹೆಚ್ಚಳ, ಉನ್ನತಿ

**अफनाना**–अक्रि उवलना, क्रुद्ध होना। ಕುದಿ, ಸಿಟ್ಟಾಗು.

**अफयून**– स्त्री. अफीम। ಅಫು,ಅಫೀಮು.

**अफरना, अफराना**– अक्रि. अघाना, पेट भर भोजन करना, पेट फूलना। ಆಕಂಠ ಊಟ ಮಾಡು, ತೃಪ್ತನಾಗು,ಹೊಟ್ಟೆತುಂಬ ಊಟ ಮಾಡು, ಹೊಟ್ಟೆ ಉಬ್ಬು.

**अफरा**– पु. अजीर्ण या वायु विकारसे पेटका फूलना। ಅಜೀರ್ಣ ಅಥವಾ ವಾತಿನಿಂದ ಹೊಟ್ಟೆಯುಬ್ಬುವದು.

**अफ़राना**– अक्रि दे 'अफरना'।

**अफ़लातून**– पु यूनान का एक प्रसिद्ध दार्शनिक। ಗ್ರೀಕ ತತ್ವಜ್ಞಾನಿ 'ಪ್ಲೇಟೋ'.

**अफवाह**– स्त्री. उड़ती खबर। ಲೋಕ ವಾರ್ತೆ, ವದಂತಿ, ಹರಟೆ

**अफसर**– पु हाकिम। ಅಧಿಕಾರಿ, ಆಫೀಸರ, ಉದ್ಯೋಗಸ್ತ, ಕಾಮದಾರ

**अफसरी**– स्त्री शासन, अधिकार। ಶಾಸನ, ಆಳಿಕೆ, ಅಧಿಕಾರ.

**अफसाना**– पु किस्सा, कहानी। ಕತೆ, ವೃತ್ತಾಂತ.

**अफसुरदा, अफसुर्दा**– वि. दुःखित, मुरझाया हुआ। ಖಿನ್ನ, ದುಃಖಿತ, ಬಾಡಿದ.

**अफसोस**– पु रंज, खेद, पश्चात्ताप। ದುಃಖ, ಖೇದ, ವಿಷಾದ, ಪಶ್ಚಾತ್ತಾಪ.

**अफ़ीम**– स्त्री. एक मादक वस्तु। ಅಫೀಮು, ಅಫು.

**अफीमची, अफ़ीमी**– पु अफीम खानेवाला। ಅಫು ತಿನ್ನುವವ.

**अब**– क्रिवि. इस समय। ಈಗ,ಸದ್ಯಕ್ಕೆ.

**अबकी**– क्रिवि. अब, इस समय। ಈಗ, ಈ ವೇಳೆಗೆ, ಈಸಾರೆ.

**अबखरा**– पु. पानीकी भाप। ಉಗಿ.

**अबतर**– वि. दुर्दशाको प्राप्त, बुरा। ದುರ್ದಶೆಯ, ಕೆಟ್ಟ, ಹಾಳಾದ.

**अबतरी**–स्त्री. दुर्दशा, विगाड़। ಕೆಡಕು, ದುರ್ದಶೆ, ಅವ್ಯವಸ್ಥೆ, ಹಾಳು.

**अबधू**– वि. मूर्ख। ಮೂರ್ಖ, ತಿಳಿಯದವ. पु. संन्यासी। ಸನ್ಯಾಸಿ.

**अबरक, अबरख**– पु एक सफेद धातु। ಅಭ್ರಕ.

**अबरन**– वि. अवर्णनीय, विना रूप रंगका। ಅವರ್ಣನೀಯ,ರಂಗರೂಪ ವಿಹೀನ.

**अबरस**– पु. घोडेका एक रंग। ಕುದುರೆಯ ಒಂದು ವಿಶೇಷ ಪ್ರಕಾರದ

ಬಣ್ಣ (ಕೆಂಪು).

**अबरू, अब्रू**– पु भौं। ಹುಬ್ಬು.

**अबवाब**–पु वह कर जो मालगुजारी पर लगता है। ತೆರಿಗೆಯ ಮೇಲಿನ ಕರ, 'ಸೆಸ್'.

**अबस**–वि बेबस। ಪರತಂತ್ರ,ಪರವಶ. क्रिवि व्यर्थ। ವ್ಯರ್ಥವಾಗಿ.

**अबादान**– भरापुरा। ಉನ್ನತಿಗೇರಿದ, ತುಂಬಿದ.

**अबादानी**– स्त्री समृद्धि। ಸಮೃದ್ಧಿ, ಸಂದಣಿ.

**अबाध, अबाधा**– वि. निर्विघ्न, अपार। ನಿರ್ವಿಘ್ನ, ಅಪರಿಮಿತ, ಅಪಾರ, ಸುಸಂಗತ.

**अबीर**– पु गुलाल। ಗುಲಾಲು.

**अबूझ**– वि नासमझ। ತಿಳಿಯದವ, ತಿಳುವಳಿಕೆಯಿಲ್ಲದವ

**अबे**– अव्य निम्न कोटिके व्यक्तियोके लिये एक संबोधन। ಕಡಿಮೆ ದರ್ಜೆಯ ಜನರನ್ನು ಸಂಬೋಧಿಸುವ ಶಬ್ದ, ಎಲೋ, ಎಲಾ.

—**तबे बोलना**=तिरस्कार सूचक वाक्य बोलना। ಹೀನಾಯವಾಗಿ ಮಾತನಾಡು.

**अबेध**– वि विना विधा, जो छिदा न हो। ಛೇದಿಸದ,ತೂತು ಕೊರೆಯದ.

**अबेर, अबेरा, अबेला**– स्त्री विलम्ब, देरी। ವಿಳಂಬ, ತಡ, ವೇಳೆ.

**अबेश**– वि बहुत। ಬಹಳ.

**अबै**– क्रिवि दे 'अब'।

**अबोध**– वि. मूर्ख, अज्ञानी। ಮೂರ್ಖ, ಅಜ್ಞಾನಿ,ತಿಳಿಯದವ पु अज्ञान। ಅಜ್ಞಾನ.

**अबोल**–वि विना बोले हुए, चुप, अवर्णनीय। ಮಾತಾಡದ, ಮೌನ, ಅವರ್ಣನೀಯ. पु दुर्वचन। ದುರ್ವಚನ, ಅಪಶಬ್ದ. क्रिवि विना बोले हुए। ಮಾತನಾಡದೆ.

**अबोला**–पु दुःख इत्यादिके कारण चुप रहना, मौन। ದುಃಖಾದಿಗಳ ಕಾರಣದಿಂದ ಸುಮ್ಮನಾಗಿರುವದು, ಮೌನ.

**अब्बा, अब्बाजान**– पु पिता। ತಂದೆ, ಅಪ್ಪ. (ತಂದೆಯ ಸಲುವಾಗಿ ಸಂಬೋಧನ ಶಬ್ದ.)

**अब्बास**– पु शेर। ಸಿಂಹ.

**अभर**– वि जिसका ढोना कठिन हो, दुर्वह। ದುಃಸಹ,ದುರ್ವಹ, ಹೊರಲು ಕಠಿಣವಾದ

**अभरन**– पु आभरन। ಆಭರಣ, ಅಲಂಕಾರ. वि अपमानित। ಅವಮಾನ ಹೊಂದಿದ, ಅವಮಾನಿತ.

**अभल**– वि. बुरा, खराब। ಕೆಟ್ಟ, ದೂಷಿತ, ಅಮಂಗಲ

**अभाग**– पु दुर्भाग्य। ದುರ್ಭಾಗ್ಯ,ದುರ್ದೈವ

**अभागा**– वि भाग्यहीन। ಭಾಗ್ಯಹೀನ, ದುರ್ದೈವಿ.

**अभिजात**– वि कुलीन, पूज्य, सुंदर, पंडित। ಕುಲೀನ,ಪೂಜ್ಯ,ಸುಂದರ,

ಶ್ರೇಷ್ಠ, ಪಂಡಿತ.

**अभिदान**– पु नाम, शब्दकोष ।ಹೆಸರು, ಶಬ್ದಕೋಷ.

**अभिनेता**– पु अभिनय करनेवाला, ऐक्टर। ಅಭಿನಯ ಮಾಡುವವ, ನಟ.

**अभिनेत्री**– स्त्री. अभिनय करनेवाली स्त्री। ಅಭಿನಯ ಮಾಡುವವಳು, ನಟಿ, ಅಭಿನೇತ್ರಿ.

**अभिभावक**– वि पराभव करनेवाला, रक्षक। ಗೆಲ್ಲುವವ, ಸೋಲಿಸುವವ, ವಶ ಮಾಡಿಕೊಳ್ಳುವವ, ಪಾಲಕ, ರಕ್ಷಕ.

**अभिभूत**– वि. पराजित, व्याकुल। ಸೋಲಿಸಲ್ಪಟ್ಟ, ವಶವಾದ, ವ್ಯಾಕುಲ.

**अभिमत**– वि वाञ्छित। ಇಚ್ಛಿಸಿದ, ಅನುಕೂಲ, ಅಭೀಷ್ಟ. पु मत, सम्मति, अभिलाषित वस्तु। ಮತ, ಅಭಿಪ್ರಾಯ, ಸಮ್ಮತಿ, ಇಚ್ಛಿಸಿದ ವಸ್ತು.

**अभियान**– पु. जोरदार हमला,प्रस्तान। ದಾಳಿ, ಪ್ರಸ್ಥಾನ.

**अभियुक्त**– वि. प्रतिवादी,जिसपर अभियोग चलाया गया हो। ಪ್ರತಿವಾದಿ, ಅಪಾದಿತ.

**अभियोक्ता**– पु, अभियोग चलानेवाला वादी। ತಪ್ಪು ಹೊರಿಸುವವ,ವಾದಿ.

**अभियोग**– पु मुकद्दमा, अपराधकी योजना, आक्रमण, लगन। ಫಿರ್ಯಾದು, ಖಟ್ಲೆ, ಆಪಾದನೆ, ದಾವೆ, ಅಪರಾಧದ ಯೋಜನೆ,ಆಕ್ರಮಣ, ಪ್ರಯತ್ನ.

**अभिराम**– वि मनोहर। ಸುಂದರ, ಮನೋಹರ पु आनंद। ಆನಂದ.

**अभिवादन**– पु वंदना, स्तुति। ಪ್ರಣಾಮ, ನಮಸ್ಕಾರ, ಸ್ತುತಿ.

**अभिव्यंजन**– पु प्रकट करना। ಅಭಿವ್ಯಕ್ತಿ, ಪ್ರಕಟಿಸುವದು.

**अभिसंधि**– स्त्री धोखा, षड्यत्र ।ಮೋಸ, ಜಾಲ, ಷಡ್ಯಂತ್ರ.

**अभिसारिका**– स्त्री प्रियसे मिलने के लिये निश्चित स्थानपर जानेवाली स्त्री। ಪ್ರಿಯಕರನನ್ನು ನಿರ್ದಿಷ್ಟ ಸ್ಥಾನದಲ್ಲಿ ಭೆಟ್ಟಿಯಾಗಲು ಹೋಗುವ ಸ್ತ್ರೀ.

**अभी**– क्रिवि. इसी समय। ಇದೇ ಈಗ, ಈಗಲೇ.

**अभीक**– वि निर्भय, निडर। ನಿರ್ಭಯ, ನಿಷ್ಠುರ, ಅಂಜಿಕೆ ಇಲ್ಲದ.

**अभीर**– पु. अहीर, एक छन्द। ಗೊಲ್ಲ, ಗವಳಿಗ, ಒಂದು ಛಂದಸ್ಸು.

**अभुआना**– अक्रि. भूतसंचार होना। ಭೂತಸಂಚಾರವಾಗು, ಮೈಯಲ್ಲಿ ಬರು.

**अभेरना**– साक्रि दे ' भिड़ाना '।

**अभेरा**– पु मुटभेड, धक्का। ಯುದ್ಧ, ಜಗಳ, ಅಪ್ಪಳಿಸುವದು, ಟಕ್ಕರ.

**अभ्रंकप**– वि वहुत ऊंचा। ಗಗನ ಚುಂಬಿತ, ಬಹಳ ಎತ್ತರವಾದ.

**अमचूर**–पु सुखाया हुआ कच्चे आमका

चूर। ಮಾವಿನಕಾಯಿಯ ಒಣಗಿಸಿದ ಹೋಳು ಮತ್ತು ಚೂರ್ಣ.

**अमन**– पु शांति, रक्षा। ಶಾಂತಿ,ಆರಾಮ, ನೆಮ್ಮದಿ, ರಕ್ಷಣೆ

**अमर**–वि मृत्युरहित। ಅಮರ,ಮರಣವಿಲ್ಲದ. पु देवता। ದೇವತೆ.

**अमर, अम्र**– पु कार्य,घटना, आज्ञा। ಕೆಲಸ, ಕಾರ್ಯ, ಘಟನೆ, ವಿಧಿ, ಆಜ್ಞೆ, ಆದೇಶ.

**अमरख**– पु क्रोध, रंज। ಸಿಟ್ಟು,ಕ್ರೋಧ, ದುಃಖ.

**अमरसी**– वि. सुनहला। ಬಂಗಾರ ಬಣ್ಣದ, ಸೀಕರಣೆಯ ಬಣ್ಣದ.

**अमराई, अमरैय्या**– स्त्री आमका बाग। ಮಾವಿನ ತೋಪು.

**अमरूत, अमरूद**– पु फल विशेष। ಪೇರಲ ಹಣ್ಣು, ಸೀಬೆ ಹಣ್ಣು, ಪೇರಲ ಗಿಡ.

**अमरौती**– अमृत, संजीवनी। ಅಮೃತ, ಸಂಜೀವನಿ, ಅಮರ ಮಾಡುವ ವಸ್ತು.

**अमल**– वि निर्मल। ನಿರ್ಮಲ, ಸ್ವಚ್ಛ, ನಿರ್ದೋಷ. पु वक्त, समय,प्रभुत्व, शासन,प्रभाव, नशा,कार्य, व्यवहार। ವೇಳೆ, ಸಮಯ,ಪ್ರಭುತ್ವ,ಶಾಸನ, ಪ್ರಯೋಗ, ಪ್ರಭಾವ, ಅಮಲು, ಕಾರ್ಯ, ವ್ಯವಹಾರ.

**अमलदार**– पु अधिकारी। ಅಧಿಕಾರಸ್ಥ, ಅಧಿಕಾರಿ.

**अमला**– पु कर्मचारी।ಅಧಿಕಾರಿ,ಕಾರಭಾರಿ. स्त्री लक्ष्मी। ಲಕ್ಷ್ಮಿ.

**अमला-फैला**– पु कचहरीके कर्मचारी। ಕಚೇರಿಯಲ್ಲಿಯ ಅಧಿಕಾರಿ ವರ್ಗ.

**अमली**– वि शासन करनेवाला, व्यावहारिक, नशेबाज। ಶಾಸನ ಮಾಡುವ, ವ್ಯಾವಹಾರಿಕ, ಅಮಲೇರಿದ. स्त्री. इमली। ಹುಣಸೆ.

**अमहर**– स्त्री. कच्चे आमकी सुखाई हुई फॉक। ಮಾವಿನಕಾಯಿಯ ಬಾಳಕ.

**अमान**– वि निरभिमान, अपरिमित। ನಿಗರ್ವಿ, ಅಪಾರ, ಅಸಂಖ್ಯ, ಬಹಳ. पु शांति, रक्षा, दया। ಶಾಂತಿ, ರಕ್ಷಣೆ, ಆಶ್ರಯ, ದಯೆ.

**अमानत**– स्त्री. धरोहर। ಅಮಾನತ್ತು, ಠೇವು.

**अमाना**– अक्रि समाना, आनंदपूर्ण होना। ಹಿಡಿಸು, ಒಳಗೆ ಹಿಡಿ, ಆನಂದಿತನಾಗು.

**अमानी**– वि निरभिमान। ನಿರಭಿಮಾನಿ,ಸಾಧು ಸ್ವಭಾವದ,ನಿಗರ್ವಿ. स्त्री. वह जमीन जिसकी जमीदार सरकार हो, तनखाहपर काम कराना। ಸರಕಾರದ ಅಧಿಕಾರದಲ್ಲಿದ್ದ ಭೂಮಿ, ಪಗಾರ (ಸಂಬಳ) ಕೊಟ್ಟು ಕೆಲಸ ಮಾಡಿಸುವದು.

**अमावट**– स्त्री. आमका सुखाया हुआ रस। ಒಣಗಿಸಿದ ಮಾವಿನ ಹಣ್ಣಿನ ರಸ.

**अमावस**– स्त्री अमावास्या। ಅಮಾವಾಸ್ಯೆ.

**अमिउ, अमिस, अमी–** पु अमृत। ಅಮೃತ.

**अमिट–** वि. जो न मिटे । ನಾಶವಾಗಲಾರದ, ಅಳಿಸಲಾರದ.

**अमिय, अमी–** पु अमृत। ಅಮೃತ.

**अमीन–** पु. एक अदालती कर्मचारी। ಹೊರಗಿನ ಕೆಲಸ ಮಾಡುವ ಕೋರ್ಟಿನ ಅಧಿಕಾರಿ.

**अमीर–** पु सरदार, धनी। ಸರದಾರ, ದೊರೆ, ಶ್ರೀಮಂತ. वि. धनवान्। ಶ್ರೀಮಂತ.

**अमीराना–** वि अमीरोंका सा । ಶ್ರೀಮಂತಿಯ, ಐಶ್ವರ್ಯದ, ಶ್ರೀಮಂತರಂಥ.

**अमुक–** वि फलाँ। ಇಂಥ

**अमूनि–** स्त्री. संजीवनी। ಸಂಜೀವನಿ.

**अमेजना–** सक्रि. मिला देना। ಕಲಸು, ಬೆರಸು, ಕೂಡಿಸ..

**अमेठना, अमैठना–**सक्रि दे ‘उमेठना’।

**अमोल,अमोलक–**वि. कीमती। ಅಮೂಲ್ಯ, ಬಹುಮೂಲ್ಯ.

**अमोला–** पु आमका नया निकला पौधा। ಮಾವಿನ ತರು, ಮಾವಿನ ಸಸಿ.

**अम्माँ–** स्त्री. माता। ಮಾತೆ, ತಾಯಿ, ಅಮ್ಮ.

**अम्मारी–**स्त्री हाथीका हौदा। ಅಂಬಾರಿ.

**अम्र–** पु बात, काम, आज्ञा, घटना। ವಿಷಯ, ಮಾತು, ಕೆಲಸ, ಆಜ್ಞೆ, ಘಟನೆ.

**अम्ल–** वि खट्टा। ಹುಳಿಯಾದ. पु खटाई। ಹುಳಿ.

**अम्हौरी–** स्त्री ग्रीष्म ऋतुकी छोटी छोटी फुँसियाँ, घमौरी। ಬೆವರುಸಾಲೆ.

**अयाँ–** वि जाहिर। ಪ್ರಗಟ, ಸ್ಪಷ್ಟ, ವಿದಿತ.

**अयान–** वि अज्ञानी, पैदल। ಅಜ್ಞಾನಿ, ಕಾಲ್ನಡಿಗೆಯ, ಪಾದಚಾರಿ. पु स्वभाव,स्थिरता। ಸ್ವಭಾವ,ಸ್ಥಿರತ್ವ, ಸ್ಥೈರ್ಯ.

**अयानता–** स्त्री. अज्ञान। ಅಜ್ಞಾನ.

**अयाना–**वि. अज्ञानी, गँवार। ಅಜ್ಞಾನಿ, ತಿಳುವಳಿಕೆಯಿಲ್ಲದ, ಹಳ್ಳಿಗಾಡ.

**अयाल–** पु. घोड़े या सिंहकी गर्दनके बाल। ಆಯಾಲ, ಕುದುರೆ ಹಾಗೂ ಸಿಂಹದ ಕುತ್ತಿಗೆಯ ಕೂದಲು.

**अरंड–** पु. एरंड। ಔಡಲ ಗಿಡ, ಹರಳು ಗಿಡ.

**अरक–**पु. आसव, रस, सूर्य। ಆಸವ, ಅರ್ಕ, ರಸ, ಸೂರ್ಯ.

**अरकना–**अक्रि.टकराना, फटना,गिरना, उलझना। ಅಪ್ಪಳಿಸು, ಗಡಬಡಿಸು, ಒಡೆ,ಬಿರುಕು ಬೀಳು,ಸಿಕ್ಕಿಕೊಳ್ಳು, ತೊಡಕು ಬೀಳು.

**अरकनाना–** पु. अरक। ಅರ್ಕ.

**अरगनी, अलगनी–** स्त्री कपडे टाँगनेकी बाँस या रस्सी। ಅರಿವೆ ತೂಗು ಹಾಕುವ ಕೋಲು ಅಥವಾ ಹಗ್ಗ.

**अरगल–** पु किवाड बंद करनेकी लकडी। ಅಗಳಿ, ಬೋಲ್ಟು

**अरघ, अर्घ**– पु अर्घ्य। ಅರ್ಘ್ಯ.

**अरचना**– सक्रि पूजा करना। ಪೂಜೆ ಮಾಡು, ಅರ್ಚಿಸು.

**अरज़**– स्त्री निवेदन, विनती, चौडाई, जमीन। ವಿನಂತಿ, ಪ್ರಾರ್ಥನೆ, ಅಗಲಳತೆ, ಭೂಮಿ

**अरथी**– स्त्री मुर्दा ले जानेकी टिखटी। ಸಿದಿಗೆ, ಚಟ್ಟ

**अरदली**–पु साथमें रहनेवाला चपरासी। ನೌಕರ, ಪಟ್ಟೇವಾಲಾ, ಆಳು.

**अरना**–पु जंगली भैंसा। ಕಾಡುಕೋಣ अक्रि. अडना। ತಡೆ, ಅಡ್ಡಿಯಾಗು.

**अरबराना**– अक्रि घबराना। ಅಂಜು, ವ್ಯಾಕುಲನಾಗು.

**अरबरी**– स्त्री. भय, घबराहट। ಅಂಜಿಕೆ, ಭಯ, ದಿಗಿಲು.

**अरमान**– पु इच्छा, लालसा। ಇಚ್ಛೆ, ಬಯಕೆ, ಅಭಿಲಾಷೆ, ಲಾಲಸೆ

**अरर**– अव्य आश्चर्य सूचक शब्द। ಆಶ್ಚರ್ಯ ಸೂಚಕ ಶಬ್ದ

**अरराना**– अक्रि टूटते या गिरते समय 'अरर' शब्द करना। ಕರಕರ ಅಥವಾ ಕಡಕಡ ಶಬ್ದವಾಗು (ಮುರಿಯುವಾಗ ಅಥವಾ ಬೀಳುವಾಗ ಆಗುವ ಸಪ್ಪಳ).

**अरवा**– पु कच्चे धानका निकाला चावल। ಹಸಿ ಅಕ್ಕಿ, ಕುದಿಸದ ಅಕ್ಕಿ.

**अरवी**–स्त्री एक कंन्द, अरुई। ಕೆಸುವು

**अरसना**– अक्रि ढीला पडना। ಸಡಿಲಾಗು, ಶಿಥಿಲವಾಗು, ಮಂದವಾಗು.

**अरस-परस, अरसन-परसन**–पु छुआछुई का खेल, स्पर्श। ಕಣ್ಣುಮುಚ್ಚಣೆಕೆಯ ಆಟ, ಸ್ಪರ್ಶ.

**अरसना-परसना**– सक्रि छूना, भेटना। ಮುಟ್ಟು, ಭೆಟ್ಟಿಯಾಗು, ಆಲಿಂಗಿಸು.

**अरसा**– पु देर, समय। ವೇಳೆ, ತಡ, ಸಮಯ, ಮಧ್ಯಂತರದ ವೇಳೆ, ಬಹಳ ಸಮಯ.

**अरसीला, अरसौंहा, अलसौंहा**– वि आलस्यपूर्ण। ಆಲಸ್ಯಪೂರ್ಣ, ಆಲಸ್ಯವುಳ್ಳ, ಆಲಸೀ.

**अरस्तू**– पु यूनानका पुराने जमानेका एक विद्वान। ಅರಿಸ್ಟಾಟಲ್, ಗ್ರೀಸದ ಒಬ್ಬ ತತ್ವಜ್ಞಾನಿ.

**अरहट**– पु रहॅट, कुएँसे पानी निकालनेका एक यंत्र। ನೀರು ಸೇದುವ ರಾಟೆ.

**अरहन**– पु बेसन। ಕಡಲೆ ಹಿಟ್ಟು.

**अरहर**– स्त्री. एक अनाज। ತೊಗರಿ.

**अराल**–वि टेढा। ಡೊಂಕಾದ, ಮಣಿದ, ವಕ್ರ पु मतवाला हाथी। ಮದವೇರಿದ ಆನೆ.

**अरिंद**–पु शत्रु। ಶತೃ, ವೈರಿ.

**अरी**– अव्य स्त्रीयोके लिये संबोधन। ಸ್ತ್ರೀವಾಚಕ ಸಂಬೋಧನ.

**अरीज़ा**– वि निवेदित। ವಿಜ್ಞಾಪಿಸಿಕೊಂಡ.

**अरु**– अव्य. और। ಮತ್ತು.

**अरुई**– स्त्री. दे 'अरवी'।

**अरुझना–** अक्रि. उलझना, फँसना, रुकना। ಸಿಕ್ಕಿಕೊಳ್ಳು, ತೊಡಕು ಬೀಳು, ಅಡ್ಡಿಯಾಗು.

**अरुझाना–** सक्रि. फँसाना, रोकना। ಸಿಕ್ಕಿಸು, ತೊಡಕು ಹಾಕು, ಅಡ್ಡಿ ಮಾಡು. अक्रि. उलझना, मुग्ध होना। ಸಿಕ್ಕಿಕೊಳ್ಳು, ಮೋಹಿತ ನಾಗು, ಮುಗ್ಧನಾಗು.

**अरुणचूड, अरुणसिखा–** पु मुर्गा। ಹುಂಜ.

**अरुणाई–** स्त्री ललिमा।ಸಂಜೆ-ಮುಂಜಾವುಗಳ ಹೊಂಬಣ್ಣ.

**अरुन–**वि लाल, सूरज, अरुण। ಕೆಂಪು, ಸೂರ್ಯ, ಸೂರ್ಯನ ಸಾರಥಿ, ಅರುಣ.

**अरुनई–** स्त्री. दे 'अरुणाई'।

**अरुनाना–**अक्रि. लाल होना। ಕೆಂಪಾಗು. सक्रि. लाल करना। ಕೆಂಪು ಮಾಡು.

**अरूरना–**अक्रि व्यथित होना। ದುಃಖಿತನಾಗು.

**अरे–** अव्य. संबोधन सूचक शब्द। ಎಲೋ!

**अरोगना–**सक्रि. खाना। ತಿನ್ನು,ಉಣ್ಣು.

**अरोचक–** वि न रुचनेवाला।ರುಚಿಯಿಲ್ಲದ, ರುಚಿಸದ, ಸೇರದ.

**अर्गल–** पु दे 'अरगल'।

**अर्घ–** पु दे. 'अरघ'।

**अर्ज,अर्ज़ी–** स्त्री. प्रार्थना, चौडाई। ವಿನಂತಿ, ಪ್ರಾರ್ಥನೆ, ಅರಿಕೆ, ಅಗಲಳತೆ.

**अर्ज़दास्त–** स्त्री. प्रार्थनापत्र। ಪ್ರಾರ್ಥನಾ ಪತ್ರ, ಅರ್ಜಿ.

**अर्ज़ी–** प्रार्थनापत्र, प्रार्थना। ಪ್ರಾರ್ಥನಾ ಪತ್ರ, ಅರ್ಜಿ, ಪ್ರಾರ್ಥನೆ, ಅರಿಕೆ.

**अर्थमंत्री–** पु. खजार्ची। ಅರ್ಥ ಮಂತ್ರಿ, ಹಣಕಾಸಿನ ಮಂತ್ರಿ.

**अर्थी–** वि. इच्छुक, याचक, धनी। ಇಚ್ಛಿಸುವವ,ಅಗತ್ಯವುಳ್ಳವ,ವಾದಿ, ಯಾಚಕ, ಒಡೆಯ, ಶ್ರೀಮಂತ. स्त्री दे 'अरथी'।

**अर्दली–** पु. दे 'अरदली'।

**अर्वाचीन–**वि. वर्तमान समयका, नया। ವರ್ತಮಾನಕಾಲದ,ಸದ್ಯದ,ಹೊಸ.

**अर्श–** पु. ववासीर, आकाश, स्वर्ग। ಮೂಲವ್ಯಾಧಿ, ಆಕಾಶ, ಸ್ವರ್ಗ.

**अर्सा–** पु दे 'अरसा'।

**अलंग–** पु. दिशा, तरफ। ದಿಕ್ಕು, ಮಗ್ಗಲು, ಕಡೆ.

**अलक–** पु लटकते हुये वाल, घुंघराले वाल। ಜೋತಾಡುವ ಕೂದಲು, ಗುಂಗುರುಗೂದಲು, ಕುರುಳು, ಮುಂಗುರುಳು.

**अलकतरा–** पु एक काला द्रव प्रदार्थ। ಡಾಮರೆಣ್ಣೆ, ಟಾರು.

**अलख–** वि अगोचर, गुप्त। ಅದೃಷ್ಟ, ಕಾಣಿಸದ, ಅಗೋಚರ, ಗುಪ್ತ.

—जगाना = पुकारकर ईश्वरका स्मरण करना।ದೇವರ ಹೆಸರನಿಂದ ಕೂಗು.

**अलग–** वि. जुदा, भिन्न। ಬೇರೆ,ಭಿನ್ನ.

**अलगनी**– स्त्री दे 'अरगनी'।

**अलगरज**–क्रिवि मतलब यह कि। ತಾತ್ಪರ್ಯವೇನಂದರೆ, ಆಶಯವೇನಂದರೆ

**अलगरज़ी**– वि लापरवाह। ನಿಶ್ಚಿಂತ, ಸ್ವಾರ್ಥಿ, ಅಗತ್ಯವಿಲ್ಲದ, ಬೇಡವಾದ, ಉದಾಸೀನನಾದ. स्त्री लापरवाही। ನಿಶ್ಚಿಂತತೆ, ಅನಗತ್ಯ, ತಾತ್ಸಾರ.

**अलगाना**– सक्रि अलग करना,हटाना। ಬೇರೆ ಮಾಡು, ದೂರು ಮಾಡು, ಹೋಗಲಾಡಿಸು, ಬಿಡಿಸು. अक्रि अलग होना। ಬೇರೆಯಾಗು

**अलगाव**–पु. ದೂರು ದೂರಾಗಿ ಇರುವ ವೃತ್ತಿ, ಬೇರ್ಪಡಿಸುವದು

**अलगोझा**– पु. बँटवारा। ಭಾಗ, ಪಾಲು.

**अलच्छि**– वि गरीब। ಬಡವ,ದರಿದ್ರ.

**अलता**–पु महावर। ಹೆಂಗಸರು ಕಾಲಿಗೆ ಹಚ್ಚಿಕೊಳ್ಳುವ ಕೆಂಪು ಬಣ್ಣ.

**अलफ़ाज़**– पु वहुत्से शब्द। ಶಬ್ದ ಸಮೂಹ.

**अलबत्ता**–अव्य निस्सन्देह। ನಿಸ್ಸಂದೇಹವಾಗಿ, ನಿಜವಾಗಿ, ಅರ್ಥಾತ್.

**अलबी तलबी**– स्त्री अरवी, फारसी या कठिण उर्दू। ಅರಬಿ, ಫಾರಸಿ ಅಥವಾ ಕಠಿಣ ಉರ್ದು.

**अलबेला**– वि बाँका, अनूठा, सुदर, वेपरवाह। ಅಂದವಾದ, ಸುಂದರವಾದ, ಅದ್ಭುತವಾದ, ಪರಿಷ್ಕೃತ, ನಿಶ್ಚಿಂತ.

**अलम्**– अव्य काफी, पर्याप्त। ಸಾಕು, ಸಾಕಷ್ಟು, ಪರ್ಯಾಪ್ತ, ಪೂರ್ಣ.

**अलम**– पु दु ख, सेनाके सामने का बडा झडा, पर्वत। ಶೋಕ, ದುಃಖ, ಸೈನ್ಯದ ಮುಂದಿನ ದೊಡ್ಡ ಧ್ವಜ, ಪರ್ವತ.

**अलमस्त**–वि मतवाला, बेफिक्र। ಅಮಲೇರಿದ,ಹುಚ್ಚ, ನಿಶ್ಚಿಂತವಾದ

**अलमारी**– स्त्री खानेदार संदूक। ಕಪಾಟು.

**अलल खसूस**– वि विशेष रूपसे। ಪ್ರಾಮುಖ್ಯವಾಗಿ, ವಿಶೇಷವಾಗಿ.

**अलल टप्पू**–वि अंडबंड। ಕ್ರಮವಿಲ್ಲದ, ಯದ್ವಾತದ್ವಾ, ಅಸಂಬದ್ಧ.

**अलल-वछेडा**– पु वछेडा, निरुपयोगी आदमी। ಕುದುರೆಯ ಮರಿ, ನಿರುಪಯೋಗಿ ಮನುಷ್ಯ.

**अललाना**-अक्रि जोरसे चिल्लाना,वकना। ಗಟ್ಟಿಯಾಗಿ ಒದರು, ಬಡಬಡಿಸು.

**अलवांती**– वि स्त्री जच्चा, प्रसृता। ಬಾಣಂತಿ.

**अलवान**– पु ऊनी चादर। ಧಾವಳಿ, ಉಣ್ಣೆಯ ಶಾಲು

**अलस**– त्रि आलसी, मूर्ख, निद्रालु। ಆಲಸಿ, ಮೈಗಳ್ಳ, ನೋವಾರಿ, ಮಂದ, ತೂಕಡಿಸುವ.

**अलसान, अलसानी**– स्त्री आलस्य। ಆಲಸ್ಯ.

**अलसाना**–अक्रि आलस्य या निद्रायुक्त

होना,थकावट मालूम होना।ಆಲಸ್ಯ ಗೊಳ್ಳು,ತೂಕಡಿಸು,ದಣಿ,ಆಯಾಸ ಪಡು.

**अलसी**– वि. आलसी। ಆಲಸ್ಯದ ಸೋಮಾರಿ,ಮಂದ. स्त्री तीसी। ಅಗಸೆ.

**अलहक**– क्रिवि. वास्तवमे। ವಸ್ತುತಃ, ನಿಜವಾಗಿ, ವಾಸ್ತವಿಕವಾಗಿ.

**अलहदा**– वि. पृथक्। ಬೇರೆ, ಭಿನ್ನ, ಪೃಥಕ್.

**अलाई**– वि आलसी, सुस्त। ಆಲಸ್ಯದ, ಮೈಗಳ್ಳ, ಸೋಮಾರಿ.

**अलान**– पु हाथी बॉधने का खूटा, बंधन। ಆನೆ ಕಟ್ಟುವ ಗೂಟ, ಬಂಧನ.

**अलापना**– अक्रि तान लगाना, गाना, बातचीत करना। ಹಾಡುಹೇಳು, ಗಾಯನ ಮಾಡು, ಸಂಭಾಷಣೆ ಮಾಡು.

**अलाबू**– स्त्री लौकी। ಸೋರೆಕಾಯಿ, ಸೋರೆ ಬುರುಡೆ, ಕುಂಬಳಕಾಯಿ.

**अलामत**– स्त्री निशानी।ಗುರ್ತು,ಚಿಹ್ನೆ.

**अलालत**–स्त्री बीमारी। ರೋಗ,ಜಡ್ಡು.

**अलाव**– पु भट्ठी। ಭಟ್ಟಿ,ಚಳಿಗಾಲದಲ್ಲಿ ಚಿಂಕಿ ಕಾಯಿಸುವ ಒಲೆ.

**अलावा**– क्रिवि. सिवाय, अतिरिक्त। ಹೊರ್ತಾಗಿ, ಅತಿರಿಕ್ತ, ಅಲ್ಲದೆ.

**अलिजर**– पु. मटका। ಕೊಡ,ಮಣ್ಣಿನ ಪಾತ್ರೆ.

**अलिंद**– पु. भौंरा, घरके दरवाजेसे सटा चबूतरा। ಭ್ರಮರ, ಮನೆಯ ಮುಂದಿನ ಕಟ್ಟೆ, ಜಗುಲಿ.

**अलीक**– वि मिथ्या, अप्रतिष्ठित। ಅಪ್ರತಿಷ್ಠಿತ, ಮಿಥ್ಯಾ, ಸುಳ್ಳಾದ.

**अलीजा**– वि. बहुत। ಬಹಳ.

**अलील**– वि बीमार। ಜಡ್ಡಾದ, ಬಳಲುವ, ರುಗ್ಣ, ಕಾಯಿಲೆಯ.

**अलीह, अलीहा**– वि मिथ्या। ಅಸತ್ಯ, ಸುಳ್ಳು.

**अलुमीनम्**– पु. एक धातु। ಅಲ್ಯುಮಿನಿಯಮ್ ಧಾತು.

**अलेखा**– वि बेहिसाब, अगणित। ಲೆಕ್ಕವಿಲ್ಲದ, ಅಗಣಿತ.

**अलेखी**– वि. अन्यायी, अंधाधुंध मचाने वाला। ಅನ್ಯಾಯ ಮಾಡುವವ, ತಪ್ಪು ಲೆಕ್ಕ ಬರೆಯುವವ.

**अलोकना**– सक्रि. देखना। ಅವಲೋಕಿಸು, ನೋಡು.

**अलोना**– वि जिसमें नमक न डाला गया हो,फीका। ಉಪ್ಪಿಲ್ಲದ,ರುಚಿಯಿಲ್ಲದ, ಸಪ್ಪಗಾದ, ನಿಸ್ಸಾರ.

**अल्ल**– पु उपगोत्र, कुलनाम। ಉಪಗೋತ್ರ, ಕುಲನಾಮ.

**अल्लम-गल्लम**– पु बडबड। ಬಡಬಡಿಕೆ, ಅಸಂಬದ್ಧ ಪ್ರಲಾಪ. वि असंबद्ध। ಅಸಂಬದ್ಧ, ವಿಸಂಗತ.

**अल्ला, अल्लाह**– पु. ईश्वर। ದೇವರು, ಈಶ್ವರ.

**अल्हड**– वि उजड्ड, मनमौजी, असावधान। ಮೂರ್ಖ, ಅನನುಭವಿ, ಸ್ವೇಚ್ಛಾಚಾರಿ, ಅಜಾಗ್ರತ.

**अवकाश**– पु फुर्सत, अवसर, शून्य-स्थान, जगह । ಬಿಡುವು, ಸೂಟಿ, ರಜ,ಸಮಯ, ಅವಕಾಶ,ಅಂತರ, ಬರಿದಾದ ಸ್ಥಳ, ಸ್ಥಳ.

**अवगारना**– सक्रि जताना, समझाना बुझाना । ಎಚ್ಚರಿಸು, ಬುದ್ಧಿ ಹೇಳು.

**अवगाह**– वि अथाह, कठिण । ಬಹಳ ಆಳವಾದ, ಕಠಿಣ. पु जलप्रवेश, गहरी जगह, कष्ट । ಪ್ರವೇಶ, ನೀರಿನಲ್ಲಿ ಪ್ರವೇಶಿಸುವದು, ಗೋತ, ಮುಳುಗುವಿಕೆ, ಆಳವಾದ ಸ್ಥಳ, ಕಷ್ಟ.

**अवगाहन**– पु जलप्रवेशकी क्रिया,शोध, चिन्तन । ಸ್ನಾನ, ಜಲಪ್ರವೇಶ ಮಾಡುವದು, ಶೋಧ, ಚಿಂತನೆ. ಮನನ

**अवगाहना**– अक्रि जलमें घुसना,स्नान करना । ನೀರಿನಲ್ಲಿ ಪ್ರವೇಶಿಸು,ಮುಳುಗು, ಸ್ನಾನಮಾಡು. सक्रि हिलाना,मथना,खोजना,स्वीकारना। ಅಗಳಾಡಿಸು,ಮಥಿಸು, ಶೋಧಿಸು, ಸ್ವೀಕರಿಸು

**अवगुंठन**– पु घूँघट । ಬುರುಕೆ, ಮುಸುಕು, ತೆರೆ.

**अवघट**– वि विकट, दुर्गम । ಬಿಗಿಯಾದ, ಕಠಿಣವಾದ, ದುರ್ಗಮ.

**अवचट**– क्रिवि अचानक । ಒಮ್ಮಿಂದೊಮ್ಮೆ, ಅಕಸ್ಮಾತ್ತಾಗಿ पु अनजान, कठिनाई । ಅಜ್ಞಾನಿ, ತಿಳಿಯದವ, ತೊಡಕು, ಕಷ್ಟ

**अवडेर**– पु फेर, झंझट । ತೊಡಕು, ಗೊಂದಲು.

**अवडेरना**– पु सक्रि झंझटमे डालना, त्याग करना, कष्ट देना । ತೊಡಕಿನಲ್ಲಿ ಹಾಕು,ತುಚ್ಛತಾಪೂರ್ವಕವಾಗಿ ತ್ಯಾಗ ಮಾಡು, ದುಃಖಕೊಡು, ಗೋಳಾಡಿಸು.

**अवडेरा**– वि चक्करदार, जिससे झंझट हो, बेढब । ತೊಡಕಿನ,ಗೊಂದಲದ, ಕುರೂಪ, ದುಷ್ಟ

**अवतरना**– अक्रि जन्म लेना, प्रगट होना । ಜನ್ಮವೆತ್ತು, ಅವತರಿಸು, ಪ್ರಕಟವಾಗು

**अवधान**– पु मनका लगाव, गर्भ, पेट । ಲಕ್ಷ್ಯ, ಮನಸ್ಸಿನ ಏಕಾಗ್ರತೆ,ಗರ್ಭ, ಹೊಟ್ಟೆ.

**अवधि**– स्त्री सीमा, निर्दिष्ट काल, अंत समय । ಸೀಮೆ, ಮರ್ಯಾದೆ, ನಿಶ್ಚಯಿಸಿದ ವೇಳೆ, ಕಾಲ, ಗಡು,ಮುದ್ದತು, ಕೊನೆಯ ಸಮಯ अव्य तक । ತನಕ, ವರೆಗೆ

**अवधी**– स्त्री अवधकी बोली । ಅಯೋಧ್ಯೆಯ ಭಾಷೆ, ತುಲಸೀ ರಾಮಾಯಣದ ಭಾಷೆ वि अवध सम्बन्धी । ಅಯೋಧ್ಯೆಯ ಸಂಬಂಧದ.

**अवधू , अवधूत**– पु संन्यासी योगी । ಸನ್ಯಾಸಿ, ಯೋಗಿ, ಯತಿ

**अवर**– वि और, दूसरा, नीच, क्षुद्र । ಎರಡನೆಯ,ಅನ್ಯ,ಅಧಮ,ನೀಚ, ಕ್ಷುದ್ರ.

अवराधन– पु. उपासना । ಆರಾಧನೆ, ಪೂಜೆ, ಉಪಾಸನೆ.

अवरेब– पु तिरछी चाल, उलझन, झगड़ा । ವಕ್ರಗತಿ, ತೊಡಕು, ಜಗಳ.

अवरोध, अवरोधन–पु रुकावट, अनुरोध, अंतःपुर । ಅಡ್ಡಿ, ಅಡಚಣೆ, ತೊಡಕು, ವಿರೋಧ, ಆಗ್ರಹ, ಅಂತಃಪುರ.

अवलंब, अवलंबन– पु आश्रय, आधार । ಆಶ್ರಯ, ಆಧಾರ.

अवली– स्त्री. पंक्ति, समूह, वह अन्न जो पहले पहल खेत से काटा जाता है । ಪಂಕ್ತಿ, ಸಮೂಹ, ಗುಂಪು, ಮೊಟ್ಟಮೊದಲು ಕೊಯ್ದ ಧಾನ್ಯ.

अवलीक–वि दोषरहित, शुद्ध । ದೋಷರಹಿತ, ಶುದ್ಧ, ನಿಷ್ಕಲಂಕ.

अवलेखना– सक्रि. खोदना, खुरचना । ಕೆತ್ತು, ಕೆರೆ.

अवलोकन– पु. देखना, जाँच । ನೋಡುವದು, ನಿರೀಕ್ಷಣೆ, ಪರೀಕ್ಷೆ, ವಿಚಾರಣೆ.

अवलोकना–सक्रि देखना, जाँच पड़ताल करना । ನೋಡು, ಪರೀಕ್ಷಿಸು, ಶೋಧಿಸು, ಪರಿಶೀಲಿಸು.

अवसर– पु समय, मौका । ಸಮಯ, ಸಂಧಿ, ವೇಳೆ, ಅವಕಾಶ, ಸಂದರ್ಭ. —चूकना = मौका खोना । ಸಂಧಿ ಕಳಕೊಳ್ಳು.

अवसान– पु. अंत, विराम, सायंकाल । ಅಂತ, ಕೊನೆ, ಸೀಮೆ, ಸಾಯಂಕಾಲ, ಮೃತ್ಯು.

अवसि– क्रिवि अवश्य । ಅವಶ್ಯವಾಗಿ.

अवसेर– स्त्री उलझन, देर, क्लेश, चिंता, व्याकुलता । ತೊಡಕು, ತಡ, ವಿಲಂಬ, ಕಷ್ಟ, ದುಃಖ, ಚಿಂತೆ, ವ್ಯಾಕುಲತೆ, ಅಸ್ವಸ್ಥತೆ. पु. प्रतीक्षा । ಪ್ರತೀಕ್ಷೆ, ಹಾದೀ ನೋಡುವಿಕೆ.

अवसेरना– सक्रि कष्ट देना । ತ್ರಾಸ ಕೊಡು, ದುಃಖಕೊಡು, ಪೀಡಿಸು.

अवस्था– स्त्री दशा, उम्र, गति, काल । ಸ್ಥಿತಿ, ವಯಸ್ಸು, ಗತಿ, ಸಮಯ, ವೇಳೆ.

अवही– स्त्री. एक प्रकार का बबूल का वृक्ष । ಒಂದು ಜಾತಿಯ ಜಾಲಿಯ ಗಿಡ.

अवहेलना– स्त्री. तिरस्कार । ತಿರಸ್ಕಾರ. सक्रि तिरस्कार करना । ತಿರಸ್ಕಾರ ಮಾಡು, ಅಲ್ಲಗಳೆ.

अवहेला– तिरस्कार, अनादर । ತಿರಸ್ಕಾರ, ಅನಾದರ, ಅಪಮಾನ.

अवाँ, अवा– पु भट्टा । ಭಟ್ಟಿ, ದೊಡ್ಡ ಒಲೆ, ಆವಿಗೆ.

अवाई– स्त्री आना, गहरी जोताई । ಆಗಮನ, ಆಳವಾಗಿ ಹರಗುವದು.

अवाक्– वि. मौन, स्तब्ध । ಸ್ಥಂಭಿತ, ವಿಸ್ಮಿತ, ಮೌನ, ನಿಃಶಬ್ದ, ನಿರುತ್ತರ.

अवाज़– दे. ' आवाज ' ।

अवाम– पु आम लोग । ಸರ್ವಸಾಧಾರಣ ಜನತೆ, ಸಾಮಾನ್ಯ ಜನ.

**अवार**– पु इसपार, दूसरा किनारा। ಈ ದಂಡೆ, ಈಚೆಯ ತೀರ.

**अवारना**– सक्रि रोकना, मना करना। ಅಡ್ಡಿ ಮಾಡು, ತಡೆ, ನಿರ್ಬಂಧಿಸು. स्त्री किनारा। ತೀರ, ದಂಡೆ, ದಡ.

**अवास्तव**– वि अयतार्थ, झूठ। ಯಥಾರ್ಥವಲ್ಲದ, ವಾಸ್ತವವಲ್ಲದ, ಸುಳ್ಳು.

**अविनाशी**– वि अक्षय, नित्य। ನಾಶವಾಗದ, ಅಕ್ಷಯ, ನಿತ್ಯ.

**अविरत**– क्रिवि. निरंतर, हमेशा। ಯಾವಾಗಲೂ, ಎಡೆಬಿಡದೆ, ನಿರಂತರ. वि लगा हुआ, विराम शून्य। ಹತ್ತಿಕೊಂಡ, ವಿರಾಮವಿಲ್ಲದ, ಎಡೆಬಿಡದ

**अविश्रांत**– वि विश्राम रहित। ವಿಶ್ರಾಂತಿಯಿಲ್ಲದ, ಅವಿಶ್ರಾಂತ.

**अवीरा**– स्त्री पतिपुत्र रहित स्त्री। ಪತಿಪುತ್ರರಿಲ್ಲದ ಸ್ತ್ರೀ

**अवेज**–पु प्रतीकार, वदला। ವಿರೋಧ, ಪ್ರತೀಕಾರ, ಸೇಡು.

**अव्वल**– वि प्रथम, उत्तम, श्रेष्ठ। ಮೊದಲನೆಯ, ಉತ್ತಮ, ಶ್ರೇಷ್ಠ.

**अशआर**– पु कविता। ಕವಿತೆ.

**अशन**–पु भोजन। ಊಟ, ಭೋಜನ, ಆಹಾರ.

**अशरफ़ी**– स्त्री दे 'अशर्फी'।

**अशराफ**–पु 'शरीफ' का वहु। ಸಜ್ಜನರು, ಒಳ್ಳೆಯ ಜನರು

**अशर्फ़ी**– स्त्री मोहर। ಒಂದು ಚಿನ್ನದ ನಾಣ್ಯ, ಮೊಹರು.

**अश्क**– पु ऑसू। ಕಣ್ಣೀರು, ಅಶ್ರು, ಕಂಬನಿ

**असंभावना**–स्त्री अशक्यता। ಅಶಕ್ಯತೆ.

**असकताना**– अक्रि आलसी होना। ಆಲಸಿಯಾಗು, ಬೇಸರಗೊಳ್ಳು.

**असकन्ना**–पु मियान के भीतरकी मलिनता हटाने का एक हथियार। ಒರೆಯ ಒಳಗಿನ ಕೊಳೆಯನ್ನು ತೆಗೆಯುವ ಸಲಾಕಿ

**असगुन**– पु अपशकुन। ಅಪಶಕುನ

**असती**– स्त्री कुलटी। ವ್ಯಭಿಚಾರಿಣಿ, ಹಾದರ ಮಾಡುವವಳು, ಕುಲಟೆ.

**असन**– पु दे 'अशन'।

**असनान**– पु स्नान। ಜಳಕ, ಸ್ನಾನ

**असबाब**– पु सामान। ಸಾಮಾನು.

**असभ्य**-- वि गंवार, दुष्ट, अशिष्ट। ಅನಾಗರಿಕ, ಹುಂಬ, ಹಳ್ಳಿಗಾಡ, ದುಷ್ಟ, ಅಶಿಷ್ಟ.

**असमंजस**– स्त्री दुविधा। ಪೇಚಾಟ, ಭ್ರಮೆ, ತೊಡಕು, ಅಡಚಣೆ.

**असमय**– पु बुरा काल। ಅವೇಳೆ, ಕೆಟ್ಟ ವೇಳೆ.

**असर**–पु प्रभाव। ಪ್ರಭಾವ, ಪರಿಣಾಮ

**असल**– वि सच्चा, शुद्ध, उच्च। ನಿಜವಾದ, ಶುದ್ಧವಾದ, ಉತ್ತಮ, ಶ್ರೇಷ್ಠ, ಒಳ್ಳೆಯ पु मूलधन। ಅಸಲು, ಬಂಡವಾಳ.

**असलियत**–स्त्री सचाई, यतार्थता, जड। ಸತ್ಯತೆ, ನಿಜತ್ವ, ಮೂಲ, ಸಾರ.

**असली**– वि दे 'असल'।

असहनीय–वि दुःसह, न सहने योग्य। ದುಃಸಹ, ಸಹಿಸಲಾಗದ.

असहयोग– पु. साथ न देना। ಸಹಯೋಗ ಕೊಡದಿರುವದು, ಅಸಹಯೋಗ, ಸಹಕಾರ ಮಾಡದಿರುವದು.

असाच– वि झूठा। ಅಸತ್ಯ, ಸುಳ್ಳು,

असा–पु चांदी और सोने के पत्रसे ढका हुआ डंडा। ಬಂಗಾರ ಮತ್ತು ಬೆಳ್ಳಿಯ ತಗಡು ಹೊದಿಸಿದ ಕೋಲು, ಬಡಿಗೆ.

असाढ– पु. आषाढ़। ಆಷಾಢಮಾಸ.

असाध– वि असाधु, असजन। ಕೆಟ್ಟ ಸ್ವಭಾವದ, ದುರ್ಜನ.

असाध, असाध्य– वि दुष्कर, कठिण। ಅಸಾಧ್ಯ, ಕಠಿಣ.

असामयिक– वि. जो ठीक समयपर न हो। ಅಕಾಲಿಕ, ಅವೇಳೆಯ, ಅಪ್ರಾಸಂಗಿಕ.

असामी–पु व्यक्ति, अपराधी, देनदार। ವ್ಯಕ್ತಿ, ಅಪರಾಧಿ, ಸಾಲಗಾರ, ಋಣಿ, ಕೊಡಕೊಳ್ಳುವ ಸಂಬಂಧವುಳ್ಳ ವ್ಯಕ್ತಿ

असालत– स्त्री सचाई, कुलीनता। ಮೂಲ, ನಿಜತ್ವ, ಕುಲೀನತೆ, ಶ್ರೇಷ್ಠತೆ.

असालतन्– क्रिवि खुद, स्वयं। ಸ್ವತಃ, ಸ್ವಯಂ, ತಾನೇ, ಖುದ್ದಾಗಿ.

असावधान– वि. अजाग्रत, लापरवाह। ಅಜಾಗ್ರತ, ಎಚ್ಚರವಿಲ್ಲದ.

असावधानी– स्त्री. लापरवाही, बेखबरी। ಅಜಾಗ್ರತೆ, ನಿಶ್ಚಿಂತತೆ, ಎಚ್ಚರವಿಲ್ಲದಿರುವಿಕೆ.

असासा– पु. सामान, संपत्ति। ಸಾಮಾನು, ಸಂಪತ್ತು.

असीम, असीमित–वि बेहद, अपरिमित। ಸೀಮಾರಹಿತ, ಮೇರೆಯಿಲ್ಲದ, ಬಹಳ, ಅಪರಿಮಿತ, ಅನಂತ.

असीर– पु. कैदी। ಕೈದಿ, ಸೆರೆಯಾಳು.

असीस– स्त्री. आशीर्वाद। ಆಶೀರ್ವಾದ.

असीसना– सक्रि आशीर्वाद देना। ಆಶೀರ್ವದಿಸು, ಆಶೀರ್ವಾದ ಕೊಡು.

असुविधा– स्त्री. कठिनाई, तकलीफ। ಕಷ್ಟ, ಆತಂಕ, ಸಂಕಟ, ಅನಾನುಕೂಲ.

असुहाग– पु वैधव्य। ವೈಧವ್ಯ.

असूझ– वि अंधेरा, कठिण, अपार। ಅಂಧಕಾರಮಯ, ಕಠಿಣ, ತಿಳಿಯದ, ಹೊಳೆಯದ, ವಿಕಟ, ಅಪಾರ. स्त्री भूल। ತಪ್ಪು.

असैला– वि कुमार्गी, अनुचित। ಕುಮಾರ್ಗಿ, ದುರಾಚಾರಿ, ಅನುಚಿತ.

असो, असों– क्रिवि. इस साल। ಈ ವರ್ಷ.

अस्तबल– पु. घुडसाल। ಕುದುರೆ ಲಾಯ, ಅಶ್ವಶಾಲೆ.

अस्तमित– वि जो डूब गया हो, नष्ट। ಅಡಗಿದ, ಮರೆಯಾದ, ಮುಳುಗಿದ, ನಷ್ಟ.

अस्तर– पु दोहरे कपडे में भीतर का

हिस्सा । ಅಸ್ತುರು, ಒಳವಸ್ತ್ರ.

**अस्तव्यस्त**– वि. तितर बितर, ध्वस्त-विध्वस्त । ಅಸ್ತುವ್ಯಸ್ತ, ಛಿನ್ನವಿಚ್ಛಿನ್ನ

**अस्तुति**– स्त्री अप्रशंसा, निंदा, स्तुति, प्रशंसा । ನಿಂದೆ, ಸ್ತುತಿ, ಪ್ರಶಂಸೆ.

**अस्तुरा**– पु उस्तुरा । ಕ್ಷೌರದ ಕತ್ತಿ.

**अस्नान**– पु स्नान । ಸ್ನಾನ, ಜಳಕ

**अस्थायी**– वि अस्थिर । ಅಸ್ಥಿರ, ಸ್ಥಿರವಲ್ಲದ, ಚಂಚಲ.

**अस्प**– पु घोड़ा । ಕುದುರೆ,

**अस्पताल**– पु दवाखाना । ಆಸ್ಪತ್ರೆ, ದವಾಖಾನೆ

**अस्मत**– पु सतीत्व । ಸತೀತ್ವ, ಪವಿತ್ರತೆ

**अस्सी**– वि ೮೦, साठ और बीस । ಎಂಭತ್ತು.

**अहंता**– स्त्री अहंकार । ಅಹಂಕಾರ, ಗರ್ವ.

**अहक**– स्त्री अभिलाषा, इच्छा । ಅಭಿಲಾಷೆ, ಇಚ್ಛೆ, ಬಯಕೆ.

**अहकना**– अक्रि इच्छा करना । ಇಚ್ಛೆಸು, ಬಯಸು.

**अहटाना**– अक्रि आहट लगना, पता लगना। ಸುಳುವು ಹತ್ತು, ಗೊತ್ತಾಗು. सक्रि पता लगाना। ಗೊತ್ತು ಹಚ್ಚು, ಹುಡುಕಿ ತೆಗೆ, ಸುಳುವು ಹಿಡಿ.

**अहथिर**– वि स्थिर । ಸ್ಥಿರ

**अहद**– पु प्रतिज्ञा, इकरार, शासन । ಪ್ರತಿಜ್ಞೆ, ನಿಶ್ಚಯ, ಕರಾರು, ಒಡಂಬಡಿಕೆ, ಶಾಸನ, ರಾಜ್ಯ.

**अहदनामा**– पु प्रतिज्ञापत्र, सुलहनामा । ಪ್ರತಿಜ್ಞಾಪತ್ರ, ಕರಾರುಪತ್ರ, ಒಡಂಬಡಿಕೆಯ ಪತ್ರ.

**अहदी**– वि बड़ा आलसी, अकर्मण्य । ಬಹಳ ಮೈಗಳ್ಳ, ಬಲು ಸೋಮಾರಿ, ಅಕರ್ಮಣ್ಯ, ನಿರುದ್ಯೋಗಿ

**अहबाब**– पु मित्रगण । ಮಿತ್ರರು.

**अहमक**– वि बेवकूफ । ಮೂರ್ಖ, ದಡ್ಡ.

**अहमिति**– स्त्री अहंकार । ಅಹಂಕಾರ, ಗರ್ವ, ಸೊಕ್ಕು

**अहर**–पु. पोखरा । ಕೆರೆ, ನೀರಿನ ಹೊಂದು, ಹೊಂಡ.

**अहरन, अहरनि**– स्त्री. निहाई । ಅಡಿಗಲ್ಲು

**अहलकार**– पु कर्मचारी । ಕರ್ಮಚಾರಿ, ಆಫೀಸರ, ಅಧಿಕಾರಿ, ಏಜಂಟ

**अहलमद**– पु अदालतका एक कर्मचारी । ಶಿರಸ್ತೇದಾರ

**अहवान**–पु आह्वान, बुलानेका कार्य । ಆಹ್ವಾನ, ಕರೆಯುವದು, ನಿಮಂತ್ರಣ.

**अहवाल**– पु समाचार, विवरण । ವೃತ್ತಾಂತ, ಸುದ್ದಿ, ಸ್ಥಿತಿ, ಅವಸ್ಥೆ, ವಿವರಣ

**अहसान**– पु भलाई, कृपा, कृतज्ञता । ಉಪಕಾರ, ಕಲ್ಯಾಣ, ಕೃಪೆ. ಕೃತಜ್ಞತೆ.

**अहाता**– पु घेरा, बाड़ा, चहारदीवारी।

ಬೇಲಿ,ಪ್ರಾಕಾರ, ಪೌಳಿ, ಆವಾರ.

अहि– पु सर्प, सूर्य, राहु, जल, बादल, पृथ्वी । ಹಾವು, ಸೂರ್ಯ, ರಾಹು, ನೀರು, ಮೋಡ, ಪೃಥ್ವಿ.

अहिफेन– पु. अफीम, साँपके मुँहका फेन । ಅಫು, ಅಫೀಮು, ಹಾವಿನ ಬಾಯಿಯ ಬುರುಗು.

अहिबेल– स्त्री. नागवेल, पान । ವೀಳ್ಯ-ದೆಲೆ ಬಳ್ಳಿ, ವೀಳ್ಯದೆಲೆ.

अहिवात– पु सोहाग । ಸ್ತ್ರೀಯ ಸೌ-ಭಾಗ್ಯ, ಮುತ್ತೈದೆತನ.

अहिवाती– स्त्री. सोहागिन । ಸೌಭಾಗ್ಯ ವತಿ, ಮುತ್ತೈದೆ.

अहीर– पु ग्वाला । ಗೊಲ್ಲ, ಗವಳಿಗ.

अहुठ– वि साढ़ेतीन । ಮೂರುವರೆ.

अहेर– पु. शिकार । ಬೇಟೆ.

अहेरी– पु. शिकारी । ಬೇಟೆಗಾರ.

अहोर-बहोर– क्रिवि. बारबार । ಪದೇ ಪದೇ, ಮೇಲಿಂದ ಮೇಲೆ, ಪುನಃ ಪುನಃ

# आ

आँक– पु अंक, निशान, संख्यासूचक चिह्न, अक्षर, अंग, लकीर, गोद । ಅಂಕೆ, ಸಂಖ್ಯೆ, ಚಿಹ್ನೆ, ಅಕ್ಷರ, ಅಂಶ, ಭಾಗ, ಗೆರೆ, ಆಕಾಂಕ್ಷೆ, ಸೊಂಟ, ತೊಡೆ, ಮಡಿಲು.

आँकड़ा– पु. अंक, चिह्न, हुक, स्क्रू, समस्या । ಅಂಕಿ, ಸಂಖ್ಯೆ, ಚಿಹ್ನೆ, ಹುಕ್, ಸ್ಕ್ರೂ, ಕೋಕ್ಕೆ, ಒಗಟು, ಕಠಿಣ ಪ್ರಶ್ನೆ.

आँकना–सक्रि. अंदाज करना, निशान लगाना, ठहराना, परखना । ಊಹಿಸು, ಅಂದಾಜು ಮಾಡು, ಬೆಲೆ ಕಟ್ಟು, ಅಂಕಿ ಹಾಕು, ಗುರ್ತು ಮಾಡು, ನಿಶ್ಚಯಿಸು, ಪರೀಕ್ಷಿಸು.

आँकर– वि. गहरा, बहुत अधिक, महँगा । ಆಳವಾದ, ಬಹಳಹೆಚ್ಚು, ತುಟ್ಟಿ, ಬೆಲೆ ಏರಿದ.

आँकुआ– पु. कोंपल । ಚಿಗುರು.

आँकुस– पु अंकुश । ಅಂಕುಶ.

आँकू, आँकैया– पु. अंदाज करनेवाला । ಅಂದಾಜು ಮಾಡುವವ, ಬೆಲೆ ಕಟ್ಟುವವ.

आँख– स्त्री नेत्र, दृष्टि, ध्यान, विवेक, परख । ಕಣ್ಣು, ದೃಷ್ಟಿ, ನೋಟ, ಗಮನ, ಧ್ಯಾನ, ವಿವೇಕ, ಪರೀಕ್ಷೆ.

—आना या उठना = आँख लाल होना और दर्द करना । ಕಣ್ಣುಬರು, ನೋವಾಗು.

—**का तारा**= अति प्रिय। ಬಹಳ ಪ್ರಿಯ, ಕಣ್ಣು ಮಣಿ.
—**की पुतली** = प्रिय व्यक्ति। ಪ್ರಿಯ ವ್ಯಕ್ತಿ, ಪ್ರಿಯ ಮನುಷ್ಯ.
—**खुलना** = जागना। ಎಚ್ಚರಾಗು.
—**खोलना** = सतर्क होना। ಜಾಗೃತನಾಗು, ಸತರ್ಕನಾಗು.
—**चुराना** = लज्जासे मुँह छिपाना। ನಾಚಿಕೆಯಿಂದ ಮೋರೆ ತೋರಿಸದಿರು.
—**डबडबाना** = आँखोका अश्रुयुक्त होना। ಕಣ್ಣು ತುಂಬಿ ಬರು, ಕಣ್ಣಿಲ್ಲಿ ನೀರು ತುಂಬು.
—**तरेरना** = क्रोधकी दृष्टिसे देखना। ಕ್ರೋಧದಿಂದ ನೋಡು, ಸಿಟ್ಟಿನಿಂದ ನೋಡು
—**दिखाना** = धमकाना। ಅಂಜಿಸು, ಕ್ರೋಧ ವ್ಯಕ್ತ ಮಾಡು.
—**निकालना** = क्रोध प्रकट करना। ಕ್ರೋಧ ಪ್ರಕಟಿಸು, ಸಿಟ್ಟು ವ್ಯಕ್ತ ಮಾಡು.
—**नीची होना** = शर्मिन्दा होना। ನಾಚಿಕೆಯಿಂದ ದೃಷ್ಟಿ ಕೆಳಗಾಗು.
—**पर पर्दा पडना** = भ्रम होना। ಭ್ರಮೆಯಾಗು, ಮೋಸ ಹೊಂದು.
—**फडकना** = शुभ या अशुभ फल सूचित करना। ಕಣ್ಣು ಹಾರು, ಶುಭ, ಅಶುಭ ಸೂಚನೆ ಕೊಡು.
—**फिर जाना** = दया दृष्टि न रखना। ಕೃಪಾದೃಷ್ಟಿ ಕಡಿಮೆಯಾಗು
—**फेरना** = एका एक गतृ हो जाना, बेरुख हो जाना। ಒಮ್ಮಿಂದೊಮ್ಮೆ ಶತೃವಾಗು, ಪರಾಙ್ಮುಖನಾಗು.
—**बंद होना**= | मर जाना, भूल जाना,
—**बंद करना**= | अलग होना। ಸಾಯು, ಕಣ್ಣು ಮುಚ್ಚು, ಮರೆ, ಬೇರೆಯಾಗು, ದೂರವಾಗು, ಅಗಲು
—**बिछाना** = प्रेम सहित आदर करना। ಪ್ರೇಮದಿಂದ ಸ್ವಾಗತಿಸು, ಬಹಳ ಆದರ ಮಾಡು
—**भर आना** = आँखे डबडबाना। ಕಣ್ಣು ತುಂಬಿ ಬರು, ಕಣ್ಣಿನಲ್ಲಿ ಕಣ್ಣೀರು ತುಂಬು.
—**मारना** = इशारा करना। ಕಣ್ಣು ಹೊಡಿ, ಕಣ್ಣಿನಿಂದ ಸಂಕೇತ ಮಾಡು.
—**में आँख गडना** = मोहित होना। ಮೋಹಿತನಾಗು, ಮೊದಲನೇ ಭೆಟ್ಟಿಗೇ ಪ್ರೇಮ ಉತ್ಪನ್ನವಾಗು.
—**में चर्बी छाना** = घमंडसे मदोन्मत्त हो जाना। ಸೊಕ್ಕಿಗೆ ಬರು, ಮದವೇರು.
—**में धूल डालना, झोंकना वा देना** = धोखा देना। ಮೋಸ ಮಾಡು
—**रखना** = परखना, ध्यान रखना। ಪರೀಕ್ಷೆ ಮಾಡು, ಲಕ್ಷ್ಯವಿಡು
—**लगना** = आसक्त होना। ಆಸಕ್ತನಾಗು, ಅನುರಕ್ತನಾಗು
—**लाल करना** = कोप दृष्टिसे देखना। ಸಿಟ್ಟಿನಿಂದ ನೋಡು, ಬಹಳ ಸಿಟ್ಟಾಗು.
—**सेंकना** = दर्शनानंद लेना। ನೋಡಿ

ಕಣ್ಣು ತೃಪ್ತಿ ಪಡಿಸಿಕೊಳ್ಳು

—से उठाना = सादर स्वीकार करना। ಸಾದರ ಸ್ವೀಕರಿಸು.

—से गिरना या उतरना = हलका होना, बेकदर होना। ತುಚ್ಛನಾಗು, ಎರಡ ನೆಯವರ ದೃಷ್ಟಿಯಲ್ಲಿ ಇಳಿ

(चार)आँखे होना = देखा दखी होना, दृष्टि मिलना। ದೃಷ್ಟಾದೃಷ್ಟಿಯಾಗು, ದೃಷ್ಟಿ ಮಿಲನವಾಗು, ಭೆಟ್ಟಿಯಾಗು, ಕೂಡು.

**आँखड़ी**– स्त्री. दे 'आँख'।

**आँखफाडा**– पु कृतघ्न। ಕೃತಘ್ನ, ಉಪ ಕಾರ ಮನ್ನಿಸದವ.

**आँखमिचौनी, आँखमिचौली, आँखमिझीचनी, आँखमीचनी**– स्त्री. लडकोका एक खेल। ಕಣ್ಣುಮುಚ್ಚಣಿಕೆಯ ಆಟ.

**आँखमुचाई, आँखमुँदाई**–स्त्री दे 'आँखमिचौनी।

**आँग**– पु अंग, शरीर। ದೇಹ, ಶರೀರ.

**आँगन**– पु अँगनाई, चौक। ಅಂಗಳ, ಚೌಕಿ.

**आँगी**– स्त्री चोली। ಕುಪ್ಪಸ, ರವಿಕೆ.

**आँगुर, आँगुल**– पु दे 'उँगली'।

**आँगुरिया, आँगुरी**– स्त्री दे 'उँगली'।

**आँची**– स्त्री. मैदा चालने की चलनी। ಹಿಟ್ಟಿನ ಸಾಣಿಗೆ, ಸೋಸುವ ಜಲ್ಲಡಿ.

**आँच**– स्त्री आग, ज्वाला, चोट, हानि। ಬೆಂಕಿ, ಜ್ವಾಲೆ, ಕಾವು, ನೋವು, ಪೆಟ್ಟು, ವಿಪತ್ತು, ಆಘಾತ, ಹಾನಿ

**आँचना**– सक्रि गरम करना, जलाना। ಕಾಯಿಸು, ಬೆಚ್ಚಗೆ ಮಾಡು, ಉರಿಸು.

**आँचर, आँचल**– पु दे 'अंचल'।

—देना = बच्चेको दूध पिलाना। ಮೊಲೆ ಕೊಡು, ಮಗುವಿಗೆ ಹಾಲು ಕುಡಿಸು.

—पसारना = नम्रता दिखाना, भीख मागना। ನಮ್ರತೆ ತೋರಿಸು, ವಿನಂತಿಸು, ಯಾಚಿಸು, ಭಿಕ್ಷೆ ಬೇಡು.

**आँजना**– सक्रि. अंजन लगाना। ಕಾಡಿಗೆ ಹಚ್ಚು.

**आँट**– स्त्री तर्जनी और अँगूठे के बीचकी जगह, गाँठ, दाँव, दुश्मनी। ತೋರ ಬೆರಳಿನ ಹಾಗೂ ಹೆಬ್ಬೆರಳಿನ ನಡುವಿನ ಭಾಗ, ಗಂಟು, ಮುಡಿಕೆ, ಕಟ್ಟು, ತಂತ್ರ, ವೈರತ್ವ.

**आँट-साँट**– स्त्री. साझा, मेलजोल, गुप्त, आयोजन। ಪಾಲುಗಾರಿಕೆ, ಸ್ನೇಹ, ಒಳಸಂಚು.

**आँटी**–स्त्री सूतका लच्छा, तृणोका पूला। ದಾರದ ಉಂಡಿ, ಲಡಿ, ಹುಲ್ಲಿನ ಸಿವುಡು, ಕಟ್ಟು, ಕಂತೆ

**आँठी**–स्त्री· गाँठ, गुठली, लच्छा। ಗಂಟು, ಕಟ್ಟು, ಬೀಜ, ಹಣ್ಣಿನ ಗೊರಟು, ವಾಟೆ, ಬಳೆ, ನೂಲಿನ ಲಡಿ.

**आँड**– पु. अंडकोश। ಅಂಡಕೋಶ.

**आँडू**– वि. दे 'अंडुआ'।

**आँत**– स्त्री. पेटके भीतरकी लंबी नली।

ಕರುಳು.

**आँदू**– पु बेड़ी, बंधन। ಬೇಡಿ, ಸಂಕೋಲೆ, ಬಂಧನ.

**आंदोलन**– पु. हलचल, धूम। ಚಳುವಳಿ, ಅಂದೋಲನ, ಚಲಿಸುವಿಕೆ, ಗದ್ದಲ.

**आँधी, आँधे**– स्त्री बहुत तेज हवा, अन्धड। ಬಿರುಗಾಳಿ, ಝುಂಝಾವಾತ. वि तेज। ತೀಕ್ಷ್ಣ, ಪ್ರಚಂಡ

**आंयबांय**– स्त्री. व्यर्थकी बात, निरर्थक प्रलाप। ಗೊಡ್ಡು ಹರಟೆ, ಬಡಬಡಿಕೆ

**आंव**– पु एक तरहका चिकना सफेद मल। ಆಮ, ಆಮಶಂಕೆ.

**आंवड़ा**–वि गहरा। ಗಹನ, ಆಳವಾದ.

**आँवल**–स्त्री गर्भस्थ शिशुके चारो ओरकी झिल्ली। ಗರ್ಭಸ್ಥ ಶಿಶುವನ್ನು ಸುತ್ತಿದ ಮಜ್ಜಾತಂತುಗಳು, ಗರ್ಭವೇಷ್ಟನ.

**आँवला**– पु एक पेड तथा उसके फल। ನೆಲ್ಲೀಕಾಯಿ, ನೆಲ್ಲೀಗಿಡ.

**आँवाँ, आवाँ**–पु कुम्हारके बरतन पकानेका गड्ढा। ಕುಂಬಾರರ ಭಟ್ಟಿ, ಆವಿಗೆ.

—**का आँवाँ बिगड़ना** = कुटुबका या समाजका सर्वनाश होना। ಕುಟುಂಬದ ಅಥವಾ ಸಮಾಜದ ಸರ್ವನಾಶವಾಗುವದು

**आँस**– पु आँसू, कष्ट, सूत, रेशा। ಕಣ್ಣೀರು, ಅಶ್ರು, ಕಷ್ಟ, ದಾರ, ನಾರು

**आँसू**– पु अश्रु। ಕಣ್ಣೀರು, ಕಂಬನಿ.

—**पीकर रह जाना** = मन मसोसकर रह जाना। ದುಃಖ ನುಂಗಿಕೊಳ್ಳು, ದುಃಖ ಅಡಗಿಸು, ಸಹಿಸು

—**पोंछना** = तसल्लीदेना = ಧೈರ್ಯ ಹೇಳು, ಸಂತೈಸು, ಸಾಂತ್ವನೆ ಹೇಳು.

**आँहड**– पु बरतन। ಪಾತ್ರೆ, ಮಣ್ಣಿನ ಪಾತ್ರೆ.

**आइंदा**–वि आनेवाला, भाविष्य। ಮುಂಬರುವ, ಭವಿಷ್ಯದ. क्रिवि आगे, भविष्यमें। ಮುಂದೆ, ಭವಿಷ್ಯದಲ್ಲಿ.

**आइ**– स्त्री आयु। ಆಯುಷ್ಯ, ಜೀವನ, ವಯಸ್ಸು.

**आइस, आइसु**– पु. आज्ञा। ಆಜ್ಞೆ, ಆದೇಶ, ಅಪ್ಪಣೆ.

**आई**– स्त्री मृत्यु, नाश। ಮೃತ್ಯು, ಮರಣ, ನಾಶ.

**आईन**– पु कानून, नियम, सजावट। ನಿಯಮ, ಕಟ್ಟಳೆ, ಕಾಯದೆ, ನಿಧಿ, ಶೃಂಗಾರ.

**आईना**– पु दर्पण। ಕನ್ನಡಿ, ದರ್ಪಣ.

**आईना-साज़**– पु शीशा बनाने वाला। ಕನ್ನಡಿ ಮಾಡುವವ, ಕನ್ನಡಿಗೆ ರಸ ಹಾಕುವವ.

**आउ, आऊ**– स्त्री उम्र, आयु। ವಯಸ್ಸು, ಆಯುಷ್ಯ.

**आउबाउ**– पु दे 'आँयबाँय'।

**आक**– पु मदार। ಎಕ್ಕದ ಗಿಡ

**आक़बत**– स्त्री परलोक, मरनेके बादकी दशा। ಪರಲೋಕ, ಮೃತ್ಯುವಿನ

ನಂತರದ ಸ್ಥಿತಿ.

**आक़बत-अंदेश**– पु दूरदर्शी। ದೂರ ದರ್ಶಿ.

**आक़वाक़**– पु दे 'ऑयवॉय

**आकर**–पु भांडार, खानि,भेद। ಭಾಂಡಾರ, ಬೊಕ್ಕಸ, ಗುಂಪು, ಖನಿ, ಗಣಿ, ಪ್ರಕಾರ, ಭೇದ. वि श्रेष्ठ, दक्ष। ಶ್ರೇಷ್ಠ, ಹೆಚ್ಚಿನ, ದಕ್ಷ

**आकरिक**– वि खान खोदनेवाला। ಖನಿ (ಗಣಿ) ಯನ್ನು ಅಗೆಯುವವ.

**आकली**– स्त्री बेचैनी। ಅಶಾಂತಿ, ಕಾತರತೆ.

**आक़ा**– पु. मालिक। ಯಜಮಾನ, ಮಾಲಿಕ, ಒಡೆಯ,ಧನಿ

**आकाशदीया**– पु. आकाशदीप। ಆಕಾಶ ದೀಪ.

**आकाशवृत्ति**– स्त्री अनिश्चित आय। ಅನಿಶ್ಚಿತ ಉಪಜೀವಿಕೆ

**आक़िल**– वि बुद्धिमान। ಬುದ್ಧಿವಂತ, ವಿವೇಕಿ,ಜಾಣ, ಜ್ಞಾಣಾಕ್ಷ.

**आकुल,आकुलित**– वि. व्याकुल,व्याप्त। ವ್ಯಾಕುಲನಾದ, ಗಾಬರಿಯಾದ, ತುಂಬಿದ, ವ್ಯಾಪ್ತ.

**आकुलता**– स्त्री व्याकुलता। ಗಾಬರಿ, ವ್ಯಾಕುಲತೆ,ಅಸ್ವಸ್ಥತೆ, ಉದ್ವಿಗ್ನತೆ, ತವಕ.

**आक्रमण**– पु चढाई, धावा, फैलाव। ದಾಳಿ, ಆಕ್ರಮಣ, ವಿಸ್ತಾರ.

**आक्रांत**– वि जिसपर हमला किया गया हो, घायल, पराजित। ಆಕ್ರಮಿಸಲ್ಪಟ್ಟ, ವಿವಶ, ಗಾಯಗೊಂಡ, ಪರಾಜಿತ, ಸೋತ.

**आक्रोश**– पु कोसना, कटूक्ति। ಬೈಗಳು, ಶಾಪ, ಕಟೂಕ್ತಿ.

**आखत**– पु. अक्षत। ಅಕ್ಷತೆ (ಕುಂಕುಮ ಮಿಶ್ರಿತ), ಮಂತ್ರಾಕ್ಷತೆ

**आख़ता**– वि. बधिया। ಬೀಜ ಹೊಡೆದ, ಅಂಡಕೋಶ ತೆಗೆದ,(ಕುದುರೆ ಮುಂ.) ಕಸಿ ಮಾಡಿದ.

**आखना**–सक्रि. कहना, देखना,चाहना। ಹೇಳು, ನೋಡು, ಇಚ್ಛಿಸು, ಅಪೇಕ್ಷಿಸು.

**आखातीज**–स्त्री. अक्षय तृतीया।ಅಕ್ಷಯ ತೃತೀಯೆ

**आख़िज़**– वि लेनेवाला, उद्धृत करनेवाला। ತೆಗೆದುಕೊಳ್ಳುವವ,ಉದ್ಧೃತ ಮಾಡುವವ, ಯಾವುದಾದರೊಂದು ಲೇಖವನ್ನು ಇದ್ದಂತೆಯೇ ಉದಾಹರಿಸುವವ.

**आख़िर**–क्रिवि. अन्तमे, अवश्य। ಕೊನೆಗೆ, ಕಡೆಗೆ, ಅವಶ್ಯವಾಗಿ पु. अंत। ಕೊನೆ, ಪರಿಣಾಮ. वि अंतिम। ಕೊನೆಯ, ಕಡೆಯ.

**आख़िरकार**–क्रिवि अतमे। ಕೊನೆಯಲ್ಲಿ, ಕಡೆಗೆ.

**आख़िरत**– स्त्री. मृत्युका दिन, सृष्टिके अतका समय,परलोक। ಮೃತ್ಯುದಿನ, ಕೊನೆಯದಿನ, ಸೃಷ್ಟಿಯ ಕೊನೆಯದಿನ, ಪ್ರಳಯ, ಪರಲೋಕ.

**आख़िरी**– वि अंतिम। ಕೊನೆಯ, ಕಡೆಯ.

**आखु**–पु चूहा, सुअर। ಇಲಿ, ಹೆಗ್ಗಣ, ಹಂದಿ.

**आखेट**– पु शिकार। ಬೇಟೆ, ಬೇಟೆಯ ವಶ.

**आखेटक, आखेटी**– पु शिकारी। ಬೇಟೆಗಾರ

**आखोर**– पु घोडोका रहनेका स्थान, कूडाकरकट, निष्प्रयोजक वस्तु। ಕುದುರೆ ಕಟ್ಟುವ ಸ್ಥಳ, ಕಸಕಡ್ಡಿ, ದನಗಳು ತಿಂದ ಮೇಲೆ ಉಳಿದ ಕಸಕಡ್ಡಿ, ನಿಷ್ಪ್ರಯೋಜಕ ವಸ್ತು.

**आख़ता**– दे. 'आखता'।

**आख्या**– स्त्री नाम, यश, व्याख्या। ಹೆಸರು, ಯಶ, ಕೀರ್ತಿ, ವ್ಯಾಖ್ಯೆ.

**आख्यात**– वि प्रसिद्ध। ವಿಖ್ಯಾತ, ಪ್ರಸಿದ್ಧ.

**आगंतुक**– पु अतिथि। ಹೊಸಬ, ಅತಿಥಿ, ಅಭ್ಯಾಗತ वि आनेवाला। ಹೊಸದಾಗಿ ಬರುವವ

**आग**– स्त्री अग्नि, जलन, ईर्ष्या, डाह। ಬೆಂಕಿ, ಅಗ್ನಿ, ಉರಿ, ಅಸೂಯೆ, ಈರ್ಷೆ, ತಾಪ, ದಾಹ.

**—देना** = चितामें आग देना। ಬೆಂಕಿ ಇಡು, ಬೆಂಕಿ ಹಚ್ಚು

**—बबूला होना** = अत्यधिक क्रुद्ध होना। ಬಹಳ ಸಿಟ್ಟಾಗು, ಕ್ರೋಧದಿಂದ ತಪ್ತನಾಗು.

**—लगाना** = जलाना, ईर्ष्या या क्रोध उत्पन्न करना, झगडा उत्पन्न करना। ಸುಡು, ಈರ್ಷೆ ಅಥವಾ ಕ್ರೋಧ ಉತ್ಪನ್ನ ಮಾಡು, ಜಗಳ ಹಚ್ಚು

**आगत**–वि आया हुआ। ಬಂದ, ಹಜರ, ಉಪಸ್ಥಿತ.

**आगत-स्वागत**– पु आदर-सत्कार। ಆದರ ಸತ್ಕಾರ.

**आगम**–पु आगमन, भविष्यकाल, होनहार, संगम, आमदनी, वेद। ಆಗಮನ, ಬರುವಿಕೆ, ಭವಿಷ್ಯ ಕಾಲ, ಮುಂದೆ ಆಗುವದು, ಸಂಗಮ, ಗಳಿಕೆ, ಉತ್ಪನ್ನ, ವೇದ, ಶಾಸ್ತ್ರ.

**आगमजानी, आगमसोची**– वि भावी जाननेवाला। ದೂರದರ್ಶಿ, ಭವಿಷ್ಯ ತಿಳಿದವ.

**आगमी**– पु ज्योतिषी। ಜ್ಯೋತಿಷಿ.

**आगरी**– पु लोनिया। ಉಪ್ಪು ತಯಾರಿಸುವವ, ಉಪ್ಪು ತೆಗೆಯುವವ.

**आगल**– पु ब्योडा। ಅಗಳಿ, ಬೋಲ್ಟು. वि अगला। ಮುಂದಿನ.

**आगवन**–पु आना। ಆಗಮನ, ಬರುವಿಕೆ.

**आगा**– पु आगेका भाग, भविष्य, छाती, परिणाम, मालिक। ಯಾವದೊಂದು ವಸ್ತುವಿನ ಮುಂಭಾಗ, ಭವಿಷ್ಯ, ಎದೆ, ಹಣೆ, ನೆರಗು, ಪರಿಣಾಮ, ಒಡೆಯ.

**—पीछा करना** = दुविधामें पड़ना, हिचकिचाना। ತೊಡಕಿನಲ್ಲಿ ಬೀಳು, ಅನುಮಾನಿಸು, ಹಿಂದೆಮುಂದೆ ನೋಡು.

आग़ाज़–पु आरंभ ।ಆರಂಭ,ಪ್ರಾರಂಭ

आगान– पु प्रसंग, हाल । ಪ್ರಸಂಗ, ಪರಿಸ್ಥಿತಿ, ವೃತ್ತಾಂತ

आगामी–वि आनेवाला, भावी ।ಮುಂದಿನ, ಬರುವ, ಭಾವೀ.

आगाह– वि. वाकिफ । ಪರಿಚಿತ, ಜಾಗೃತ, ಗೊತ್ತಿದ್ದವ. पु. होनहार । ಮುಂದಾಗುವ, ಭವಿಷ್ಯ.

आगाही– स्त्री वाकफियत, पूर्वपरिचय । ಪರಿಚಯ, ಪೂರ್ವ ಸೂಚನೆ, ತಿಳಿವಳಿಕೆ.

आगिल, आगिला– वि दे 'अगला'

आगे, आगू– क्रिवि सामने, भविष्यमें, बाद, पहले । ಮುಂದೆ,ಎದುರಿನಲ್ಲಿ, ಭವಿಷ್ಯದಲ್ಲಿ,ತರುವಾಯ,ಮುಂಚೆ

आगौन– पु आगमन ।ಆಗಮನ,ಬರುವದು.

आघ,आघु–पु मूल्य। ಕಿಮ್ಮತ್ತು,ಮೂಲ್ಯ, ಬೆಲೆ.

आचरना– सक्रि व्यवहार करना,आचरण करना। ವ್ಯವಹರಿಸು,ಆಚರಿಸು.

आचारी– वि. चरित्रवान् । ಸದಾಚಾರಿ, ಸಚ್ಚರಿತ್ರ. पु आचार्य । ಆಚಾರ್ಯ.

आछत– क्रिवि रहते हुए । ಇದ್ದಾಗ, ಹಾಜರಿದ್ದಾಗ.

आछना– अक्रि रहना । ಇರು, ವಾಸ ಮಾಡು.

आछा, आछो– वि. अच्छा । ಒಳ್ಳೆಯ, ಉತ್ತಮ

आज, आजु– क्रिवि. आजदिन,वर्तमान दिन । ಈ ಹೊತ್ತು, ಈಗ,ಈ ದಿನ.

आजकल– क्रिवि. वर्तमान समय, इस समयमे । ಸದ್ಯಕ್ಕೆ,ಪ್ರಸ್ತುತ, ಈಗಿನ ಕಾಲದಲ್ಲಿ.

आज़म–वि. बहुत बडा ।ಬಹಳ ದೊಡ್ಡದಾದ.

आज़मा– पु. परीक्षक । ಪರೀಕ್ಷಕ, ಶೋಧಕ.

आज़माइश–स्त्री. जाँच, परख ।ಪರೀಕ್ಷೆ, ಶೋಧನೆ, ವಿಮರ್ಶೆ.

आज़माना– सक्रि जाँचना, परखना । ಪರೀಕ್ಷಿಸು, ಒರೆಗೆ ಹಚ್ಚು, ವಿಮರ್ಶಿಸು, ಅನುಭವ ತೆಗೆದುಕೊಳ್ಳು.

आज़मूदा– वि परीक्षित । ಪರೀಕ್ಷಿಸಲ್ಪಟ್ಟ

आज़मूदाकार–वि अनुभवी । ಅನುಭವವುಳ್ಳ, ಚತುರ.

आजा– पु. पिताका पिता । ತಂದೆಯ ತಂದೆ, ಅಜ್ಜ, ಪಿತಾಮಹ

आज़ाद–वि स्वतंत्र, निर्भय । ಸ್ವತಂತ್ರ, ನಿಶ್ಚಿಂತ, ಅಂಜಿಕೆ ಇಲ್ಲದ, ನಿರ್ಭಯನಾದ.

आज़ादी– स्त्री स्वतंत्रता, बेपरवाही बंधन-मुक्ति । ಸ್ವಾತಂತ್ರ್ಯ,ಮುಕ್ತಿ, ನಿಶ್ಚಿಂತೆ, ಬಿಡುಗಡೆ

आज़ार– पु बीमारी, कष्ट । ರೋಗ, ಜಡ್ಡು, ಕಷ್ಟ, ಸಂಕಟ

आजिज़– वि परेशान, दीन, नम्र । ವ್ಯಾಕುಲ, ತ್ರಾಸ ಹೊಂದಿದ,ದೀನ, ನಮ್ರ.

**आजिज़ी**– स्त्री दैन्य, विनम्रता। ದೈನ್ಯ, ನಮ್ರತೆ, ವಿನಂತಿ

**आजी**– स्त्री दादी। ತಂದೆಯ ತಾಯಿ, ಅಜ್ಜಿ.

**आजीविका**– स्त्री जीवन निर्वाहका साधन। ವೃತ್ತಿ, ಕೆಲಸ, ಹೊಟ್ಟೆ ತುಂಬಿಕೊಳ್ಳುವ ಉದ್ಯೋಗ.

**आटना**– सक्रि दबाना, नीचे ढँकना। ಹೂಳು, ಮುಚ್ಚು, ಬಚ್ಚಿಡು.

**आटा**– पु पिसान, चूर्ण। ಹಿಟ್ಟು, ಚೂರ್ಣ.

—**गीला होना** = आफतमें फँसना, असहाय होना, घाटा होना। ಸಂಕಟದಲ್ಲಿ ಸಿಗು, ಅಸಹಾಯನಾಗು, ಹಾನಿಯಾಗು. **आटे दालका भाव मालूम होना** = संसारकी बातें मालूम होना। ಕಣ್ಣು ತೆರೆ, ಜಗತ್ತಿನ ನಿಜವಾದ ಪರಿಸ್ಥಿತಿಯ ಅರಿವಾಗು **आटे दालकी फिक्र** = जीवन निर्वाह की चिंता। ಹೊಟ್ಟೆಯ ಕಾಳಜಿ, ಜೀವನ ನಿರ್ವಾಹದ ಚಿಂತೆ.

**आटोप**– पु घमंड, आडंबर। ನೊಕ್ಕು, ರೀವಿ, ಆಡಂಬರ, ಅಳಕು.

**आठ**– वि ८। ಎಂಟು

—**आठ आँसू रोना** = अति विलाप करना। ಅತ್ತು ಅತ್ತು ಕಣ್ಣು ಕೊಳೆ, ಬಹಳ ಅಳು. **आठों गांठ कुम्मैत** = सब गुणों से युक्त। ಸರ್ವಗುಣ ಸಂಪನ್ನ **आठों पहर** = दिनरात। ಹಗಲು ರಾತ್ರಿ

**आडंबर**– पु तड़क भड़क, तंबू, आनंद, आच्छादन, गंभीर ध्वनि। ಆಡಂಬರ, ಡೌಲು, ಡೇರೆ, ಆಚ್ಛಾದನ, ಗಂಭೀರ ಧ್ವನಿ (ತುತೂರಿ, ನಗಾರಿ, ಮುಂ)

**आड**– स्त्री परदा, रक्षा, रोक, ओट, लंबी टिकली, आधार, बिच्छू का डंक। ಪರದೆ, ರಕ್ಷಣೆ, ಆಶ್ರಯ, ಅಡ್ಡಿ, ಮರೆ, ಉದ್ದವಾದ ತಿಲಕ, ಆಧಾರ, ಆನಿಕೆ, ಊರೆ, ಚೇಳಿನ ಕೊಂಡಿ.

**आडन**– स्त्री ढाल। ಗುರಾಣಿ.

**आडना**– सक्रि. रोकना, बांधना, आधार देना, गिरवी रखना। ಅಡ್ಡಿ ಮಾಡು, ತಡೆ, ಕಟ್ಟು, ಆಶ್ರಯ ಕೊಡು, ಆಧಾರ ಕೊಡು, ಅಡವು ಇಡು.

**आडा**– वि तिरछा। ಡೊಂಕಾದ, ಅಡ್ಡ, पु धारीदार कपड़ा, शहतीर। ಗೆರೆಗಳುಳ್ಳ ಬಟ್ಟೆ, ಗೀರಿನ ಬಟ್ಟೆ, ಉದ್ದವಾದ ತೊಲೆ, ದೂಲ **आडे हाथों लेना** = व्यंग बाण छोडकर लज्जित करना। ವ್ಯಂಗ ಮಾತಿನಿಂದ ಲಜ್ಜಿತ ಪಡಿಸು, ಹಿಂದೆ ಮುಂದೆ ಬೋಳಿಸು.

**आडी**– स्त्री पक्ष, तरफ। ಪಕ್ಷ, ಕಡೆಗೆ पु सहायक, रक्षक। ಸಹಾಯಕ, ರಕ್ಷಕ. अव्य (की) तरफ। ಕಡೆಗೆ

**आढ**–पु चार सेर की तौल, आड, आश्रय,

अंतर। ನಾಲ್ಕು ಸೇರಿನ ತೂಕ, ಮರಿ, ಅಪ್ರಿಯ, ಅಂತರ वि भरा हुआ। ತುಂಬಿದ.

आढक– पु चार सेर, अरहर। ನಾಲ್ಕು ಸೇರಿನ ತೂಕ ಅಥವಾ ಮಾಪ, ತೊಗರಿ.

आढत– स्त्री कमीशन लेकर बिक्री करनेका काम, आढतका माल रखनेकी जगह। ದಲಾಲಿನ ಕೆಲಸ,ದಳ್ಳಾಳಿ, ವಖಾರ, ದಲಾಲಿ ಅಂಗಡಿ.

आढतिया– पु. आढतका रोजगार करनेवाला। ದಳ್ಳಾಳಿ ಅಂಗಡಿಯುವ, ದಲಾಲ, ಏಜಂಟ, ವಖಾರದವ.

आतंक– पु. रोब, भय। ಪ್ರಭಾವ, ಭಯ, ಅಂಜಿಕೆ, ಭೀತಿ.

आतताई–पु. जालिम,आग लगानेवाला, लुटेरा। ಅತ್ಯಾಚಾರಿ, ಬೆಂಕಿ ಹಚ್ಚುವವ, ಕೊಳ್ಳೆ ಹೊಡೆಯುವವ.

आतप– पु धूप, गरमी। ಬಿಸಿಲು, ಸೂರ್ಯ ಪ್ರಕಾಶ, ಉಷ್ಣತೆ.

आतपी– पु सूर्य। ಸೂರ್ಯ. वि धूपका। ಬಿಸಿಲಿನ.

आतमा– स्त्री. आत्मा। ಆತ್ಮ.

आतश, आतिश– स्त्री. अग्नि, क्रोध। ಅಗ್ನಿ, ಬೆಂಕಿ, ಪ್ರಕಾಶ, ಸಿಟ್ಟು, ಕ್ರೋಧ.

आतशखाना, आतशदान– पु. अंगीठी। ಅಗ್ನಿಷ್ಟಿಕೆ, ಅಗ್ನಿಕುಂಡ.

आतश-परस्त– पु. अग्निपूजक। ಅಗ್ನಿ ಪೂಜಕ.

आतशबाज़– पु वह जो आतशबाजी बनाता हो। ಬಾಣ, ಬಿರುಸು ಮಾಡುವವ, ಮದ್ದು ಮಾಡುವವ.

आतशबाज़ी– स्त्री बारूदके बने हुए खिलौनोंका जलना। ಬಾಣಬಿರುಸುಗಳ ದೃಶ್ಯ. ಮದ್ದು ಸುಡುವದು.

आतिफ– वि कृपालु। ಕೃಪಾಳು, ದಯವಂತ.

आतिफत– स्त्री कृपा। ಅನುಗ್ರಹ, ಕೃಪೆ.

आतिश– स्त्री. द 'आतश'।

आतिश-मिज़ाज– वि गुस्सेवर। ಸಿಟ್ಟಿನ, ಸಿಡುಕು ಸ್ವಭಾವದವ.

आत्मिक–वि· अपना, मानसिक,आत्मासंबंधी। ತನ್ನ, ಮಾನಸಿಕ,ಆತ್ಮಕ್ಕೆ ಸಂಬಂಧಿಸಿದ.

आत्मीय– वि अपना, निजी, स्वर्गीय। ತನ್ನ, ಆತ್ಮಸಂಬಂಧದ, ಸ್ವಂತದ, ಸ್ವರ್ಗೀಯ पु संबंधी,रिश्तेदार। ಸಂಬಂಧಿಕ, ನೆಂಟ, ಬಂಧು.

आत्मोत्सर्ग– पु दूसरे के लिये स्वार्थत्याग। ಸ್ವಾರ್ಥತ್ಯಾಗ, ಆತ್ಮೋತ್ಸರ್ಗ.

आथना– अक्रि होना, रहना। ಆಗು, ಇರು

आदत– स्त्री. स्वभाव, अभ्यास। ಸ್ವಭಾವ, ಅಭ್ಯಾಸ, ಚಟ, ರೂಢಿ, ವಾಡಿಕೆ.

आदतन– क्रिवि आदतसे। ಸ್ವಾಭಾವಿಕವಾಗಿ, ವಾಡಿಕೆಯಾಗಿ.

**आदम**– पु मनुष्योंका आदि पिता, आदमी । ಮಾನವ ಜಾತಿಯ ಆದಿ ಪುರುಷ, ಮನುಷ್ಯ

**आदमियत**– स्त्री मनुष्यता । ಮನುಷ್ಯತ್ವ, ಮಾನವತೆ.

**आदमी**– पु मनुष्य । ಮನುಷ್ಯ, ಮಾನವ

—**बनना** = सुसंस्कृत होना । ಸಭ್ಯತನದಿಂದ ವರ್ತಿಸು, ಸುಸಂಸ್ಕೃತನಾಗು.

**आदर**– पु सन्मान, मर्यादा । ಗೌರವ, ಸನ್ಮಾನ, ಮರ್ಯಾದೆ

**आदरना**– सक्रि इज्जत करना । ಗೌರವಿಸು, ಮರ್ಯಾದೆ ಮಾಡು

**आदान प्रदान**– पु लेना देना । ಕೊಡಕೊಳ್ಳುವಿಕೆ

**आदाब**– पु नमस्कार, कायदा । ನಮಸ್ಕಾರ, ಪ್ರಣಾಮ, ಶೀಲ, ಮರ್ಯಾದೆ, ನಿಯಮ, ಕಾನೂನು

**आदि**– अव्य वगैरह । ಮುಂತಾದ, ಇತ್ಯಾದಿ. वि आरंभका । ಮೊದಲಿನ, ಆರಂಭದ पु आरभ । ಆರಂಭ

**आदिम**– वि पहला । ಪ್ರಥಮ, ಮೊದಲಿನ, ಆರಂಭದ.

**आदिमा**– स्त्री भूमि, पृथ्वी । ಭೂಮಿ, ಪೃಥ್ವಿ

**आदी**– वि अभ्यस्त । ಅಭ್ಯಸ್ತ, ನುರಿತ, ವಾಡಿಕೆಯಾದ, ರೂಢಿಯುಳ್ಳ. स्त्री. दे 'अदरक'।

**आदेश**– पु आज्ञा, उपदेश । ಆಜ್ಞೆ, ಉಪದೇಶ, ಆದೇಶ.

**आध, आधा**– वि अर्द्ध । ಅರ್ಧ. **अेक आध** = कुछ । ಒಂದೆರಡು. **आधा तीतर आधी बटेर** = अस्तव्यस्त, अधूरा । ಅಸ್ತವ್ಯಸ್ತ, ಅರ್ಧಮರ್ಧ, ಕಚ್ಚಾ.

**आधासीसी**– स्त्री आधे सिरका दर्द । ಅರೆತಲೆ ನೋವು.

**आधुनिक**– वि आजकलका । ಸದ್ಯದ, ವರ್ತಮಾನ ಕಾಲದ, ನವೀನ.

**आध्यात्मिक**– वि आत्मा संबंधी, परमात्मा संबंधी । ಆತ್ಮ ಸಂಬಂಧವಾದ, ಪರಮಾತ್ಮ ಸಂಬಂಧದ, ಆಧ್ಯಾತ್ಮಿಕ.

**आन**– स्त्री मर्यादा, शपथ, घोषणा, शान, शर्म, भय, क्षण, रीति, प्रेम । ಮಾನ, ಮರ್ಯಾದೆ, ಸೀಮೆ, ಆಣೆ, ಘೋಷಣೆ, ಡೌಲು, ಜಂಭ, ಗರ್ವ ನಾಚಿಕೆ, ಭಯ, ಕ್ಷಣ, ರೀತಿ, ಪ್ರೀತಿ वि अन्य । ಅನ್ಯ, ಎರಡನೆಯ

—**की आनमे**– अति शीघ्र । ಕೂಡಲೆ, ನೋಡು ನೋಡುವಷ್ಟರಲ್ಲಿ, ಅತಿ ಶೀಘ್ರವಾಗಿ, ತಕ್ಷಣ

**आनक**–पु नगाडा, गरजनेवाला बादल । ನಗಾರಿ, ದುಂದುಭಿ, ಭೇರಿ, ಗರ್ಜಿಸುವ ಮೋಡ.

**आनन**– पु मुख । ಮುಖ, ಮೋರೆ

—**फानन** = क्रिवि तुरत, झट । ಕೂಡ-

ಲೆ, ತತ್ಕ್ಷಣ.

**आनना**– संक्रि लाना । ತರು.

**आनबान**– स्त्री. अंक्रि सजधज, शान । ಶೃಂಗಾರ, ಶೋಭೆ, ಡೌಲು, ವಿಜೃಂಭಣೆ, ವೈಖರಿ.

**आना**– अंक्रि पहुचना, उत्पन्न होना, समाना, प्राप्त होना, मिलना दामपर मिलना । ಬರು, ಆಗಮಿಸು, ಮುಟ್ಟು, ತಲುಪು, ಹುಟ್ಟು, ಉದ್ಭವಿಸು, ಹಿಡಿಸು, ಸಿಗು, ಪ್ರಾಪ್ತವಾಗು. ಬೆಲೆಗೆ ಸಿಗು, ಸಂಭವಿಸು, ಒದಗು. **आया गया** = अतिथि । ಅತಿಥಿ. **आये दिन** = प्रतिदिन । ಪ್ರತಿದಿನ.

**आनाकानी**–स्त्री. टालमटूल,आगापीछा। ದುರ್ಲಕ್ಷ್ಯ, ಅಲಕ್ಷ್ಯ, ಹೊತ್ತುಗಳೆಯುವಿಕೆ, ಅನುಮಾನಿಸುವಿಕೆ, ಕೇಳಿಯೂ ಕೇಳದಂತಿರುವದು.

**आनाय**– पु मछली पकड़ने का जाल । ಮೀನ ಹಿಡಿಯುವ ಜಾಲ.

**आनि**– स्त्री दे 'आन'।

**आनुमानिक**– वि. अंदाजन् । ತರ್ಕದ, ಕಲ್ಪನೆಯ, ಊಹೆಯ.

**आप**–सर्व. स्वयं, तुम, वे। ಸ್ವತಃ,ತಾವು, ಅವರು.पु. पानी, परमात्मा । ನೀರು, ದೇವರು.

—**ही आप** = स्वगत, अपने मनसे । ತಾನೇ, ತನ್ನಲ್ಲಿಯೇ, ಸ್ವಗತ, ತನ್ನ ಮನಸ್ಸಿನಿಂದ.

—**करना** = आदर दिखलाना । ಆದರ ತೋರಿಸು.

—**आपकी पडना** = अपने ही स्वार्थ में लगे रहना । ತಮ್ಮ ತಮ್ಮ ಕೆಲಸದಲ್ಲಿ ಮಗ್ನನಾಗಿರು.

**आपकाजी**– पु स्वार्थी । ಸ್ವಾರ್ಥಿ, ಒಳಗುಟ್ಟಿನವ.

**आपण**– पु. बाजार । ಸಂತೆ, ಪೇಟೆ.

**आपत्ति**– स्त्री दुःख, एतराज, दोष लगाना । ದುಃಖ,ಸಂಕಟ,ವಿಪತ್ತು, ಆಕ್ಷೇಪಣೆ, ವಿರೋಧ, ಅಡ್ಡಿ, ದೋಷಾರೋಪಣೆ.

**आपद, आपदा**– स्त्री आपत्ति, दुःख । ಸಂಕಟ,ವಿಪತ್ತು, ದುಃಖ, ಕ್ಲೇಶ

**आपन, आपनो**– सर्व. अपना । ತನ್ನ.

**आपनपो, आपनपौ**– पु आत्मभाव, अहंकार । ಆತ್ಮಭಾವ, ಅಹಂಕಾರ.

**आपरूप**– वि. साक्षात् । ಸಾಕ್ಷಾತ್. सर्व स्वयं आप । ತಾನೇ, ಸ್ವತಃ.

**आपस**– पु संबंध । ಸಂಬಂಧ, ಪರಸ್ಪರ.

**आपसमें**–परस्पर । ಪರಸ್ಪರರಲ್ಲಿ,ತಮ್ಮತಮ್ಮೊಳಗೆ.

**आपसदारी**– स्त्री भाईचारा । ಪರಸ್ಪರ ವರ್ತನೆ, ಬಂಧುತ್ವ

**आपसी**– वि आत्मीय, संबंधी । ಆತ್ಮೀಯ, ಪರಸ್ಪರರ, ಸಂಬಂಧದ.

**आपा**– पु. सुधबुध, अहंकार, स्वत्व । ಪ್ರಜ್ಞೆ, ಗರ್ವ, ಸೊಕ್ಕು, ಅಹಂಕಾರ, ಸ್ವರೂಪ, ಸ್ವತ್ವ. **आपेमें आना या आपेमें होना** = होश

संभालना। ಪ್ರಜ್ಞೆಗೆ ಬರು, ಮೂರ್ಛೆಯಿಂದ ಏಳು **आपेसे बाहर होना** = अत्यंत उत्तेजित होना क्रोध या आनंदकी प्रबलतामें अपने आपको भूल जाना। ಪ್ರಜ್ಞೆ ಕಳಕೊಳ್ಳು, ಕ್ರೋಧದಿಂದ ಸಂತಪ್ತನಾಗು, ಮೂರ್ಛೆ ಹೊಂದು.

**आपात**– पु पतन, घटनाका होना, अंत, आरंभ। ಅಧಃಪತನ, ಅನಪೇಕ್ಷಿತವಾಗಿ ಸಂಭವಿಸಿದ ಘಟನೆ, ಅಂತ, ಕೊನೆ, ಆರಂಭ.

**आपातत** – क्रिवि अकस्मात्, तुरंत, निदान। ಅಕಸ್ಮಾತ್ತಾಗಿ, ಕೂಡಲೆ, ತಕ್ಷಣ, ಕಡೆಗೆ.

**आपादमस्तक**– वि सिर से पैरतक। ಅಡಿಯಿಂದ ಮುಡಿಯ ವರೆಗೆ, ಪಾದದಿಂದ ತಲೆಯ ವರೆಗೆ

**आपाधापी**– स्त्री अपनी अपनी चिंता, खींचतान। ವೈಯಕ್ತಿಕ ಚಿಂತೆ, ವೈಯಕ್ತಿಕ ದ್ವೇಷ, ಎಳೆದಾಟ, ಜಗ್ಗಾಟ

**आपान, आपानक**– पु शराब पीनेका स्थान या शराबियोंका समूह। ಸೆರೆ ಕುಡಿಯುವ ಸ್ಥಳ ಅಥವಾ ಸೆರೆ ಗುಡುಕರ ಸಮೂಹ.

**आपु**– सर्व आप। ತಾವು, ಸ್ವತಃ

**आपुन, आपुनो**– सर्व अपना। ತನ್ನ, ಸ್ವಂತದ

**आफ़त**– स्त्री मुसीबत, ऊधम। ಸಂಕಟ, ಕಷ್ಟ, ವಿಪತ್ತು, ಉಪದ್ರವ

—**झेलना या उठाना**= तकलीफ सहना। ಸಂಕಟ ಸಹಿಸು, ಕಷ್ಟಪಡು.

—**मचाना** = उपद्रव करना, बेचैन करना। ಉಪದ್ರವ ಕೊಡು, ವ್ಯಾಕುಲಗೊಳಿಸು, ಗಲಾಟೆ ಮಾಡು.

—**का परकाला**= घोर प्रयत्न करनेवाला, अति कुशल। ಬಹಳ ಪ್ರಯತ್ನ ಮಾಡುವವ, ಲಗುಬಗೆಯಿಂದ ಕೆಲಸ ಮಾಡುವವ, ಅತಿ ಕುಶಲ

**आफ़ताब**– पु सूर्य। ಸೂರ್ಯ

**आब**– स्त्री चमक, आभा, शोभा, प्रतिष्ठा। ಕಾಂತಿ, ಹೊಳಪು, ಪ್ರಕಾಶ, ಶೋಭೆ, ಸೌಂದರ್ಯ, ಮಾನ, ಪ್ರತಿಷ್ಠೆ पु पानी। ನೀರು.

**आबकार**– पु शराब बेचनेवाला। ಸೆರೆ ಸಿಂದಿಗಳನ್ನು ಮಾರುವವ

**आबकारी**– स्त्री शराबखाना, सरकारी महकमा। ಸಿಂದಿ ಸೆರೆಗಳ ಅಂಗಡಿ, ಮಾದಕ ಪದಾರ್ಥಗಳ ಖಾತೆ, ಸೇಂದಿ ಇಲಾಖೆ.

**आबखोरा**– पु पानी पीनेका बर्तन। ನೀರು ಕುಡಿಯುವ ಪಾತ್ರೆ, ಪಾಟೀ, ಚೆಂಬು, ಬಟ್ಟಲು

**आबजोश**– पु शोरबा, एक प्रकारका मुनक्का। ಮಾಂಸದ ಸಾರು. ಒಂದು ತರದ ದ್ರಾಕ್ಷೆ

**आबताब**– स्त्री शोभा, चमकदमक। ಶೋಭೆ, ವೈಭವ, ಆಡಂಬರ, ಠೀವಿ

**आबदाना**– पु जीविका, अन्नजल। ಉಪಜೀವನ, ಅನ್ನನೀರು, ಜೀವ

ಸೋಗಿವಾಯು.

**आवदार**– वि. चमकवाला । ಕಾಂತಿ ಯುಳ್ಳ, ಹೊಳೆಯುವ, ನೀರುಳ್ಳ, ಮಿನುಗುವ.

**आवदारी**– स्त्री चमक, शोभा । ಕಾಂತಿ, ತೇಜ, ಹೊಳಪು, ಶೋಭೆ.

**आवनूस**– पु. अेक जंगली पेड़ जिसकी लकड़ी का हीर काला होता है। ಒಂದು ಗಿಡ ( ಅದರ ಕಟ್ಟಿಗೆಯು ಕರಿದಾಗಿರುತ್ತದೆ )

**—का कुन्दा** = बहुत काला आदमी । ಅತಿ ಕಪ್ಪು ಮನುಷ್ಯ.

**आवनूसी**– वि बहुत काला । ಅತಿ ಕಪ್ಪು ಬಣ್ಣದ, ಕಾಡಿಗೆ ಕಪ್ಪು.

**आवपाशी**– स्त्री. सिंचाई। ನೀರು ಸಿಂಪಡಿಸುವಿಕೆ, ನೀರು ಹಾಯಿಸುವಿಕೆ, ನೀರಾವರಿ.

**आवरवाँ**–स्त्री. बारीक मलमल । ಒಂದು ತರದ ಮಲಮಲು ಬಟ್ಟೆ.

**आवरू**–स्त्री. इज्जत, मान । ಮರ್ಯಾದೆ, ಪ್ರತಿಷ್ಠೆ, ಮಾನ, ಗೌರವ.

**—उतारना**= प्रतिष्ठा नष्ट करना। ಮಾನ ಕಳೆ

**आवला**– स्त्री. छाला, फफोला । ಗುಳ್ಳೆ.

**आवहवा**– स्त्री जलवायु । ವಾಯು ಗುಣ, ಹವಾಮಾನ.

**आवाद**– वि बसा हुआ, प्रसन्न, वासोपयोगी । ಸ್ಥಾಪಿತ, ನೆಲಸಿದ, ಆನಂದಿತ, ಸುಖಿ, ಸಂಪನ್ನ, ಸಮೃದ್ಧ, ಬೆಳೆಯುಳ್ಳ, ನಾಗುವಳಿಗೆ ಯೋಗ್ಯವಾದ.

**आवादी**–स्त्री जनसंख्या, खेतीकी भूमि। ಜನಸಂಖ್ಯೆ, ವಸತಿ, ನಾಗು ಮಾಡಿದ ಭೂಮಿ.

**आविद**– पु. भक्त । ಆರಾಧಕ, ಭಕ್ತ.

**आवी**– वि. पानी संबंधी या पानीका, फीका। ನೀರಿನ ಸಂಬಂಧವಾದ, ನೀರಿನ, ನೀರಿನಲ್ಲಿಯ, ಮಂದವಾದ, ತಿಳಿಯಾದ ಬಣ್ಣದ. पु. समुंद्रका नमक। ಸಮುದ್ರದಿಂದ ತೆಗೆದ ಉಪ್ಪು.

**आभरण, आभरन**– पु. गहना, पालन पोषण। ಅಲಂಕಾರ, ಭೂಷಣ, ಒಡವೆ, ಆಭರಣ, ಪಾಲನೆ-ಪೋಷಣೆ.

**आभा**–स्त्री कांति, शोभा, झलक, परछाईं। ಕಾಂತಿ, ಶೋಭೆ, ಹೊಳಪು, ಪ್ರತಿಬಿಂಬ.

**आभारी**– वि कृतज्ञ, उपकार माननेवाला। ಕೃತಜ್ಞ, ಉಪಕಾರ ಮನ್ನಿಸುವವ.

**आभास**– पु प्रतिबिंब, झलक, प्रकाश। ಛಾಯೆ, ಪ್ರತಿಬಿಂಬ, ದೃಶ್ಯ, ಪ್ರಕಾಶ, ಕಾಂತಿ.

**आभीर**– पु अहीर। ಗೊಲ್ಲ, ಗವಳಿಗ.

**आभूषण, आभूषन**–पु. गहना, अलंकार। ಆಭರಣ, ಅಲಂಕಾರ, ಒಡವೆ.

**आम**– पु. एक फल या पेड़, आँव। ಮಾವು, ಮಾವಿನ ಮರ, ಆಮಶಂಕೆ. वि कच्चा, साधारण, प्रसिद्ध। ಕಚ್ಚಾ,

ಅಪರಿಪಕ್ವ, ಸರ್ವಸಾಧಾರಣ. ಪ್ರಸಿದ್ಧ

**आमखास**– पु राजसभा। ರಾಜಸಭೆ

**आमतौरसे, आमतौरपर**–क्रिवि साधारणतया। ಸಾಧಾರಣವಾಗಿ, ಸಾಮಾನ್ಯವಾಗಿ.

**आमद**–स्त्री आगमन, आमदनी। ಬರುವಿಕೆ, ಆಗಮನ, ಗಳಿಕೆ, ಉತ್ಪನ್ನ, ವರಮಾನ.

**आमदनी**– स्त्री आय, प्राप्ति। ಗಳಿಕೆ, ಉತ್ಪನ್ನ, ಲಾಭ, ಆಮದು, ಪ್ರಾಪ್ತಿ, ವರಮಾನ.

**आमदरफ़्त**– स्त्री आना जाना, आय। ಬರಹೋಗುವಿಕೆ, ರಹದಾರಿ ಉತ್ಪನ್ನ, ಗಳಿಕೆ

**आमफहम**– वि. जनसाधारण के समझने योग्य, सरल। ಸಾಮಾನ್ಯ ಜನತೆಗೆ ತಿಳಿಯಬಹುದಾದ, ಸರಳವಾದ, ಸುಲಭವಾದ.

**आमना सामना**–पु मिलन, मुकाबला। ಭೆಟ್ಟಿ, ಸಂದರ್ಶನ, ಎದುರು ಬದುರು

**आमने-सामने**– क्रिवि प्रत्यक्ष, सन्मुख। ಪ್ರತ್ಯಕ್ಷವಾಗಿ, ಸಮ್ಮುಖವಾಗಿ, ಎದುರು-ಬದುರಾಗಿ

**आमरण**–क्रिवि मृत्युपर्यंत, मरने के समय-तक। ಮರಣದ ವರೆಗೆ, ಸಾಯುವ ತನಕ

**आमलक**– पु **आमलकी**- स्त्री आँवला। ನೆಲ್ಲೀಕಾಯಿ.

**आमादगी**– स्त्री आमादा होनेकी क्रिया या भाव। ಸಿದ್ಧತೆ, ತತ್ಪರತೆ

**आमादा**–त्रि. तैयार, उद्यत। ಸಿದ್ಧವಾದ, ತಯಾರಾದ, ಉದ್ಯತ. ತತ್ಪರ.

**आमाल**– पु. करतूत। ಕೆಲಸ, ನಡೆವಳಿಕೆ, ವರ್ತನ, ಕರ್ಮ, ಕೃತ್ಯ.

**आमालनामा**– पु नौकरोंके चालचलन दर्ज करनेका रजिस्टर। ಶರಾ ಪುಸ್ತಕ, ನೌಕರರ ವರ್ತನೆ-ಪುಸ್ತಕ

**आमास**– स्त्री सूजन। ಬಾವು, ಉಬ್ಬರ, ಅವಯವದ ಊದುವಿಕೆ.

**आमिर, आमिल**–पु काम करनेवाला, हाकिम, कारीगर। ಕೆಲಸ ಮಾಡುವವ, ಕರ್ತವ್ಯಪರಾಯಣ, ಅಧಿಕಾರಿ, ಶಿಲ್ಪಿ वि खट्टा। ಹುಳಿಯಾದ.

**आमिष**– पु. मांस, लोभ, भोग्य वस्तु। ಮಾಂಸ, ಲೋಭ, ಭೋಗ್ಯವಸ್ತು, ಸುಖಸಾಧನ.

**आमी**– स्त्री छोटा कच्चा आम, गेहूँ जव की भूनी हुयी बाल। ಮಾವಿನ ಹೀಚು, ಎಳೆ ಮಾವು, ಮಿಡಿಗಾಯಿ. ಗೋದಿ, ಜೋಳ ಮುಂತಾದವುಗಳ ಸುಟ್ಟ ತೆನೆ, ಬೆಳಸಿ.

**आमीन**– अव्य तथास्तु, भगवान ऐसा ही करे। ತಥಾಸ್ತು, ದೇವರು ಹಾಗೆಯೇ ದಯಪಾಲಿಸಲಿ

**आमूदा**– वि सजा हुआ। ಅಲಂಕೃತ, ಶೃಂಗರಿಸಿದ

**आमेज़ना**– सक्रि मिलाना। ಕೂಡಿಸು,

ಕಲಸು, ಬೆರಸು.

**आमेज़िश**— स्त्री मिलाने की क्रिया, मिलावट । ಕೂಡಿಸುವದು, ಕಲಸುವದು, ಬೆರಿಕೆ.

**आमोद**— पु. आनंद, सुगंधी । ಆನಂದ, ಪ್ರಸನ್ನತೆ, ಸುಗಂಧ.

**आमोद प्रमोद**—पु. भोगविलास । ಭೋಗವಿಲಾಸ, ಸುಖಸಂತೋಷ, ಆನಂದ.

**आमोदी**— वि हर्षयुक्त, गंधयुक्त । ಆನಂದಿತ, ಪ್ರಸನ್ನ, ಸುಗಂಧಿತ

**आम्नाय**— पु. वेद, उपदेश, अभ्यास, परंपरा । ವೇದ, ಶಾಸ್ತ್ರ, ಉಪದೇಶ, ಅಭ್ಯಾಸ, ರೂಢಿ, ರೀತಿ, ಪರಂಪರೆ.

**आम्र**— पु. आमका वृक्ष या फल । ಮಾವಿನ ಮರ, ಮಾವಿನ ಹಣ್ಣು.

**आयँती-पायँती**— स्त्री. सिरहाना, पैताना । ಮಂಚದ ತಲೆಯ ಕಡೆಯ ಹಾಗೂ ಕಾಲು ಕಡೆಯ ಭಾಗ.

**आय**— स्त्री. आमदनी । ಪ್ರಾಪ್ತಿ, ಉತ್ಪನ್ನ, ಗಳಿಕೆ.

**आयत**— वि. विशाल, लंबाचौड़ा । ವಿಶಾಲ, ವಿಸ್ತೃತ. स्त्री कुरानका वाक्य । ಕುರಾನದೊಳಗಿನ ವಾಕ್ಯ.

**आयताक्ष**— वि बड़ी बड़ी आँखवाला । ದೊಡ್ಡ ದೊಡ್ಡ ಕಣ್ಣುಗಳುಳ್ಳ.

**आयसु**— स्त्री आज्ञा । ಆಜ್ಞೆ, ಆದೇಶ

**आया**— स्त्री. दाई । ದಾಯಿ, ನರ್ಸು. अव्य. क्या, या । ಏನು, ಅಥವಾ, ಎರಡರಲ್ಲಾವದು ?

**आयात**— पु. बाहरसे आया हुआ माल । ಹೊರಗಿನಿಂದ ಬಂದ ಸರಕು, ಆಮದು ಮಾಲು.

**आयास**— पु परिश्रम । ಪರಿಶ್ರಮ, ಆಯಾಸ, ದಣಿವು.

**आयु**— स्त्री उम्र, अवस्था । ವಯಸ್ಸು.

**आयोजन**— पु संग्रह का कार्य, प्रबंध, नियुक्ति, उद्योग । ಸಂಗ್ರಹದ ಕೆಲಸ, ವ್ಯವಸ್ಥೆ, ಹಂಚಿಕೆ, ಯೋಜನೆ, ನಿಯುಕ್ತಿ, ಉದ್ಯೋಗ.

**आर**— पु. किनारा, कोना, निकृष्ट लोहा, पीतल, चर्म, पहियेकी तीली । ದಂಡೆ, ದಡ, ಮಗ್ಗಲು, ಪಾರ್ಶ್ವ, ಕೆಳತರ ಗತಿಯ ಕಬ್ಬಿಣ, ಹಿತ್ತಾಳೆ, ನಾಚಿಕೆ, ಗಾಲಿಯ ಎಲೆ.

**आर**— स्त्री. हठ, अड़, सूआ, डंक, बिच्छू, सूजा । ಹಟ, ದಪ್ಪ ಸೂಜಿ, ದಬ್ಬಣ, ದಂಶ, ಕಡಿಯುವದು, ಚೇಳು, ಚೇಳಿನ ಕೊಂಡಿ, ಮೊಚ್ಚೆಗಾರನ ಆಯುಧ, ಮೋಚಿಯ ಸೂಜಿ.

**आरज़ा**— पु रोग । ರೋಗ, ಜಡ್ಡು, ಕಾಯಿಲೆ.

**आरज़ू**— स्त्री इच्छा, विनय । ವಿನಂತಿ, ಪ್ರಾರ್ಥನೆ, ಇಚ್ಛೆ, ಕೋರಿಕೆ, ಅಭಿಲಾಷೆ, ಆಕಾಂಕ್ಷೆ.

**आरपार**— क्रिवि. एक ओरसे दूसरी ओर-तक । ಒಂದು ದಡದಿಂದ ಮತ್ತೊಂದು ದಡಕ್ಕೆ, ಈಚೆಯಿಂದ ಆಚೆಗೆ. पु दोनों छोर । ಇಬ್ಬದಿ, ಎರಡೂ

ದಡ, ಎರಡೂ ದಂಡೆ, ಇಕ್ಕಟೆ.

**आरसी**— स्त्री आईना, अगूठेमे पहननेका एक गहना। ಕನ್ನಡಿ, ಹೆಬ್ಬೆರಳಿನಲ್ಲಿ ಹಾಕಿಕೊಳ್ಳುವ ಒಂದು ಆಭರಣ.

**आरा**—पु लकडी चीरनेका औजार, सूजा, आला। ಗರಗಸ, ಮೊಚ್ಚೆಗಾರನ ಸೂಜಿ, ಗೋಡೆಯಲ್ಲಿಯ ಗೂಡು

**आराइश, आराई**— स्त्री सजावट। ಶೃಂಗಾರ, ಅಲಂಕಾರ

**आराकश**—पु आरेसे लकडी चीरनेवाला। ಗರಗಸದಿಂದ ಕಟ್ಟಿಗೆ ಕೊಯ್ಯುವವ.

**आराजी**— स्त्री. खेत, जमीन। ಹೊಲ, ಭೂಮಿ, ಜಮೀನು.

**आराम**— पु उपवन, सुख, चैन, सुविधा। ತೋಟ, ಉಪವನ, ಸುಖ; ಶಾಂತಿ, ವಿಶ್ರಾಂತಿ, ಆರಾಮು, ಆರೋಗ್ಯ, ಸೌಕರ್ಯ.

**आराम-तलब**— वि सुकुमार, आलसी। ವಿಲಾಸಿ, ಸುಕುಮಾರ, ನಾಜೂಕ, ಆಲಸಿ, ತಿಂದು ಮಲಗುವವ.

**आरासता, आरास्ता**— वि सुसज्जित। ಸುಶೋಭಿತ, ಶೃಂಗರಿಸಿದ, ಅಲಂಕೃತವಾದ.

**आरि**— स्त्री. जिद, हट। ಹಟ, ದೃಢತೆ

**आरी**— स्त्री बढई का लकडी चीरने का अस्त्र, सूआ, किनारा, ओर। ಚಿಕ್ಕ ಗರಗಸ, ದಬ್ಬಣ, ರಂಪಿಗೆ, ದಡ, ದಂಡೆ, ಕಡೆ, ಮಗ್ಗಲು.

**आरेस**— पु ईर्ष्या, द्वेष। ಈರ್ಷೆ, ದ್ವೇಷ.

**आरोप**— पु लगाना, मढना। ಹಚ್ಚುವದು, ಇಡುವದು, ಹೊರಿಸುವದು, ಸ್ಥಾಪಿಸುವದು. (उदा दोषारोप)

**आर्जव**— पु सरलता, सीधापन। ಸರಳತನ, ಸೌಮ್ಯತೆ, ವಿನಯ

**आर्त**— वि पीडित, दुखी। ಪೀಡಿಸಲ್ಪಟ್ಟ, ಅಸ್ವಸ್ಥ, ದುಃಖಿತ

**आर्थिक**—वि धनसंबंधी। ಹಣಕಾಸಿನ

**आर्द्र**— वि गीला, तर। ಒದ್ದೆಯಾದ, ಹಸಿಯಾದ, ತೊಯ್ದ.

**आलंब, आलंबन**— पु सहारा, अवलंबन, साधन। ಆಶ್ರಯ. ಅವಲಂಬನೆ, ಸಾಧನ.

**आलंभ, आलभन**—पु स्पर्श, वध। ಸ್ಪರ್ಶ, ಭೆಟ್ಟಿ, ವಧೆ, ಹಿಂಸೆ.

**आलथी-पालथी**— स्त्री पद्मासन। ಪದ್ಮಾಸನ, ಅಪ್ಪಾಳೆ ಚಪ್ಪಾಳೆ, ಚಕ್ಕಳ ಮುಕ್ಕಳು, ಚಪ್ಪಣಕಾಲು

**आलपीन**— स्त्री. एक घुंडीदार सुई। ಗುಂಡುಸೂಜಿ, ಟಾಚಣಿ, ಪಿನ್ನು.

**आलम**— पु दुनिया, भीड, दशा, एक तरहका नाच। ಜಗತ್ತು, ಜನಾಂಗ, ಗದ್ದಲ, ಸ್ಥಿತಿ, ಒಂದು ತರದ ಕುಣಿತ

**आलमगीर**— वि. विश्वविजयी। ಜಗದ್ವಿಜಯಿ, ಜಗತ್ತನ್ನು ಗೆಲ್ಲುವವ

**आलमारी**— स्त्री दे 'अलमारी'।

**आलवाल**— पु वृक्ष के चारो ओरका थाला। ಪಾತಿ, ಜಲಧಾರಿ, ಮಂಡಿಗೆ ಪಾತ್ರೆ.

**आलस**– वि सुस्त। ಸೋಮಾರಿ, ಆಲಸಿ,ಮೈಗಳ್ಳ. पु सुस्ती। ಆಲಸ್ಯ.

**आलसी**– वि सुस्त। ಸೋಮಾರಿ,ಮೈಗಳ್ಳ, ಆಲಸ್ಯದ

**आला**– वि श्रेष्ठ, गीला, हरा, ताजा। ಉತ್ತಮ, ಒಳ್ಳೆಯ, ಆರ್ದ್ರ, ಹಸಿಯಾದ, ಹಸಿರು, ತಾಜಾ, ನವ, ಹೊಸ पु. ताक, हथियार, कुम्हारका आँवाँ। ಗೋಡೆಯಲ್ಲಿಯ ಗೂಡು, ಗೋಡೆಯಲ್ಲಿ ಸಾಮಾನು ಇಡಲು ಮಾಡಿದ ಸ್ಥಳ, ಕುಂಬಾರನ ಆವಿಗೆ, ಆಯುಧ.

**आलान**–पु हाथी बाधनेका खूंटा,बंधन, झंझट। ಆನೆ ಕಟ್ಟುವ ಗೂಟ, ಬಂಧನ, ಆನೆ ಕಟ್ಟುವ ಸರಪಣಿ,ತೊಡಕು, ಜಂಜಾಟ.

**आलाप**– पु बातचीत, तान। ಸಂಭಾಷಣೆ, ಮಾತುಕತೆ, ಆಲಾಪನೆ (ಸಂಗೀತ).

**आलापक**– पु. गायक। ಹಾಡುಗಾರ, ಸಂಗೀತಜ್ಞ, ಸಂಭಾಷಣೆ ಮಾಡುವವ.

**आलापना**– सक्रि ‘अलापना’।

**आलिम**– वि विद्वान। ವಿದ್ವಾನ್,ಪಂಡಿತ, ಜ್ಞಾನಿ.

**आली**– स्त्री. सखी। ಗೆಳತಿ. वि श्रेष्ठ। ಶ್ರೇಷ್ಠ, ಪ್ರತಿಷ್ಠಿತ.

**आलीफ़हम**– वि. समझदार। ತಿಳುವಳಿಕೆಯುಳ್ಳ.

**आलीशान**– वि शानदार, विशाल। ಮಾಟಾದ, ಭವ್ಯ, ವಿಶಾಲ, ದಿವ್ಯ.

**आलू**– पु एक कंद। ಆಲೂಗಡ್ಡೆ, ಬಟಾಟೆ.

**आलेख**– पु लिखावट। ಬರವಣಿಗೆ, ಲಿಪಿ.

**आलेख्य**– पु चित्र। ಚಿತ್ರ,ತಸಬೀರು. वि लिखने योग्य। ಬರೆಯಲು ಯೋಗ್ಯವಾದ.

**आलेख्य-विद्या**– स्त्री. चित्रकारी। ಚಿತ್ರಕಲೆ, ಚಿತ್ರಶಿಲ್ಪ.

**आलोक**– पु प्रकाश, ज्योति, दर्शन। ಪ್ರಕಾಶ, ದೀಪ್ತಿ, ಕಾಂತಿ, ಹೊಳಪು, ದರ್ಶನ.

**आलोचक**– पु. आलोचन करनेवाला। ವಿಮರ್ಶಕ, ಪರೀಕ್ಷಕ, ನೋಡುವವ

**आलोचन**– पु गुणदोष विवेचन,जाँच। ಗುಣದೋಷ ವಿಚಾರ, ವಿವೇಚನೆ, ವಿಮರ್ಶೆ, ಪರೀಕ್ಷೆ.

**आलोचना**– स्त्री दे ‘आलोचन’।

**आलोडन**– पु मंथन, विचार। ಮಂಥನ, ಕಡೆಯುವಿಕೆ. ವಿಚಾರ.

**आलोडना**– सक्रि. मथना, भली भाँति सोचना। ಕಡೆ, ಮಥಿಸು, ಅಗಳಾಡಿಸು, ಬಹಳ ವಿಚಾರ ಮಾಡು.

**आल्हा**– पु एक छंद, एक वीर। ಕಂತೆ ಪುರಾಣ, ಲಾವಣಿಪದ, ಹಿಂದೆ ಆಗಿಹೋದ ಒಬ್ಬ ವೀರ.

**आवभगत**– स्त्री. आवभाव. पु आदर सत्कार। ಆದರಸತ್ಕಾರ,ಉಪಚಾರ.

**आवश्यकीय**– वि. जरूरी। ಅವಶ್ಯಕ, ಅಗತ್ಯದ.

**आवाँ**– पु. दे. ' अवाँ '।

**आवागमन**–पु आनाजाना, जन्म मरण। ಬರಹೋಗುವಿಕೆ, ಜನ್ಮಮರಣ, ಹುಟ್ಟುಸಾವು.

**आवाज़**– स्त्री. शब्द, शोर। ಶಬ್ದ,ಧ್ವನಿ, ಕೂಗು, ಸ್ವರ, ಗದ್ದಲ, ಗಲಾಟೆ.

**—उठाना**=विरुद्ध खड़ा होना, आंदोलन करना। ವಿರೋಧ ಮಾಡು, ಆಂದೋಲನ ಮಾಡು.

**—देना**=जोर से पुकारना। ಕರೆ, ಕೂಗು.

**आवाज़ा**– पु. ताना, व्यंग। ವ್ಯಂಗ್ಯ, ಚುಚ್ಚುಮಾತು, ಪರಿಹಾಸ, ಗೇಲಿ.

**आवाज़ानी**– स्त्री. दे ' आवागमन '।

**आवाज़ाही**– स्त्री आवागमन। ಬರಹೋಗುವಿಕೆ.

**आवारगी**– स्त्री. आवारापन। ತುಂಟತನ, ದುಷ್ಟತನ, ವ್ಯರ್ಥ ತಿರುಗಾಡುವದು.

**आवारजा**–पु. जमाखर्च, वही। ಜಮಾಖರ್ಚು, ಜಮಾಖರ್ಚಿನ ಪುಸ್ತಕ.

**आवारा, आवारागर्द**– वि. निकम्मा, वदमाश। ತುಂಟ, ದುಷ್ಟ, ತಿರುಕ, ಪುಂಡ, ಪೋಕರಿ.

**आविर्भूत**– वि. उत्पन्न, प्रकटित। ಹುಟ್ಟಿದ, ಪ್ರಕಟವಾದ, ಸ್ಪಷ್ಟ.

**आविष्कर्ता**– पु. ईजाद करनेवाला। ಶೋಧಕ, ಶೋಧ ಮಾಡುವವ.

**आविष्कार**–पु. ईजाद, खोज। ಶೋಧ, ಕಲ್ಪನೆ.

**आवेदक**– पु निवेदक। ಅರ್ಜದಾರ, ನಿವೇದಕ, ಪ್ರಾರ್ಥಿಸುವವ.

**आवेदन**– पु. निवेदन, विनती। ನಿವೇದನೆ, ಅರಿಕೆ, ವಿನಂತಿ, ಅರ್ಜಿ.

**आवेदनपत्र**– पु. अर्जी। ಅರ್ಜಿ, ವಿನಂತಿ ಪತ್ರ, ಮನವಿ, ಪ್ರಾರ್ಥನಾ ಪತ್ರ.

**आशंका**– स्त्री संदेह, डर। ಸಂಶಯ, ಶಂಕೆ, ಭಯ, ಭೀತಿ, ನಷ್ಟ.

**आशना**– पु. स्त्री. प्रेमी, प्रेमपात्र। ಪ್ರೇಮಪಾತ್ರ, ಪ್ರಿಯ, ಇನಿಯ, ಸ್ನೇಹಿತ.

**आशनाई**– स्त्री. प्रेम, नाता, आसक्ति। ಪ್ರೇಮ, ಸಂಬಂಧ, ಪರಿಚಯ, ಗುಪ್ತ ಸಂಬಂಧ, ಆಸಕ್ತಿ.

**आशर, आसर**– पु. असुर, राक्षस। ಅಸುರ, ರಾಕ್ಷಸ.

**आशा**– स्त्री उम्मीद, दिशा। ಆಶೆ, ಹಾರೈಕೆ, ದಿಶೆ, ದಿಕ್ಕು.

**आशातीत**– वि. आशासे अधिक। ಆಶೆಗಿಂತ ಅಧಿಕ, ಆಶೆಗೆ ನಿಲುಕದ.

**आशिक**– पु. प्रेमी। ಪ್ರೇಮಿ, ಆಸಕ್ತ, ಪ್ರಿಯಕರ. वि अनुरक्त। ಅನುರಕ್ತ.

**आशिक मिज़ाज**– वि. विनोदी। ಉಲ್ಲಾಸಭರಿತ, ವಿನೋದಿ.

**आशियाँ, आशियाना**–पु वसेरा, घोसला। ಇರುವ ಸ್ಥಳ, ತಂಗುವ ಸ್ಥಳ, ಪಕ್ಷಿ-

ಗಳ ಗೂಡು, ವರ್ಣಕುಟೀರ.

**आशिश, आशिष–** स्त्री. आशीर्वाद। ಆಶೀರ್ವಾದ, ಹರಕೆ.

**आशु–** क्रिवि. शीघ्र। • ಶೀಘ್ರವಾಗಿ, ಜಾಗ್ರತೆಯಾಗಿ.

**आशुकवि–** वि. शीघ्र कविता करनेवाले कवि। ಶೀಘ್ರಕವಿ, ಆಶುಕವಿ.

**आशुफ्ता–** वि. दुर्दशाग्रस्त, घबराया हुआ। ಕಂಗೆಟ್ಟ, ಗಾಬರಿಯಾದ, ವೇಚಾಡುವ.

**आस–** स्त्री. आशा, कामना, भरोसा सहारा। ಆಶೆ, ಇಚ್ಛೆ, ಭರವಸೆ, ಆಧಾರ. पु. धनुष। ಧನುಷ್ಯ.

**आसकत–** स्त्री आलस्य। ಆಲಸ್ಯ.ಮೈಗಳ್ಳತನ, ಸೋಮಾರಿತನ.

**आसकती–** वि. आलसी। ಮೈಗಳ್ಳ, ಸೋಮಾರಿ.

**आसते–** क्रिवि. धीरे-धीरे। ಮೆಲ್ಲಗೆ, ನಿಧಾನವಾಗಿ, ಸಾವಕಾಶವಾಗಿ.

**आसन–** पु. बैठनेकी विधि, दशा, स्टूल, चटाई आदि निवास। ಕೂಡ್ರುವ ಪದ್ಧತಿ, ಸ್ಥಿತಿ, ಸ್ಟೂಲು, ಚಾಪೆ ಮುಂತಾದ ಕೂಡ್ರುವ ವಸ್ತುಗಳು, ನಿವಾಸಸ್ಥಾನ, ಆಸನ.

**—जमाना** = रोब जमाना, बसना। ವರ್ಚಸ್ಸು ಕೂಡ್ರಿಸು, ಸ್ಥಿರವಾಗು.

**आसनी–** स्त्री. छोटा आसन। ಚಿಕ್ಕ ಆಸನ.

**आसपास–** क्रिवि. निकट, इधरउधर। ಸಮೀಪದಲ್ಲಿ, ಹತ್ತಿರ, ಅಕ್ಕಪಕ್ಕದಲ್ಲಿ, ನಾಲ್ಕೂಕಡೆಗೆ,ಅಜುಬಾಜು

**आसमान, आसमाँ–** पु आकाश, स्वर्ग। ಆಕಾಶ, ಮುಗಿಲು, ಸ್ವರ್ಗ.

**—के तारे तोडना** = अत्यंत कठिण काम करना। ಅತ್ಯಂತ ಕಠಿಣವಾದ ಕೆಲಸ ಮಾಡು.

**—टूट पडना**=सहसा विपत्ति आ पडना। ಆಕಸ್ಮಾತ್ತಾಗಿ ಸಂಕಟ ಬರು.

**—पर चढना** / **—पर उडना** इतराना। ಗರ್ವ ಮಾಡು, ಸೊಕ್ಕಿಗೇರು.

**—पर चढाना** = खूब प्रशंसा करना, प्रशंसा करके फुला देना। ಅತಿಶಯವಾಗಿ ಸ್ತುತಿಸು, ಅತಿಶಯವಾಗಿ ಸ್ತುತಿಸಿ ಉಬ್ಬಿಸು.

**—में छेद होना** = अत्यंत वर्षा होना। ಬಹಳ ಮಳೆಯಾಗು.

**—से बातें करना** / **—चूमना** बहुत ऊंचा होना। ಬಹಳ ಎತ್ತರವಾಗಿರು, ಗಗನ ಚುಂಬಿತವಾಗಿರು.

**—सिरपर उठाना** = ऊधम मचाना, आदोलन करना। ಗದ್ದಲ ಮಾಡು, ಗಲಾಟೆ ಮಾಡು, ಚಳುವಳಿ ಮಾಡು.

**आसमानी–** वि. आसमान के रंगका, ईश्वरीय। ಆಕಾಶ ವರ್ಣದ,ಆಕಾಶದ, ಈಶ್ವರೀಯ.

**आसरा–** पु. सहारा, शरण, प्रतीक्षा। ಆಶ್ರಯ,ಆಧಾರ, ಶರಣ,ಪ್ರತೀಕ್ಷೆ.

**आसरैत–** पु. आश्रित, आश्रयार्थी। ಆಶ್ರಿತ, ಆಶ್ರಯಾರ್ಥಿ, ಆಶ್ರಯ-

ವನ್ನು ಇಚ್ಛಿಸುವವ.

**आसव**–पु मदिरा, मधु, अर्क। ಮದ್ಯ, ಹೆಂಡ, ಮಧು, ಅರ್ಕ, ಒಂದು ವಿಶೇಷ ಔಷಧ.

**आसा**– पु सोने चादीका डंडा। ಬಂಗಾರ ಬೆಳ್ಳಿಯ ದಂಡ (ಕೋಲು.) स्त्री. दे 'आशा'।

**आसाइश**– स्त्री आराम, सुख। ಆರಾಮ, ವಿಶ್ರಾಂತಿ, ಸುಖ, ಆನಂದ, ಸೌಖ್ಯ.

**आसाढ**– पु. आसाढ मास। ಆಷಾಢ ತಿಂಗಳು.

**आसान**– वि सरल। ಸುಲಭ, ಸರಳ, ಸಾದಾ, ಸುಗಮ.

**आसानी**– स्त्री सरलता। ಸರಳತೆ, ಸೌಲಭ್ಯ, ಸರಾಗ.

**आसायश**– स्त्री. दे. 'आसाइश'।

**आसार**– पु लक्षण, चिह्न। ಗುರುತು, ಚಿಹ್ನೆ, ಲಕ್ಷಣ, ಕುರುಹು स्त्री. मूसल धार वृष्टि। ಧಾರಾಕಾರವಾಗಿ ಬೀಳುವ ದೊಡ್ಡ ಮಳೆ.

**आसिया**– स्त्री आटा पीसने की चक्की। ಬೀಸುವ ಕಲ್ಲು.

**आसीन**– वि· वैठा हुआ। ಕೂತಂಥ, ಕುಳಿತ.

**आसीस**– स्त्री. आशीर्वाद। ಆಶೀರ್ವಾದ.

**आसीसा**–पु उसीसा, तकिया। ದಿಂಬು, ತಲೆದಿಂಬು, ಲೋಡು.

**आसूदगी**– स्त्री तृप्ति, संतोष। ತೃಪ್ತಿ, ಸಂತೋಷ.

**आसूदा**– वि. संतुष्ट, तृप्त, संपन्न। ಸಂತುಷ್ಟ, ತೃಪ್ತ, ಸಂಪನ್ನ, ಸುಖಿ.

**आसेब**– प्रेतबाधा, कष्ट, हानि। ಭೂತ ಬಾಧೆ, ಕಷ್ಟ, ವಿಪತ್ತು, ಹಾನಿ.

**आस्तीन**–स्त्री. कपडेकी बाँह। ಅಂಗಿಯ ತೋಳು.

—**का साँप**=बाहर दोस्त भीतर दुश्मन। ತೋಳಿನಲ್ಲಿಯ ಹಾವು, ಕಪಟಿ ಮಿತ್ರ.

**आस्वाद, आस्वादन**–पु स्वाद। ರುಚಿ, ರುಚಿ ನೋಡುವಿಕೆ, ಮಾಧುರ್ಯ.

**आह**–अव्य. दुःख या कष्टसूचक-श्वास। ನಿಶ್ವಾಸ, ದುಃಖಶ್ವಾಸ, ಅಯ್ಯೋ. स्त्री वेदना सूचक शब्द। ಆರ್ತನಾದ, ದುಃಖಧ್ವನಿ. पु. साहस, क्रोध। ಸಾಹಸ, ಕ್ರೋಧ.

—**भरना, खींचना या मारना** = दुःखसे लंबी सास खीचना। ನಿಟ್ಟುಸಿರಿಡು.

**आहट**– स्त्री. आवाज, चलनेका शब्द, पता, खटका। ಧ್ವನಿ, ಸಪ್ಪಳ, ಸದ್ದು, ಸುಳಿವು, ಭಯ, ಸಂದೇಹ.

**आहत**– स्त्री. घायल। ಗಾಯಗೊಂಡ, ಹಿಂಸಿಸಲ್ಪಟ್ಟ. पु अयोग्य वचन। ಅಯೋಗ್ಯ ವಚನ.

**आहन**– पु. लोहा। ಕಬ್ಬಿಣ.

**आहनी**– वि. लोहेका। ಕಬ್ಬಿಣದ, ಕಬ್ಬಿಣದಿಂದ ಮಾಡಿದ.

**आहर**– पु युद्ध, समय। ಯುದ್ಧ, ಸಮಯ.

**आहरण**– पु छीनना। ಅಪಹರಣ

आहाँ– स्त्री. दुहाई। ಕರುಣ ಕೂಗು, ಸಹಾಯಾರ್ಥವಾಗಿ ಕೂಗುವದು.

आहिस्ता– अव्य धीरे धीरे। ಸಾವಕಾಶವಾಗಿ, ನಿಧಾನವಾಗಿ, ಮೃದುವಾಗಿ.

आहुति, आहुती– स्त्री. हवन, हवनमें छोड़नेकी सामग्री। ಹೋಮ, ಹವನ, ಆಹುತಿ.

आहूत– वि. निमंत्रित। ಆಮಂತ್ರಿತ.

आह्वान– पु. बुलावा। ಕರೆ, ಆಮಂತ್ರಣ, ಆಹ್ವಾನ.

# इ

इंगला– स्त्री. इड़ा नामक नाडी। 'ಇಡಾ' ಎಂಬ ಹೆಸರಿನ ಎಡಮಗ್ಗಲಿನ ನಾಡಿ.

इंगलिस्तान– पु. इंग्लैंड। ಇಂಗ್ಲಂಡ.

इंगित– पु संकेत, इशारा। ಸಂಕೇತ, ಗುರ್ತು. वि हिलता हुआ, सूचित। ಚಲಿಸುವ, ಅಲ್ಲಾಡುವ, ಸೂಚಿತ.

इंगुर– पु. ईंगुर। ಇಂಗಳೀಕ, ಕುಂಕುಮ, ಸಿಂಧೂರ.

इंगुरौटी– स्त्री. सिंधोरा। ಇಂಗಳೀಕದ ಡಬ್ಬಿ, ಕುಂಕುಮ ಕರಡಿಗೆ.

इंजील– स्त्री. बाइबल। ಕ್ರೈಸ್ತರ ಪವಿತ್ರ ಧರ್ಮ ಗ್ರಂಥ, 'ಬಾಯಿಬಲ್'.

इंडुरी–स्त्री इंडुवा–पु गेंडुरी। ಸಿಂಬಿ.

इंतकाल–पु. मृत्यु, स्थलांतर। ಮೃತ್ಯು, ಮರಣ, ಅಂತ, ಸ್ಥಲಾಂತರ.

इंतख़ाब– पु. निर्वाचन, निचोड़। ಚುನಾವ, ಆರಿಸುವಿಕೆ, ನಾರ, ಸತ್ವ.

इंतज़ाम– पु. प्रबंध, व्यवस्था। ವ್ಯವಸ್ಥೆ, ಏರ್ಪಾಡು.

इंतज़ार– पु प्रतीक्षा। ಪ್ರತೀಕ್ಷೆ, ನಿರೀಕ್ಷಣೆ, ಹಾದೀ ನೋಡುವದು.

इंतहा– पु. अंत, सीमा। ಸೀಮೆ, ಅಂತ, ಕೊನೆ.

इंदर– पु इंद्र। ಇಂದ್ರ.

इंडुआ– पु. दे 'इंडुरी'।

इंद्रजाल– पु जादूगरी, माया। ಇಂದ್ರಜಾಲ, ಜಾದೂಗಿರಿ, ಮಾಯೆ.

इंधन– पु. जलानेकी लकड़ी। ಉರುವಲು.

इंसान– पु. आदमी। ಮನುಷ್ಯ.

इंसानियत–स्त्री. मनुष्यता। ಮಾನವತೆ, ಮನುಷ್ಯತ್ವ.

इंसाफ़– पु न्याय, निर्णय। ನ್ಯಾಯ,

ನಿರ್ಣಯ, ತೀರ್ಪು.

इक– वि एक। ಒಂದು.

—टक = टकटकी बाधकर देखना। ಏಕದೃಷ್ಟಿ, ನೆಟ್ಟನೋಟ

इकट्ठा– वि. एकत्रित। ಒಟ್ಟುಗೂಡಿದ, ಒಂದಾದ.

इकता, इकताई–स्त्री एकता।ಒಕ್ಕಟ್ಟು, ಐಕ್ಯ, ಏಕತ್ವ.

इकतार– वि. एकरस, समान। ಒಂದೇ ತರದ, ಒಂದಾದ, ಸಮಾನ, ಸರಿಯಾದ. क्रिवि लगातार। ಬಿಟ್ಟೂಬಿಡದೆ, ಒಂದೇಸವನೆ.

इकतारा– पु एक वाजा। ಒಂದೇ ತಂತಿಯ ತಂಬೂರಿ.

इकतालीस–वि. ४१। ನಲವತ್ತೊಂದು.

इकतीस, इकत्तीस– वि ३१। ಮೂವತ್ತೊಂದು.

इकपेचा– पु· एक प्रकार की पगडी। ಒಂದು ಪ್ರಕಾರದ ಫೇಟ, ಮುಂಡಾಸು.

इकबाल– पु. भाग्य, प्रताप, अभ्युदय, धन, स्वीकार। ಭಾಗ್ಯ, ದೈವ, ಪ್ರತಾಪ, ಗೌರವ, ಐಶ್ವರ್ಯ, ಧನ, ಸ್ವೀಕೃತಿ, ಮಾನ್ಯತೆ.

इकबालमंद– वि भाग्यवान्, प्रतापशाली। ಭಾಗ್ಯಶಾಲಿ, ಪ್ರತಾಪಿ.

इक़राम– पु इज्जत, इनाम। ಮಾನ, ಗೌರವ, ಆದರ, ಸನ್ಮಾನ, ಇನಾಮು, ಪಾರಿತೋಷಕ.

इक़रार– पु. वादा, प्रतिज्ञा, स्वीकृति। ಕರಾರು, ಪ್ರತಿಜ್ಞೆ,ಒಪ್ಪಿಗೆ, ವಚನ, ಒಪ್ಪಂದ.

इकरारनामा–पु. प्रतिज्ञापत्र। ಪ್ರತಿಜ್ಞಾಪತ್ರ, ಕರಾರುಪತ್ರ, ಒಪ್ಪಂದಪತ್ರ.

इकला– वि अकेला। ಒಬ್ಬನೇ, ಒಂಟಿಗ.

इकलाई– स्त्री अकेलापन, ओढनेकी बारीक दुपट्टी। ಏಕಾಂತತೆ, ಒಬ್ಬನಾಗಿರುವದು, ಹೊದ್ದುಕೊಳ್ಳುವ ಒಂದೆಳೆಯ ವಸ್ತ್ರ.

इकलौता– पु अकेला पुत्र। ಒಬ್ಬನೇಒಬ್ಬ, ಏಕಮಾತ್ರ ಪುತ್ರ.

इकल्ला–वि. अकेला, एकहरा। ಒಂಟಿಗ, ಒಂದೇ ಪದರಿನ, ಒಂದೆಳೆಯ.

इकसठ– वि. ६१। ಅರವತ್ತೊಂದು.

इकहत्तर– वि. ७१। ಎಪ್ಪತ್ತೊಂದು.

इकहरा– वि. एक तहका। ಒಂದೇ ಪದರಿನ, ಒಂದೇ ಮಡಿಕೆಯ,ಒಂದೆಳೆಯ.

इकाई–स्त्री एक, एकका मान। ಒಂದು, ಒಂದರ ಅಳತೆ.

इकानबे– वि. ९१। ತೊಂಭತ್ತೊಂದು.

इकावन– वि ५१। ಐವತ್ತೊಂದು.

इकासी– वि. ८१। ಎಂಭತ್ತೊಂದು

इकौंज– स्त्री प्रथम जनने के बाद बाझ हो जानेवाली स्त्री। ಒಂದು ಮಗುವಾದ ಮೇಲೆ ಬಂಜೆಯಾಗುವ ಸ್ತ್ರೀ ಏಕಸಂತಾನಿ.

इकौसो– वि. एकात। ಏಕಾಂತ.

**इक्का**— वि. अकेला, वेजोड। ಒಂಟಿಗ, ಅದ್ವಿತೀಯ, ಅತುಲನೀಯ पु ताशका पत्ता, एक घोडेकी गाडी, वह वीर जो अकेले युद्ध करे। ಇಸ್ಪೀಟಿನ ಎಕ್ಕ, ಎಕ್ಕಾಗಾಡಿ, ಒಂದೇ ಕುದುರೆಯ ಗಾಡಿ, ಒಂಟಿಗನಾಗಿ ಯುದ್ಧ ಮಾಡುವ ವೀರ

**इक्कादुक्का**— वि अकेला-दुकेला। ಒಬ್ಬಿಬ್ಬರು, ಯಾರಾದರೊಬ್ಬರು.

**इक्कीस**— वि. २१। ಇಪ್ಪತ್ತೊಂದು.

**इक्यानवे**—वि ९१। ತೊಂಭತ್ತೊಂದು.

**इक्यावन**— वि दे. 'इकावन'।

**इक्यासी**— वि. दे 'इकासी'।

**इख़लाक**— पु दे 'अख़लाक'।

**इख़लास**— पु प्रेम, मित्रता, संबध। ಪ್ರೇಮ, ಪ್ರೀತಿ, ಮಿತ್ರತ್ವ, ಸಂಬಂಧ.

**इख़लास-मंद**— वि प्रेम करनेवाला। ಪ್ರೇಮಿ, ಶುದ್ಧ ಹೃದಯದ.

**इख़्तियार**— पु अधिकार, सामर्थ्य। ಅಧಿಕಾರ, ಸಾಮರ್ಥ್ಯ, ಹಕ್ಕು, ಶಕ್ತಿ, ವಶ, ಸ್ವಾಧೀನ

**इख़्तिलाफ**—पु. विरोध, विगाड,अंतर। ವಿರೋಧ, ಕೆಡಕು, ಅಂತರ.

**इच्छा**— स्त्री चाह। ಇಚ್ಛೆ, ಅಭಿಲಾಷೆ, ಆಶೆ, ಬಯಕೆ,

**इच्छुक**—वि चाहनेवाला। ಇಚ್ಛಿಸುವವ, ಅಭಿಲಾಷಿಸುವವ.

**इज़तराव**— पु घवराहट, विकलता। ಅಂಜಿಕೆ, ಗಾಬರಿ, ಅಶಾಂತಿ, ಕಾತರತೆ.

**इजमाल**— पु इकट्ठा करना, साझा। ಸಂಕಲನ, ಕೂಡಿಸುವದು, ಸಂಕ್ಷೇಪಿಸುವದು, ಪಾಲುಗಾರಿಕೆ, ಒಂದೇ ವಸ್ತುವಿನ ಮೇಲಿನ ಬಹಳ ಜನರ ಅಧಿಕಾರ.

**इज़राईल**— पु. मृत्युका दूत। ಯಮ ದೂತ.

**इजराय**— पु जारी करना। ಕೃತಿಯಲ್ಲಿ ತರು, ಜಾರಿಯಲ್ಲಿ ತರು, ಉಪಯೋಗಿಸು.

**इजलास**—पु. वैठक, न्यायालय। ಸ್ಥಾನ, ಕಚೇರಿ, ನ್ಯಾಯಾಲಯ, ಕೋರ್ಟು, ಸಮಿತಿ, ಸಭೆ

**इज़हार**— पु प्रकट करना, गवाही। ಪ್ರಕಟನೆ, ಪ್ರಸಿದ್ಧಿ, ಸಾಕ್ಷ್ಯ.

**इजाज़त**—स्त्री. अनुमति, स्वीकृति। ಆಜ್ಞೆ, ಪರವಾನಗಿ, ಅನುಮತಿ, ಸಮ್ಮತಿ, ಒಪ್ಪಿಗೆ.

**इज़ाफ़ा**— पु वृद्धि, तरक्की। ಹೆಚ್ಚಳ, ವೃದ್ಧಿ, ಬಡತಿ, ಉನ್ನತಿ.

**इजार**— स्त्री पाजामा। ಚೊಣ್ಣ, ಇಜಾರು, ಪಾಯಜಾಮೆ, ಷರಾಯಿ.

**इज़ारबंद**— पु नारा, कमरबंद। ಇಜಾರದ ಲಾಡಿ.

**इज़ारा**— पु अधिकार, ठेका। ಅಧಿಕಾರ, ಬಾಡಿಗೆ, ಗುತ್ತಿಗೆ.

**इज़ारादार**—पु ठेकेदार। ಭಾಡಿಗೆಗಾರ, ಗುತ್ತಿಗೆ ಹಿಡಿದವ.

**इज़्ज़त**— स्त्री प्रतिष्ठा, आदर। ಮಾನ-

ಮರ್ಯಾದೆ, ಆದರ, ಗೌರವ.

**—उतारना** = प्रतिष्ठा नष्ट करना। ಮಾನ ಕಳೆ, ಅವಮಾನ ಮಾಡು.

**इज़्ज़तदार**– वि प्रतिष्ठित। ಪ್ರತಿಷ್ಠಿತ, ಮಾನ್ಯ, ಗೌರವದ.

**इठलाना**– अक्रि. इतराना, नखरा करना। ಗರ್ವ ಮಾಡು, ಡೌಲು ಮಾಡು, ಜಂಭ ಮಾಡು, ಮುರುಕು ಮಾಡು, ಬಿಟ್ಟು ಮಾಡು, ನೆಟಿ, ನಿಗರು.

**इत**– क्रिवि यहाँ, इस तरफ़। ಇಲ್ಲಿ, ಈಕಡೆ.

**इतना**–बि. इस कदर या इस मात्राका। ಇಷ್ಟು

**इतबार**– पु दे 'एतवार'।

**इतमीनान**–पु विश्वास, संतोष। ವಿಶ್ವಾಸ, ಮನೋಧೈರ್ಯ, ತೃಪ್ತಿ, ಭರವಸೆ, ಖಾತ್ರಿ, ಸಂತೋಷ

**इतर**–वि अन्य, दूसरा, नीच, साधारण। ಅನ್ಯ, ಎರಡನೆಯ, ಬೇರೆಯ, ಇತರ, ನಿಕೃಷ್ಟ, ನೀಚ, ಸಾಮಾನ್ಯವಾದ.

**इतराज़**– पु दे 'एतराज़'।

**इतराना**– अक्रि दे 'इठलाना'।

**इतरौंहा**– वि इतरानेवाला। ಗರ್ವಿಷ್ಠ, ಸೊಕ್ಕಿನ.

**इतवार**– पु रविवार। ರವಿವಾರ, ಆದಿತ್ಯವಾರ.

**इताअत**, **इताति** — स्त्री आज्ञा पालना। ಆಜ್ಞಾಪಾಲನೆ, ಅಧಿಕಾರದಲ್ಲಿರುವಿಕೆ.

**इताब**– पु अप्रसन्नता, क्रोध। ಸಿಟ್ಟು, ಕೋಪ, ಅಪ್ರಸನ್ನತೆ, ಕ್ರೋಧ, ಬೆದರಿಕೆ.

**इती, इतो**– वि. इतना। ಇಷ್ಟು.

**इत्तफ़ाक**– पु मेल, एकता, मौका, संयोग। ಗೆಳೆತನ, ಒಕ್ಕಟ್ಟು, ಒಪ್ಪಿಗೆ, ಸಂಯೋಗ, ಹೋಲಿಕೆ.

**इत्तफ़ाकन्**–क्रिवि संयोगसे, आकस्मिक। ಅಕಸ್ಮಾತ್ತಾಗಿ, ದೈವಯೋಗದಿಂದ.

**इत्तला, इत्तिला**– स्त्री खबर, सूचना। ಸುದ್ದಿ, ಸೂಚನೆ, ಅರಿಕೆ.

**इत्तहाद, इत्तिहाद**– पु मेल, दोस्ती, मुहब्बत। ಒಕ್ಕಟ್ಟು, ಮೈತ್ರಿ, ಏಕೀಕರಣ, ಪ್ರೇಮ

**इत्तिहादी**–वि मित्रराष्ट्र। ಮಿತ್ರರಾಷ್ಟ್ರ.

**इत्तहाम, इत्तिहाम**– पु दोष। ದೋಷಾರೋಪಣೆ, ನಿಂದೆ, ಅಪವಾದನೆ

**इत्र**– पु पुष्पसार। ವಾಸನೆ ಎಣ್ಣೆ, ಅತ್ತರು, ಪನ್ನೀರು.

**इत्रदान**– पु इत्र रखनेका पात्र। ಅತ್ತರುದಾನಿ, ವಾಸನೆ ಎಣ್ಣೆಯ ಪಾತ್ರೆ, ಪನ್ನೀರುದಾನಿ.

**इत्रफरोश**–पु इत्र बेचनेवाला। ಅತ್ತರು ಮಾರುವವ, ವಾಸನೆ ಎಣ್ಣೆ ಮಾರುವವ.

**इदबार**–पु नहूसत, बदकिस्मती। ಕೆಟ್ಟ ವೇಳೆ, ದುರ್ಭಾಗ್ಯ.

**इद्दत**– स्त्री विधावाओं और परित्यक्ता स्त्रियों के लिये वह निश्चित समय

जिसके अंदर वे दूसरा विवाह न कर सकें। ವಿಧವೆ ಅಥವಾ ಪರಿತ್ಯಕ್ತ ಸ್ತ್ರೀಯರು ಕೆಲವೊಂದು ನಿಶ್ಚಿತ ಅವಧಿಯವರೆಗೆ ಎರಡನೆಯ ಮದುವೆಯನ್ನು ಮಾಡಿಕೊಳ್ಳಲಾರರು. ಆ ಅವಧಿ ಅಥವಾ ಸಮಯ. (ಮುಹಮ್ಮದೀಯ ಸಂಪ್ರದಾಯದಂತೆ)

**इधर**– क्रिवि इस ओर। ಇಲ್ಲಿ, ಇತ್ತ, ಈ ಕಡೆಗೆ.

**इन**– सर्व. 'इस' का वहुवचन। 'ये' ಶಬ್ದಕ್ಕೆ ವಿಭಕ್ತಿ ಪ್ರತ್ಯಯ ಸೇರುವಾಗ ಆಗುವ ರೂಪ

**इनकार**–पु. अस्वीकर, नामंजूर। ನಿರಾಕರಣೆ, ಅಸ್ವೀಕಾರ.

**इनकिलाव**– पु. क्राति। ಕ್ರಾಂತಿ.

**इनसान**– पु. मनुष्य। ಮನುಷ್ಯ.

**इनसानियत**– स्त्री मनुष्यता। ಮಾನವತೆ, ಸೌಜನ್ಯ.

**इनसाफ**–पु. न्याय, फैसला। ನ್ಯಾಯ, ತೀರ್ಪು, ನೀತಿ.

**इनायत**– स्त्री दया, अनुग्रह। ದಯೆ, ಅನುಗ್ರಹ, ಕೃಪೆ, ಉಪಕಾರ, ಎರಡನೆಯವರ ಸಲುವಾಗಿ ಕಷ್ಟ ಸಹನೆ.

**इनेगिने**– वि. कुछ, चुने हुए। ಅಲ್ಪ-ಸ್ವಲ್ಪ, ಆರಿಸಿದ.

**इन्किलाब**– पु दे. 'इनकिलाव'।

**इन्तहा**– स्त्री दे 'इंतहा'।

**इन्शा**– स्त्री लेखन क्रिया, लेखन शैली। ಲೇಖನ ಕ್ರಿಯೆ, ಲೇಖನ ಶೈಲಿ, ನಿಬಂಧ ರಚನೆ.

**इन्शा-अल्लाह, इन्शा-तआला**– क्रिवि ईश्वरने चाहा तो। ದೇವರು ಇಚ್ಛಿಸಿದರೆ! ದೇವರ ಕೃಪೆಯಾದರೆ!

**इन्साफ**– पु दे 'इनसाफ'।

**इन्हें**– सर्व इनको। 'ये' ಶಬ್ದದ ದ್ವಿತೀಯಾ ಮತ್ತು ಚತುರ್ಥೀರೂಪ.

**इफ़रात**– स्त्री. अधिकता। ಬಾಹುಲ್ಯ, ವಿಪುಲತೆ, ಸಮೃದ್ಧಿ, ಆಧಿಕ್ಯ, ಹೇರಳ.

**इफ़्तखार**– पु स्वाभिमान। ಸ್ವಾಭಿಮಾನ.

**इबादत**– स्त्री. पूजा। ಪೂಜೆ, ಆರಾಧನೆ.

**इबादत-खाना, इबादतगाह**– प्रार्थना-गृह। ಪ್ರಾರ್ಥನಾಲಯ, ಗುಡಿ, ಮಂದಿರ.

**इबारत**– स्त्री. लेख। ಲೇಖ, ಲೇಖನ ಶೈಲಿ.

**इब्तदा**–स्त्री. आरंभ, उद्गम, विकास। ಆರಂಭ, ಉದ್ಗಮ, ಉತ್ಪತ್ತಿ, ವಿಕಾಸ.

**इब्तदाई**– स्त्री. वि आरंभिक। ಆರಂಭದ, ಮೊದಲಿನ.

**इब्न**– पु पुत्र। ಮಗ, ಪುತ್ರ.

**इब्नत**– स्त्री. पुत्री। ಮಗಳು, ಪುತ್ರಿ

**इमकान**– पु संभावना, शक्ति, सामर्थ्य। ಸಂಭವ, ಶಕ್ಯತೆ, ಶಕ್ತಿ, ಸಾಮರ್ಥ್ಯ

**इमदाद**– स्त्री सहायता। ಸಹಾಯ, ನೆರವು.

**इमला**– पु लेखन-अभ्यास। ಶುದ್ಧ

ಲೇಖನ.

**इमली–** स्त्री एक पेड या उसका फल। ಹುಣಸೆಯ ಮರ ಅಥವಾ ಹುಣಸೆ ಹಣ್ಣು.

**इमसाल–** क्रिवि इसवर्ष। ಈ ವರ್ಷ.

**इमाद–** पु. स्तंभ। ಸ್ತಂಭ, ಕಂಬ.

**इमानदार–** वि प्रामाणिक। ಪ್ರಾಮಾಣಿಕ, ನಂಬಿಗಸ್ತ, ಸಂಭಾವಿತ.

**इमाम–** पु अगुआ, मुसलमान पुरोहित। ಮುಖಂಡ, ಮಹಮ್ಮದೀಯ ಅರ್ಚಕ, ಮುಸಲ್ಮಾನರ ಪ್ರಾರ್ಥನೆ ನಡಿಸುವವ.

**इमामदस्ता–** पु. लोहे या पीतलका खरल। ಕಲ್ಬತ್ತು, ಕಲ್ಪತ್ತು, ಒರಳು

**इमामबाडा–** पु. ताजिया दफ़त करनेका अहाता। ಡೋಲಿ(ತಾಬೂತ)ಯನ್ನು ವಿಸರ್ಜಿಸುವ ಸ್ಥಳ

**इमारत–** स्त्री. भवन, पक्का मकान। ಮನೆ, ಕಟ್ಟಡ, ಪ್ರಾಸಾದ, ಉಪ್ಪರಿಗೆ, ಸೌಧ.

**इमि–** क्रिवि इस प्रकार। ಈ ರೀತಿಯಿಂದ

**इम्तिहान–** पु परीक्षा। ಪರೀಕ್ಷೆ, ಶೋಧನೆ.

**इरशाद–** पु. आज्ञा, उपदेश। ಆಜ್ಞೆ, ಎಚ್ಚರಿಕೆ, ಉಪದೇಶ.

**इरषा, इरिषा–** स्त्री. ईर्ष्या, डाह। ಈರ್ಷ್ಯೆ, ಅಸೂಯೆ, ಹೊಟ್ಟೆಕಿಚ್ಚು.

**इरसाल–** पु भेजनेकी क्रिया। ಪತ್ರ ಅಥವಾ ಹಣ ಕಳಿಸುವಿಕೆ

**इराक–** पु अरबका एक प्रदेश। ಮೆಸೋಪೊಟೇಮಿಯಾ

**इराक़ी–** वि इराक देशका। ಇರಾಕ ದೇಶದ पु एक तरहका घोडा। ಇರಾಕ ದೇಶದ ಕುದುರೆ.

**इरादा–** पु इच्छा, विचार, संकल्प। ಇಚ್ಛೆ, ಅಭಿಪ್ರಾಯ, ವಿಚಾರ, ಪ್ರವೃತ್ತಿ, ಸಂಕಲ್ಪ.

**इर्दगिर्द–** क्रिवि. आसपास, चारो ओर। ನೆರೆಹೊರೆಯಲ್ಲಿ, ಅಕ್ಕಪಕ್ಕದಲ್ಲಿ, ನಾಲ್ಕುಕಡೆಗೆ.

**इलज़ाम, इल्ज़ाम–** पु. दोष, अभियोग। ಆರೋಪ, ದೋಷ, ತಪ್ಪು, ಅಪರಾಧ, ಅಪವಾದನೆ.

**इलतिजा–** निवेदन, प्रार्थना। ನಿವೇದನೆ, ಪ್ರಾರ್ಥನೆ, ಅರಿಕೆ.

**इलहान–** पु संगीत। ಸಂಗೀತ, ಉತ್ತಮ ಸ್ವರ

**इलहाम–** पु देववाणी, आकाशवाणी। ದೇವವಾಣಿ, ಆಕಾಶವಾಣಿ.

**इलाक़ा–** पु. रियासत, संबध, जमीदारी हार्दिक प्रेम। ಪ್ರಾಂತ, ಸಂಸ್ಥಾನ, ಸಂಬಂಧ, ಜಮೀನುದಾರಿ, ಹಾರ್ದಿಕ ಪ್ರೇಮ.

**इलाज–** पु दवा, चिकित्सा। ಔಷಧ ಔಷಧೋಪಚಾರ, ಚಿಕಿತ್ಸೆ, ಪರಿಹಾರ.

**इलायची–** स्त्री एक पेड तथा उसके फल। ಯಾಲಕ್ಕಿ ಗಿಡ ಅಥವಾ ಯಾಲಕ್ಕಿ ಕಾಯಿ.

इलाही– पु ईश्वर । ಈಶ್ವರ, ದೇವರು. वि ईश्वरीय । ದೈವೀ, ಈಶ್ವರೀಯ.

इल्तिजा– स्त्री दे 'इलतिजा'।

इल्म– पु विद्या, हुनर । ವಿದ್ಯೆ, ಜ್ಞಾನ, ಕಲೆ.

इल्मदाँ– पु इल्म का ज्ञाता । ಪಂಡಿತ, ವಿದ್ವಾನ, ವಿಶಾರದ.

इल्लत– स्त्री. रोग, दोष, बाधा, झंझट, कारण, कमी । ಬೇನೆ, ಜಡ್ಡು, ಬಾಧೆ, ತೊಡಕು, ಆರೋಪ, ಕಾರಣ, ಕುಂದು, ಕೊರತೆ.

इल्लती– वि जिसे कोई बुरी आदत या लत लग गयी हो । ದುರಭ್ಯಾಸವುಳ್ಳ.

इव– अव्य. समान, तरह । ಅಂತೆ, ಹಾಗೆ, ಸಮಾನ, ಸದೃಶ, ತುಲ್ಯ.

इशरत– स्त्री सुखभोग । ವಿಲಾಸ, ಆನಂದ, ಸೌಖ್ಯಭೋಗ.

इशारा– संकेत, संकेत करना । ಸನ್ನೆ, ಸಂಕೇತ, ಸೂಚನೆ, ಆಜ್ಞೆ.

इश्क– पु. प्रेम, मुहब्बत । ಪ್ರೇಮ, ಮನೋರಾಗ.

इश्तिहार– पु. विज्ञापन । ಪ್ರಕಟನೆ, ಜಾಹಿರಾತು.

इषण– स्त्री. कामना । ಬಯಕೆ, ಇಚ್ಛೆ.

इस– सर्व 'यह' का विभक्तिके पूर्वका रूप । 'यह' ಶಬ್ದಕ್ಕೆ ವಿಭಕ್ತಿ ಪ್ರತ್ಯಯ ಸೇರುವಾಗ ಆಗುವ ರೂಪ.

इसपंज– पु. स्पंज । ಸ್ಪಂಜು, ಸಮುದ್ರ ಫೇಣಿ.

इसपात– पु. सख्त लोहा । ಕಬ್ಬಿಣ, ಉಕ್ಕು.

इसराफ़– पु अपव्यय । ಧನದ ಅಪವ್ಯಯ, ದುಂದುಗಾರಿಕೆ.

इसरार– पु हठ, अनुरोध । ಹಟ, ಆಗ್ರಹ.

इसलाम– पु. मुसलमानी धर्म । ಮಹಮ್ಮದೀಯ ಧರ್ಮ

इसलाह– पु. संशोधन । ಸಂಶೋಧನೆ, ತಿದ್ದುವಡೆ.

इसलिये– क्रिवि. इस कारण से । ಆದ್ದರಿಂದ.

इसाई– वि दे. 'ईसाई'।

इसे–सर्व. इसको । 'यह' ಇದರ ದ್ವಿತೀಯಾ ಮತ್ತು ಚತುರ್ಥೀ ರೂಪ.

इस्तकबाल– पु स्वागत, भविष्यत्काल । ಸ್ವಾಗತ, ಭವಿಷ್ಯತ್ಕಾಲ (ವ್ಯಾಕರಣದಲ್ಲಿ)

इस्तमरारी–वि. स्थाई । ನಿತ್ಯ, ಸ್ಥಾಯಿ, ಸ್ಥಿರ, ಶಾಶ್ವತ.

इस्तिरी– स्त्री. कपड़ेकी शिकन दूर करनेका एक औज़ार । ಇಸ್ತ್ರಿ, ಇಸ್ತ್ರೀ ಪೆಟ್ಟಿಗೆ.

इस्तिलाह– स्त्री. परिभाषा । ಪರಿಭಾಷೆ, ವ್ಯಾಖ್ಯೆ.

इस्तीफा–पु. त्यागपत्र । ರಾಜೀನಾಮೆ, ತ್ಯಾಗಪತ್ರ.

इस्तेदाद– स्त्री. सामर्थ्य, शक्ति, ज्ञान, निपुणता । ಸಾಮರ್ಥ್ಯ, ಶಕ್ತಿ, ಯೋಗ್ಯತೆ, ಜ್ಞಾನ, ನಿಪುಣತೆ.

**इस्तेमाल**– पु प्रयोग। ಉಪಯೋಗ, ಬಳಕೆ.

**इहतियात**– स्त्री सावधानी, बचाव। ಜಾಗ್ರತೆ, ಭದ್ರತೆ, ಜೋಪಾನ, ಸಂರಕ್ಷಣೆ.

**इहसान**– पु द 'एहसान'।

**इहाँ**– क्रिवि यहाँ। ಇಲ್ಲಿ

**इहाता**–पु अहाता। ಅಂಗಳ, ಪ್ರಾಂಗಣ, ಪೌಳಿಯ ಒಳಗಿನ ಪ್ರದೇಶ, ಆವರಣ.

---

# ई

**ईंगुर**– पु सिधूर। ಸಿಂಧೂರ, ಇಂಗಳೀಕ

**ईंचना**– सक्रि खीचना। ಎಳೆ, ಜಗ್ಗು.

**ईंट**–स्त्री. **ईंटा**–पु पकाया हुआ मिट्टीका चौखूँटा लम्बा टुकडा जिसका प्रयोग दीवार आदि बनानेमें होता है। ಇಟ್ಟಂಗಿ, ಇಟ್ಟಿಗೆ.

**—से ईंट बजना** = नष्ट होना। ಉಧ್ವಸ್ತವಾಗು, ಹಾಳಾಗು

**—से ईंट बजाना** = बरबाद करना। ಹಾಳುಮಾಡು, ನಾಶಮಾಡು

**ईंडरी, ईंडुरी**– स्त्री गेडुरी। ಸಿಂಬಿ

**ईंधन**– पु जलानेकी लकडी। ಉರುವಲು, ಕಟ್ಟಿಗೆ, ಸೌದೆ.

**ईख**– पु ऊख, गन्ना। ಕಬ್ಬು.

**ईखना**– सक्रि. देखना। ನೋಡು, ಈಕ್ಷಿಸು स्त्री. इच्छा। ಇಚ್ಛೆ

**ईछन**– पु नेत्र। ಕಣ್ಣು.

**ईछना**– सक्रि चाहना। ಇಚ್ಛಿಸು, ಆಶಿಸು.

**ईज़ा**– स्त्री दुख। ದುಃಖ, ಕಷ್ಟ, ವೇದನೆ, ಪೀಡೆ

**ईज़ाद**– पु आविष्कार। ಶೋಧ, ಹೊಸ ರಚನೆ.

**ईजाब**– पु प्रस्ताव, प्रार्थना। ಸೂಚನೆ, ಪ್ರಾರ್ಥನೆ.

**ईठ**–पु मित्र, प्रियजन, सखा या सखी। ಇಷ್ಟ ಮಿತ್ರ, ಪ್ರಿಯಜನ, ಗೆಳೆಯ ಅಥವಾ ಗೆಳತಿ.

**ईठना**– सक्रि इच्छा करना। ಇಚ್ಛಿಸು, ಮನಸ್ಸು ಮಾಡು

**ईठि**–स्त्री. प्रीति, मित्रता, यत्न। ಪ್ರೀತಿ, ಮಿತ್ರತ್ವ, ಪ್ರಯತ್ನ

**ईडा**– स्त्री स्तुति। ಸ್ತುತಿ, ಪ್ರಶಂಸೆ

**ईद**– स्त्री मुसलमानी त्योहार। ಮುಸಲ್ಮಾನರ ಒಂದು ಹಬ್ಬ.

**—का चांद होना** = बहुत प्रतीक्षाके बाद मिलना। ಕ್ವಚಿತ್ತಾಗಿ ಭೆಟ್ಟಿಯಾಗು

**ईदगाह**–पु. ईदके दिन नमाज पढने का स्थान । ಈದ ಹಬ್ಬದ ದಿನ ಎಲ್ಲರೂ ಕೂಡಿ ನಮಾಜು ಮಾಡುವ ಸ್ಥಳ.

**ईमा**– पु. इशारा । ಸಂಕೇತ, ಸನ್ನೆ, ಗುರ್ತು.

**ईमान**– पु आस्तिक बुद्धि, व्यवहारमें सच्चाई, दयानतदारी, सत्य, धर्म, अच्छी नीयत । ಆಸ್ತಿಕ ಬುದ್ಧಿ, ಆಸ್ತಿಕ್ಯ, ಪ್ರಾಮಾಣಿಕತನ, ಸದಸದ್ವಿವೇಕ, ಸತ್ಯನಿಷ್ಠೆ, ಧರ್ಮ, ಒಳ್ಳೆಯ ನಡತೆ, ಸದಾಚಾರ.

**ईमानदार**– वि. आस्तिक, दयानतदार, सत्य और न्यायका पक्षपाती । ಆಸ್ತಿಕ, ಧರ್ಮಪರ, ಸದಸದ್ವಿವೇಕಿ, ಸತ್ಯನಿಷ್ಠ.

**ईमानदारी**– स्त्री ईमानदार होनेकी क्रिया या भाव । ಪ್ರಾಮಾಣಿಕತೆ, ಆಸ್ತಿಕತೆ, ಧರ್ಮಬುದ್ಧಿ.

**ईरखा**–स्त्री. ईर्षा, डाह । ಈರ್ಷೆ, ಅಸೂಯೆ, ಮತ್ಸರ.

**ईरमद**– पु. वज्र, विजली । ವಜ್ರ, ಸಿಡಿಲು, ವಿದ್ಯುತ್ತು.

**ईस**– पु. ईश । ಈಶ್ವರ, ಸ್ವಾಮಿ, ಮಹಾದೇವ.

**ईसबगोल**– पु. ईसरगोल । ಇಸಬಗೋಲ.

**ईसा, ईसामसीह**– पु ईसाई धर्मका संस्थापक । ಏಸುಕ್ರಿಸ್ತ.

**ईसाई**–स्त्री. ईसाई धर्मावलंबी । ಕ್ರೈಸ್ತರು.

**ईहा**– स्त्री. इच्छा, लोभ, चेष्टा । ಇಚ್ಛೆ, ಲೋಭ, ಅಭಿಲಾಷೆ, ಆಶೆ, ಪ್ರಯತ್ನ.

**ईहाम**– पु संदिग्धता । ಸಂದಿಗ್ಧತೆ, ಶ್ಲೇಷ.

**ईहित**– वि. इच्छित । ಇಚ್ಛಿಸಿದ, ಅಭಿಲಾಷಿತ.

---

# उ

**उंगल**– पु. दे. 'अंगुल'।

**उँगली**– स्त्री. अंगुली । ಬೆರಳು.

—**उठाना**–दोष देना । ದೋಷಕೊಡು, ನಿಂದೆ ಮಾಡು, ದೂರು.

—**पकडते पहुंचा पकड़ना** = कुछ सहारा पाकर और पानेका प्रयत्न करना । ಎಳೆ ಸಿಕ್ಕರೆ ಹಚ್ಚಡ ನುಂಗು.

—**पर नचाना** = मनमाने काम कराना । ತನ್ನ ಮನಸ್ಸಿನಂತೆ ಎರಡನೆಯವರನ್ನು ಕುಣಿಸು.

**(दांतो तले) उंगली दबाना** = आश्चर्यमें आना, चकित होना । ಆಶ್ಚರ್ಯ

ಚಕಿತನಾಗು.

(पाँचों) **उंगलियाँ घीमें होना** = सब तरहका फायदा होना। ಎಲ್ಲ ತರದಿಂದ ಲಾಭವಾಗು.

**उँगुली**– स्त्री दे 'उँगली'।

**उँघाई**– स्त्री झपकी। ತೂಕಡಿಕೆ.

**उँचन**– स्त्री अदवान। ಮಂಚದ ಹೆಣಿಗೆಯನ್ನು ಬಿಗಿದು ಕಟ್ಟುವ ಹಗ್ಗ.

**उँचना**– सक्रि. अदवान कसना। ಮಂಚದ ಹೆಣಿಕೆಯನ್ನು ಬಿಗಿದು ಕಟ್ಟು.

**उँचाई**–स्त्री ऊँचापन, वड़ापन। ಎತ್ತರ, ಶ್ರೇಷ್ಠತೆ

**उंचान**– पु दे 'उँचाई'।

**उँचाना**– सक्रि. उंचा करना। ಎತ್ತರಿಸು, ಏರಿಸು, ಎತ್ತು.

**उँचाव, उँचास**– पु. दे उँचाई'।

**उंछ**– स्त्री सीला वीनना। ಧಾನ್ಯದ ರಾಶಿಯಾದ ಮೇಲೆ ಉದರ ನಿರ್ವಾಹಕ್ಕಾಗಿ ಅಲ್ಲಲ್ಲಿ ಬಿದ್ದ ಧಾನ್ಯವನ್ನು ಆರಿಸುವದು, ಹಕ್ಕಲು ಆರಿಸುವಿಕೆ.

**उँजरिया**– स्त्री चादनी, रोशनी। ಬೆಳದಿಂಗಳು, ಬೆಳಕು.

**उजरियारी, उंज्यारी**– स्त्री चाँदनी प्रकाश। ಬೆಳದಿಂಗಳು, ಬೆಳಕು, ಪ್ರಕಾಶ.

**उँडेलना**– सक्रि उडेलना। ನೀರುತೋಡು, ಸುರುವು, ಹೊಯ್ಯು

**उदुर**– पु चूहा। ಇಲಿ

**उअना**– सक्रि. उगना। ಹುಟ್ಟು, ಮೂಡು, ಉದಯಿಸು

**उऋग**– वि ऋणमुक्त। ಋಣಮುಕ್ತನಾದ, ಸಾಲ ತೀರಿಸಿದ

**उकटना**– सक्रि दे 'उघटना'।

**उकठना**–अक्रि सूखकर ऐठना। ಒಣಗಿ ಕಡ್ಡಿಯಾಗು, ಒಣಗು, ಬತ್ತಿಹೋಗು

**उकठा**– वि सूखा हुआ। ಒಣಗಿದ, ಶುಷ್ಕ, ಬತ್ತಿದ.

**उकताना**–अक्रि. ऊवना, जल्दी मचाना। ಬೇಸರ ಪಡು, ಖಿನ್ನನಾಗು, ಆತುರ ಪಡು, ಗಡಿಬಿಡಿ ಮಾಡು.

**उकति**– स्त्री उक्ति। ಉಕ್ತಿ, ವಚನ, ಹೇಳಿಕೆ,

**उकलना**– अक्रि उघड़ना, खुलना। ತೆರೆ, ಅಗಲು, ಕಿತ್ತುಹೋಗು.

**उकलाई**– स्त्री कै, वमन। ವಾಕರಿಕೆ, ವಾಂತಿ.

**उकलाना**– अक्रि कै करना। ವಾಂತಿ ಮಾಡು, ವಾಕರಿಸು

**उकसना**– अक्रि उभरना, निकलना। ಹುಟ್ಟು, ಮೊಳೆ, ಏಳು, ಪ್ರಯತ್ನಿಸು, ಮೇಲೆ ಬರು, ಕಿತ್ತು ಹೋಗು, ಬಿಚ್ಚಿ ಹೋಗು.

**उकसाना**– सक्रि ऊपरको उठाना, उभाड़ना, हटा देना। ಪ್ರೇರೇಪಿಸು, ಉತ್ತೇಜಿಸು, ಎಬ್ಬಿಸು, ಹೊಮ್ಮಿಸು, ಎತ್ತಿಹಿಡಿ, ಉತ್ತೇಜನ ಕೊಡು, ದೀಪದ ಬತ್ತಿಯನ್ನು ಎತ್ತರಿಸು, ದೂರ ಮಾಡು.

**उकसौंहाँ**– वि. उठता हुआ, उभडता हुआ। ಏಳುವ, ವಿಕಸಿಸುವ, ಅರಳುವ, ಬೆಳೆಯುವ, ಉನ್ನತ.

**उकाब**– पु. गरुड, बडा गिद्ध। ಗರುಡ ಪಕ್ಷಿ, ದೊಡ್ಡ ಹದ್ದು.

**उकासना**– सक्रि दे 'उकसाना'।

**उकुसना, उकेलना**– सक्रि खोलना, उचाडना। ಬಿಚ್ಚು, ಮುಡಿಕೆ ಬಿಚ್ಚು, ಉಚ್ಚು, ಹರಿ, ಸುಲಿ.

**उखडना**– अक्रि. स्खलित हो जाना, च्युत हो जाना। ಕಿತ್ತು ಹೋಗು, ಹರಿದು ಹೋಗು, ಬಿಚ್ಚಿ ಹೋಗು, ಮುರಿದು ಹೋಗು, ತಾಳ ತಪ್ಪಿ ಹೋಗು, ಸ್ಥಾನಭ್ರಷ್ಟವಾಗು

**उखड़वाना**– सक्रि उखाडनेकी क्रिया करवाना। ಕಿತ್ತಿಸು, ಹರಿಸು, ಮುರಿಸು.

**उखली**– स्त्री ओखली। ಒರಳು.

**उखाड**–पु उच्छेदन, उखाडनेका काम। ಉಚ್ಚಾಟನೆ, ಉನ್ಮೂಲನೆ, ಕಿತ್ತುವಿಕೆ, ನಾಶ ಮಾಡುವಿಕೆ.

**उखाडना**– सक्रि. उपारना, भड़काना, नष्ट करना। ಕೀಳು, ಕಿತ್ತೊಗೆ, ಬಿಚ್ಚು, ಅಗಲಿಸು, ಬೇರ್ಪಡಿಸು, ಪ್ರೇರೇಪಿಸು, ಹಾಳು ಮಾಡು.

**उखेलना**– सक्रि. लिखना, खींचना। ಬರೆ, ಚಿತ್ರ ಬರೆ.

**उगटना**–अक्रि. फिर फिर कहना, ताना मारना। ಮೇಲಿಂದ ಮೇಲೆ ಹೇಳು, ಎಚ್ಚರಿಸಿ ಹೇಳು, ವ್ಯಂಗ್ಯಮಾಡು.

**उगना**– अक्रि. उदय होना, अंकुरित होना। ಹುಟ್ಟು, ಉದಯಿಸು, ಬೆಳೆ, ಚಿಗುರು, ಅಂಕುರಿಸು.

**उगरना**– अक्रि. निकलना या वाहर होना। ತುಳುಕು, ಹೊರಚೆಲ್ಲು.

**उगलना**– सक्रि. वमन करना, थूकना, वाहर निकालना। ಉಗುಳು, ವಾಂತಿ ಮಾಡು, ಹಣ ತಿರುಗಿ ಕೊಡು, ಗುಪ್ತ ಸಂಗತಿಯನ್ನು ಹೊರಗೆಡಹು.

**उगलवाना, उगलाना**– सक्रि. मुँहसे निकलवाना, वमन करना। ಉಗುಳಿಸು, ತಿರುಗಿ ತೆಗೆದುಕೊಳ್ಳು, ತಪ್ಪು ಒಪ್ಪಿಸಿಕೊಳ್ಳು, ವಾಂತಿ ಮಾಡಿಸು.

**उगसाना**– दे. 'उकसाना'।

**उगसारना**–सक्रि कहना, प्रकट करना। ಹೇಳು, ವಿವರಿಸು, ಪ್ರಕಟಿಸು.

**उगाना**– सक्रि. उदय करना, उत्पन्न करना। ಹುಟ್ಟಿಸು, ಬೆಳೆಯಿಸು, ಉತ್ಪನ್ನ ಮಾಡು,(ಶಸ್ತ್ರ) ಎತ್ತು.

**उगार, उगाल**– पु. थूक। ಉಗುಳು, ಉಗುಳಿದ ಪದಾರ್ಥ, ಎಂಜಲು.

**उगालदान**–पु. पीकदान। ಉಗುಳುವ ಪಾತ್ರೆ, ಪೀಕದಾಣಿ.

**उगाहना**– सक्रि. वसूल करना। ವಸೂಲು ಮಾಡು, ತೆರಿಗೆ ಅಥವಾ ಚಂದಾ ಎತ್ತು.

**उगाही**–स्त्री वसूली, लगान। ವಸೂಲಿ ಕೆಲಸ, ವಸೂಲಿ ಹಣ, ಚಂದಾ, ತೆರಿಗೆ.

**उगिलना**– सक्रि. दे. 'उगलना'।

**उगिलवाना, उगिलाना–** सक्रि दे 'उगलाना'।

**उघटना–** अक्रि. ताल देना, बीती बात को उठाना, ताना देना । ತಾಳ ಹಾಕು, ಹಿಂದಿನ ಸಂಗತಿಯನ್ನು ಕೆದರಿ ತೆಗೆ, ಮಾಡಿದ ಉಪಕಾರವನ್ನು ಮೇಲಿಂದ ಮೇಲೆ ಒತ್ತಿ ಹೇಳು, ವ್ಯಂಗ್ಯ ಮಾಡು, ಕೆರಳಿಸು, ಹಂಗಿಸು.

**उघटा–** बि. उकटा। बीती बातको बार बार कहनेवाला । ಹಿಂದಿನ ಸಂಗತಿಯನ್ನು ಮೇಲಿಂದ ಮೇಲೆ ಹೇಳುವವ, ಮಾಡಿದ ಉಪಕಾರವನ್ನು ತಿರುತಿರುಗಿ ಉಲ್ಲೇಖಿಸುವವ, (ಹಂಗಿಸುವವ.)

**उघडना, उघरना–** अक्रि खुलना, सच्ची बातका प्रकाशित होना । ತೆರೆ, ಬಿಚ್ಚು, ಪ್ರಕಟವಾಗು, ಪ್ರಕಟಣೆಗೆ ಬರು, ಬಹಿರಂಗವಾಗು, ಸತ್ಯ ಹೊರಬೀಳು,

**उघाडना, उघारना–** सक्रि. खोलना, रहस्योद्‌घाटन करना। ತೆರೆ, ಬಿಚ್ಚು, ಪ್ರಕಟ ಮಾಡು, ಬಹಿರಂಗ ಮಾಡು, ಸತ್ಯವನ್ನು ಹೊರಗೆಡಹು

**उचकन–**पु. टेक, ईंट इत्यादिका टुकडा जिसको पात्रको न उलटने के लिये नीचे रखते हैं। ಆಧಾರ, ಆನಿಕೆ, ಪಾತ್ರೆಗಳು ಅಲ್ಲಾಡದಂತೆ ಅವರ ಕೆಳಗೆ ಇರಿಸುವ ಇಟ್ಟಂಗಿ ಮುಂತಾದವುಗಳ ಚೂರು, ಚಕ್ಕೆ.

**उचकाना–** अक्रि. एडी के बल खडा होना, ऊपर उठना। ತುದಿಗಾಲಿನ ಮೇಲೆ ನಿಲ್ಲು, ಹಾರು, ಕುಣಿ सक्रि. उछलकर लेना। ಹಾರಿ ತೆಗೆದುಕೊಳ್ಳು, ಹಾರಿ ಹಿಡಿ.

**उचका–**क्रिवि सहसा,एकाएक। ಒಮ್ಮಿಂದೊಮ್ಮೆ, ತಟಕ್ಕನೆ, ಅಕಸ್ಮಾತ್ತಾಗಿ

**उचकाना–**सक्रि ऊपर उठाना। ಮೇಲೆ ಎತ್ತು, ಏರಿಸು

**उचक्का–** पु. टग, छीनकर भागनेवाला। ಠಕ್ಕ, ಕಳ್ಳ, ಕಿಸಿ ಕತ್ತರಿಸುವವ, ದುಷ್ಟ, ಅಪಹರಿಸುವವ.

**उचग–** पु उत्साह । ಉತ್ಸಾಹ

**उचटना–** अक्रि भडकना, ऊबना, अलग होना । ಬೆದರು, ವಿರಕ್ತನಾಗು, ದೂರವಾಗು, ಬೇರೆಯಾಗು, ಬಿಡುಗಡೆಯಾಗು, ಜಾರು.

**उचटाना–** सक्रि. उचाडना, भडकाना, अलग करना, विरक्त करना। ಬೇರ್ಪಡಿಸು, ಕೀಳು, ಹರಿ, ಬೆದರಿಸು, ಬೇರೆ ಮಾಡು, ವಿರಕ್ತಿ ಹುಟ್ಟಿಸು.

**उचडना–**अक्रि अलग होना, हट जाना। ಬೇರೆಯಾಗು, ದೂರವಾಗು, ಹರಿ, ಓಡಿಹೋಗು, ಅಗಲು.

**उचनि–** स्त्री उठान, उभाड । ಮೇಲೆ ಏಳುವಿಕೆ, ಮೇಲೆ ಬರುವಿಕೆ, ಉಕ್ಕು, ಉಬ್ಬುವಿಕೆ.

**उचाट–** पु विरक्ति, उदासी। ವಿರಕ್ತಿ, ಬೇಸರ, ದುಃಖ, ಉದಾಸೀನತೆ. वि उदास,विरक्त।ಉದಾಸೀನ, ವಿರಕ್ತ.

ಬೇಸರಾದ

**उचाटन**–पु. विरक्ति । ವಿರಕ್ತಿ, ಬೇಸರ.

**उचाटना**– सक्रि विरक्त करना । ವಿರಕ್ತಿ ಹುಟ್ಟಿಸು, ಬೇಸರಗೊಳಿಸು.

**उचाटी**– स्त्री. विरक्ति । ವಿರಕ್ತಿ, ಬೇಸರ, ಉದಾಸೀನತೆ.

**उचाटू**–वि. उचाटन करनेवाला, विरक्त करनेवाला । ಬೇರ್ಪಡಿಸುವವ, ವಿರಕ್ತಿ ಹುಟ್ಟಿಸುವವ.

**उचाडना**– सक्रि. उखाडना । ಕಿತ್ತು, ಕೀಳು, ಹರಿ, ಬೇರ್ಪಡಿಸು.

**उचाट, उचाटन**– पु. विरक्ति उदासीनता । ವಿರಕ್ತಿ, ಉದಾಸೀನತೆ, ಬೇಸರ, ಕೀಳುವಿಕೆ.

**उचारण**– पु. मुँहसे शब्द निकालना । ಉಚ್ಚರಿಸುವದು, ಉಚ್ಚಾರ.

**उच्छू**– स्त्री. एक प्रकार की खाँसी । ಕೆಮ್ಮು, ತೇಗು.

**उछंग**– पु गोद । ತೊಡೆ, ಮಡಿಲು.

**उछलकूद**– स्त्री. हलचल, कूदफाँद । ಕುಣಿದಾಟ, ಜಿಗಿದಾಟ, ಹಾರಾಟ.

**उछलना**– अक्रि नीचेसे ऊपर उठना, कूदना, खुश होना । ಮೇಲೆ ಬರು, ಮೇಲೆ ಹಾರು, ಜಿಗಿದಾಡು, ಉಕ್ಕು, ಉಲ್ಲಸಿತನಾಗು, ಪ್ರಸನ್ನನಾಗು.

**उछार, उछाल**–स्त्री. सहसा ऊपर उठना । छींटा, कै । ಒಮ್ಮಿಂದೊಮ್ಮೆ ಮೇಲೆ ಹಾರುವಿಕೆ, ಜಿಗಿದಾಟ, ಉದ್ದ ಜಿಗಿತ, ತಂತುರು, ವಾಂತಿ, ವಮನ.

**उछालना, उछारना**– सक्रि ऊपरकी ओर फेंकना, प्रकट करना । ಮೇಲೆ ಹಾರಿಸು, ಬಿನಾಡು, ಪ್ರಕಟಿಸು.

**उछाला**– पु. जोश, वमन । ಆವೇಶ, ಉತ್ಸಾಹ, ವಮನ, ಕಾರಿಕೆ.

**उछाह**–पु. उत्साह, आनंद । ಉತ್ಸಾಹ, ಆನಂದ, ಉಲ್ಲಾಸ.

**उछाही**–वि. उत्साही, हर्ष मनानेवाला । ಉತ್ಸಾಹಿ, ಉಲ್ಲಾಸಿ, ಆನಂದಿತ.

**उछीनना**– सक्रि. उखाडना । ಕೀಳು, ನಾಶಮಾಡು.

**उजट**–पु झोंपडी, उटज । ಗುಡಿಸಲು, ಪರ್ಣಕುಟಿ.

**उजडना, उजरना**– अक्रि. नष्ट होना, वीरान होना, बिखरना । ಹಾಳಾಗು, ನಾಶವಾಗು, ನಷ್ಟವಾಗು, ಛಿನ್ನವಿಚ್ಛಿನ್ನವಾಗು, ಹರಿದು ಹಂಚಿ ಹೋಗು.

**उजडवाना**– सक्रि. उजाड़नेका काम, दूसरोंसे कराना । ಹಾಳುಮಾಡಿಸು, ನೆಲಸಮ ಮಾಡಿಸು.

**उजड, उजड्ड**– वि मूर्ख, गँवार । ದಡ್ಡ, ಮೂರ್ಖ, ಅಶಿಷ್ಟ, ಹಳ್ಳಿಗಾಡ.

**उजड्डता, उजड्डपन**– पु. अशिष्टता, मूर्खतन । ಅಶಿಷ್ಟತೆ, ಹೆಡ್ಡತನ, ಮೂರ್ಖತನ, ಉಚ್ಛೃಂಖಲತೆ.

**उजरत**– स्त्री मजदूरी, पारिश्रमिक । ಕೂಲಿ, ಬಾಡಿಗೆ, ಪಾರಿಶ್ರಮಿಕ.

**उजरना**– अक्रि. दे. 'उजडना'।

**उजरा**– वि. दे. 'उजला'।

**उजराना**– सक्रि उज्वल करना । ಸ್ವಚ್ಛ

ಮಾಡು, ಬೆಳಗು.

**उजलत**– स्त्री. जल्दी । ಗಡಿಬಿಡಿ, ತ್ವರೆ, ವೇಗ, ಆತುರ.

**उजलना**– अक्रि चमकना, उज्वल होना । ಪ್ರಕಾಶಿಸು, ಎದ್ದು ಕಾಣಿಸು, ಹೊಳೆ.

**उजलवाना**– सक्रि चमकवाना । ಬೆಳಗಿಸು, ಸ್ವಚ್ಛ ಮಾಡಿಸು.

**उजला**– वि उज्वल, निर्मल । ಉಜ್ವಲ, ನಿರ್ಮಲ, ಬಿಳಿಯ, ಸ್ವಚ್ಛ.

**उजलाना**– सक्रि दे 'उजराना'।

**उजागर**– वि. प्रकाशित, चमकीला, विख्यात । ಪ್ರಕಾಶಿತ, ತೇಜಃಪುಂಜ, ಹೊಳೆಯುವ, ಪ್ರಕಟವಾದ, ಪ್ರಸಿದ್ಧ, ವಿಖ್ಯಾತ, ತೆರೆದ.

**उँजाड**– वि उजडा हुआ, वीरान । ಹಾಳಾದ, ಉಧ್ವಸ್ತವಾದ. पु उजडा हुआ या शून्य स्थान, जंगल। ಹಾಳು, ಪಾಳು, ಅರಣ್ಯ.

**उजाडना**– सक्रि नष्ट करना, तितर-बितर करना । ಹಾಳು ಮಾಡು, ಉಧ್ವಸ್ತ ಮಾಡು

**उजार**– वि दे 'उजाड'।

**उजारना**– सक्रि दे 'उजाडना ।

**उजारा**– पु दे 'उजाला'।

**उजालना**–सक्रि चमकाना, साफ करना, जलाना । ಪ್ರಕಾಶಿಸುವಂತೆ ಮಾಡು, ಬೆಳಗು, ಹೊಳೆಯಿಸು, ಮಿರುಗಿಸು, ಸ್ವಚ್ಛಮಾಡು, ಹೊತ್ತಿಸು.

**उजाला**– पु प्रकाश, चमक। ಪ್ರಕಾಶ, ಬೆಳಕು, ಹೊಳಪು. वि प्रकाशयुक्त। ಹೊಳಪುಳ್ಳ, ಪ್ರಕಾಶಿತವಾದ.

**उजाली**– स्त्री. चाँदनी । ಬೆಳದಿಂಗಳು

**उजियार, उजियारा**– पु दे 'उजाला'।

**उजियारी**– स्त्री. दे 'उजाली'।

**उजियाला**– वि दे 'उजाला'।

**उजेर**– पु प्रकाश । ಪ್ರಕಾಶ, ಬೆಳಕು, ದೀಪ್ತಿ.

**उजेरा, उजेला**– पु प्रकाश। ಪ್ರಕಾಶ, ಬೆಳಕು. वि प्रकाशयुक्त। ಪ್ರಕಾಶವುಳ್ಳ.

**उज्यारा**– पु दे 'उजाला'।

**उज्यारी**– स्त्री. दे 'उजाली'।

**उज्र, उजूर**–पु आपत्ति, विरोध। ಅಡ್ಡಿ, ವಿರೋಧ, ಆಕ್ಷೇಪಣೆ.

**उज्रदारी**– स्त्री आपत्तिजनक कार्यवाही। ಬಾಧಾಜನಕ ಕೆಲಸ, ಅಡ್ಡಿ, ಆಕ್ಷೇಪಣೆ.

**उझकना**– अक्रि. कूदना, फाँदना, अचककर झाँकना, चौंकना। ಜಿಗಿ, ನೆಗೆ, ಹಾರು, ಎತ್ತು, ತುದಿಗಾಲಿನ ಮೇಲೆ ನಿಲ್ಲು, ತಲೆ ಎತ್ತಿ ನೋಡು, ಚಕಿತನಾಗು, ಬೆಚ್ಚಿಬೀಳು

**उझरना**– अक्रि ऊपरकी ओर उठना । ಮೇಲಕ್ಕೇಳು, ಏರು.

**उझलना**–सक्रि ऊपरसे गिराना, ढालना। ಸುರುವು, ಸುರಿ, ಚೆಲ್ಲು, ಎರೆ. अक्रि उमडना । ಉಬ್ಬು, ತುಳುಕು, ಹರಿ, ಹೊಯ್ಯು.

**उझाकना**– सक्रि झाकना । ಇಣಿಕೆ

ನೋಡು.

उटंग– वि लवाईमे कम कपडा। ಉದ್ದ ಕಡಿಮೆಯಾದ ಬಟ್ಟೆ.

उटकना– सक्रि. अनुमान करना। ಅಂದಾಜು ಮಾಡು, ಅನುಮಾನ ಮಾಡು, ಊಹಿಸು

उटज–पु झोंपड़ी। ಗುಡಿಸಲು,ಗುಡ್ಲು.

उठँगन– पु. आड़, टेक। ಆಧಾರ, ಊರೆ, ಆನಿಕೆ, ಒರಗುದಿಂಬು.

उठँगना– अक्रि सहारा लेना, टेकना। ಆಧಾರ ಹೊಂದು, ಬೆನ್ನಿಗೆ ಆಧಾರ ಕೊಡು, ಆನಿಸು, ಒರಗು.

उठना– अक्रि जागना, खड़ा होना, उमड़ना, उदय होना, हटना।ಏಳು, ಎದ್ದು ನಿಲ್ಲು, ಎಚ್ಚರವಾಗು, ಉಬ್ಬು, ಉದಯವಾಗು, ಮೂಡು, ಕಾಣದಾಗು, ದೂರವಾಗು.

उठ जाना– मृत्यु होना। ಸಾಯು. उठती जवानी = नौजवानी। ತಾರುಣ್ಯದ ಪ್ರಾರಂಭ.

उठबैठ– स्त्री कसरतका एक प्रकार। ಊಟಾಬೈಸು, ಕಸರತ್ತು.

उठल्लू– वि. इधर उधर घूमनेवाला, आवारा। ತಿರುಕ, ನೆಲೆಯಿಲ್ಲದವ.

उठवाना– सक्रि उठानेका काम दूसरेसे करवाना। ಒಬ್ಬರನ್ನು ಎರಡನೆಯವರಿಂದ ಎಬ್ಬಿಸು ಅಥವಾ ಎಚ್ಚರಿಸು

उठाईगीरा– वि उचक्का। ಕಳ್ಳ, ತುಡುಗ, ವಂಚಕ, ತುಂಟ.

उठान– स्त्री. उठना, आरंभ, उत्थान, उभाड, चढाव, व्यय। ಏಳುವಿಕೆ, ಆರಂಭ, ಉದಯ, ಉಬ್ಬುವಿಕೆ, ಏರು, ಖರ್ಚಾಗುವಿಕೆ

उठाना–सक्रि. ऊंचा करना, खड़ा करना, धारण करना, ऊपर लेना, शुरू करना, हाथमें लेना, जगाना, आविष्कार करना। ಏರಿಸು, ಎತ್ತು, ಮೇಲೆ ಎತ್ತಿಕೊಳ್ಳು, ಆರಂಭಿಸು, ಕೈಯಲ್ಲಿ ತೆಗೆದುಕೊಳ್ಳು, ಎಬ್ಬಿಸು, ಎಚ್ಚರಿಸು, ಶೋಧಿಸು, ಹುಟ್ಟಿಸು.

उठावा, उठौवा– वि. दे 'उठल्लू'।

उठौनी– स्त्री उठानेकी क्रिया, उठानेकी मजदूरी, विवाह पक्का करनेके लिये कन्या पक्षको दी गयी रकम, पेशगी। ಎತ್ತುವ ಕೆಲಸ, ಎಬ್ಬಿಸುವಿಕೆ, ಎತ್ತುವ ಕೂಲಿ, ಕನ್ಯಾಶುಲ್ಕ, ಮುಂಗಡ ಕೊಟ್ಟ ಹಣ, ಅಮಾನತ್ತು.

उडंकू– वि. उड़नेवाला। ಹಾರುವ, ಏರಗುವ, ಅಲೆದಾಡುವ, ಶೀಘ್ರ ಕೆಲಸ ಮಾಡುವ.

उड़ंबर–पु गूलर। ಔದುಂಬರ, ಅತ್ತಿಗಿಡ ಹಾಗೂ ಅದರ ಹಣ್ಣು.

उड़द– पु एक अनाज। ಉದ್ದು.

उड़न– स्त्री उड़ान, उड़नेका कार्य। ಜಿಗಿತ, ನೆಗೆತ, ಜಿಗಿಯುವ ಕೆಲಸ, ಹಾರುವಿಕೆ.

उड़नछू– वि चंपत, गायब। ಓಡಿಹೋದ, ಮಾಯವಾದ.

उड़नखाई– स्त्री छल, धोखा। ಮೋಸ,

ಕಪಟ, ರಕ್ಷೆ

**उडना–** अक्रि. आकाश मार्गसे जाना, भागना, फहराना, दूर जाना, खर्च होना, फैलना, लुप्त होना। ಹಾರು, ಓಡು, ದೂರವಾಗು, ಖರ್ಚಾಗು, ಹರಡು, ಸಿಡಿ, ಇಲ್ಲದಂತಾಗು.

**उडवाना–** सक्रि उडाने का काम दूसरेसे कराना। ಹಾರಿಸು (ಎರಡನೆಯವರಿಂದ), ದುಂದು ಮಾಡಿಸು, ಖರ್ಚು ಮಾಡಿಸು.

**उडसना–** सक्रि बिछौना उठाना, नष्ट होना। ಹಾಸಿಗೆ ಎತ್ತು, ಮೂಟೆ ಎತ್ತು, ನಷ್ಟವಾಗು, ಹಾಳಾಗು.

**उडाऊ–** वि खर्चीला, उडनेवाला। ದುಂದುಗಾರ, ಹೆಚ್ಚು ಖರ್ಚು ಮಾಡುವವ, ಹಾರಾಡುವ

**उडाका, उडाकू–** वि उडनेवाला। ಹಾರುವ, ವಿಮಾನ ಮುಂತಾದವುಗಳಲ್ಲಿ ಪ್ರವಾಸ ಮಾಡುವ.

**उडान–** स्त्री उडने की क्रिया, छलाग। ಹಾರುವಿಕೆ, ಜಿಗಿತ, ದೌಡು.

**उडाना–** सक्रि उडनेमें प्रवृत्त करना, हवामें छितराना, गायब करना, खर्च करना। ಹಾರಿಸು, ಚಿಮ್ಮಿಸು, ಸಿಡಿಸು, ಗಾಳಿಯಲ್ಲಿ ತೂರು, ಇಲ್ಲದಂತೆ ಮಾಡು, ತಿಂದು ಹಾಕು, ಖರ್ಚು ಮಾಡು.

**उडासना–** सक्रि उजाडना, विस्तरा उठाना। ಹಾಳು ಮಾಡು, ಹಾಸಿಗೆ ಸುತ್ತು, ಮೂಟೆಯೆತ್ತು.

**उडिया–** पु उत्कल दशका निवासी। ಒರಿಸಾ ಪ್ರಾಂತದ ನಿವಾಸಿ.

**उडिस–** पु खटमल। ತಗಣಿ.

**उडीसा–** पु उत्कल देश। ಉತ್ಕಲ ದೇಶ, ದಕ್ಷಿಣ ಬಿಹಾರ.

**उडुप–** पु चंद्रमा, नौका। ಚಂದ್ರ, ನೌಕೆ, ನಾವ.

**उडुस–** पु खटमल। ತಗಣಿ.

**उडेरना, उडेलना-** सक्रि ढालना, गिराना। ಸುರಿ, ಚೆಲ್ಲು, ಎರೆ, ಹನಿಸು, ಖಾಲಿ ಮಾಡು

**उडैनी–** स्त्री जुगनू। ಮಿಂಚು ಹುಳು, ಹೊನ್ನೆ ಹುಳು.

**उढ़कना–** सक्रि अडना, उलझना, सहारा लेना। ಅಡ್ಡಿಯಾಗು, ತಗಲು, ಢಿಕ್ಕಿ ಹೊಡೆ, ಸಿಕ್ಕಿಕೊಳ್ಳು, ಆಶ್ರಯಿಸು, ಆನಿಸು.

**उढ़काना–** सक्रि सहारे खडा करना, भिड़ाना। ಆನಿಸು, ಆಧಾರ ಕೊಟ್ಟು ನಿಲ್ಲಿಸು, ತಗಲಿಸು, ಎದುರಿಸುವಂತೆ ಮಾಡು, ಡಿಕ್ಕಿ ಹೊಡಿಸು.

**उढ़रना–** अक्रि विवाहिता स्त्री का पर-पुरुष के साथ भाग जाना। ಓಡಿ ಹೋಗು, ವಿವಾಹಿತ ಸ್ತ್ರೀಯು ಪರ ಪುರುಷನ ಸಂಗಡ ಓಡಿ ಹೋಗುವದು.

**उढ़री–** स्त्री रखैल स्त्री। ಇಟ್ಟುಕೊಂಡವಳು, ವೇಶ್ಯೆ, ಉಪಪತ್ನಿ.

**उढ़ारना–** सक्रि दूसरे की स्त्री को लेकर भाग जाना। ಪರಸ್ತ್ರೀಯನ್ನು ಓಡಿ-

ಸಿಕೊಂಡು ಹೋಗು.

**उढावनी, उढौवनी**– स्त्री ओढनी, चद्दर। ಹೊದಿಕೆ, ಹೊದ್ದುಕೊಳ್ಳುವ ವಸ್ತ್ರ, ಚಾದರ.

**उतंक, उतंग**– वि. ऊंचा, श्रेष्ठ। ಎತ್ತರವಾದ, ಉತ್ತುಂಗ, ಶ್ರೇಷ್ಠ.

**उत, उतै**– क्रिवि. उधर, वहाँ। ಅಲ್ಲಿ, ಅತ್ತ ಕಡೆಗೆ.

**उतन**– क्रिवि उस ओर। ಅತ್ತ, ಆ ಮಗ್ಗಲು, ಆ ಕಡೆ.

**उतना**– वि. उस मात्रामें। ಅಷ್ಟು.

**उतपात**– उपद्रव, आफत। ಉತ್ಪಾತ, ಸಂಕಟ, ಉಪದ್ರವ.

**उतर**– पु. उत्तर, बदला, उत्तर दिशा। ಉತ್ತರ, ಸೇಡು, ಉತ್ತರ ದಿಕ್ಕು.

**उतरन**– स्त्री. पहना हुआ कपड़ा। ಉಪಯೋಗಿಸಿದ ಅಥವಾ ಮೈಮೇಲಿನಿಂದ ಕಳಚಿ ಬಿಸುಟ ಬಟ್ಟೆ.

**उतरना**– अक्रि. ऊपरसे नीचे आना, ढलना, कम होना, गिरना, हट-जाना, ठहरना। ಇಳಿ, ಕೆಳಗೆಬರು, ಕುಂದು, ಕಡಿಮೆಯಾಗು, ಕುಗ್ಗು, ಇಲ್ಲದಂತಾಗು, ನಿಲ್ಲು, ತಂಗು, ವಸತಿ ಮಾಡು.

**उतरवाना**– सक्रि 'उतारना' का प्रे रूप।

**उतराई**– स्त्री. पार उतारनेका महसूल, ऊपरसे नीचे आनेका काम। ನದಿಯನ್ನು ದಾಟಿಸುವ ಬಾಡಿಗೆ, ನಾವಿನ ಬಾಡಿಗೆ, ಇಳಿಯುವದು, ಇಳಿತ, ಇಳುಕಲು.

**उतराना**– सक्रि 'उतारना' का प्रे. रूप। अक्रि. तैरना, उफान खाना, प्रकट होना। ತೇಲು, ಕುದಿ, ಎಲ್ಲ ಕಡೆಗೆ ಕಾಣು, ಪ್ರಕಟವಾಗು.

**उतरिन**– वि. उऋण। ಋಣಮುಕ್ತ.

**उतलाना**– अक्रि. उतावली करना। ಗಡಿಬಿಡಿ ಮಾಡು, ತ್ವರೆ ಮಾಡು.

**उतान**–वि. चित्त या सीधा। ಅಂಗಾತ, ಸೀಧಾ, ಚಿತ್ತಾದ.

**उतार**–पु. उतरने की क्रिया, ढाल, घटाव, उतारन, न्योछवार, पानीमें चलकर पार करनेका स्थान। ಇಳಿತ, ಇಳುಕಲು, ಕಡಿಮೆಯಾಗುವಿಕೆ, ಇಳಿಸಿದ ವಸ್ತು, ಬಲಿ, ನಿವಾಳಿ, ಜನರು ದಾಟುವಂತೆ ಕಡಿಮೆ ಆಳವಾದ ನದಿಯ ಭಾಗ.

**उतारन**– स्त्री. दे 'उतरन'।

**उतारना**– सक्रि. ऊंचे स्थान से नीचे लाना, दूर करना, तोड़ना, पहनी हुई वस्तुको अलग करना, पार उतारना, नकल करना। ಇಳಿಸು, ಕೆಳಗೆ ತರು, ದೂರೀಕರಿಸು, ಹೋಗಲಾಡಿಸು, (ಭೂತಬಾಧೆ) ಇಳಿಸು, ಮುರಿ, ಕಳಚು, ತೆಗೆದಿಡು, ಕಳೆದಿಡು, ದಾಟಿಸು, ನಕಲು ಮಾಡು.

**उतारा**– पु नदी पार करने या डेरा डालनेका काम, उतरने की जगह, उतारने की वस्तु। ನದಿ ದಾಟುವಿಕೆ. ಇಳಿಯುವಿಕೆ, ಮುಕ್ಕಾಂ ಮಾಡು

ಪದು, ಇಳಿಯುವ ಸ್ಥಳ, ನಿವಾಳಿ.

**उतारू–** वि. तत्पर, उद्यत। ತತ್ಪರ ನಾದ, ಸಿದ್ಧನಾದ, ಉದ್ಯತ

**उतावल, उताहिल, उतैला–** साक्रि शीघ्रतासे। ತ್ವರೆಯಾಗಿ, ಗಡಿಬಿಡಿಯಿಂದ

**उतावला–** वि जल्दबाज, चचल। ಆತುರ ಪಡುವ, ಗಡಿಬಿಡಿ ಮಾಡುವ, ದುಡುಕಿನ, ಚಂಚಲ

**उतावली–** स्त्री शीघ्रता, जल्दबाजी। ತ್ವರೆ, ಗಡಿಬಿಡಿ, ಆತುರ, ಚಂಚಲತೆ, ದುಡುಕುತನ.

**उत्कट–** वि प्रचंड, प्रबल, उग्र, भारी। ಪ್ರಚಂಡ, ಪ್ರಬಲ, ಬಲವಾದ, ಉಗ್ರ, ಕಠಿಣ, ದೊಡ್ಡ.

**उत्कल–** पु दे 'उडिया'।

**उत्कोच–** पु रिश्वत। ಲಂಚ.

**उत्तरदाता–** पु जिम्मेदार। ಹೊಣೆಗಾರ, ಜವಾಬ್ದಾರ.

**उत्तरदायित्व–** पु जिम्मेदारी। ಜವಾಬ್ದಾರಿ, ಹೊಣೆ

**उत्तरदायी–** वि दे 'उत्तरदाता'।

**उत्तान–** वि सीधा, चित्त। ನಾದಾ, ಅಂಗಾತ, ಚಿತ್ತಾದ.

**उत्तीर्ण–** वि. सफल। ಪಾಸಾದ, ತೇರ್ಗಡೆಯಾದ.

**उत्तेजन–** पु **उत्तेजना–** स्त्री बढावा, प्रेरणा। ಪ್ರೋತ್ಸಾಹನೆ, ಉತ್ತೇಜನ.

**उत्पात–** पु. उपद्रव। ಉಪದ್ರವ, ಗಲಾಟೆ, ಉತ್ಪಾತ.

**उत्सर्ग–** पु त्याग, दान। ತ್ಯಾಗ, ಆತ್ಮಾರ್ಪಣೆ, ಬಲಿ, ದೇಣಿಗೆ, ದಾನ

**उथलना–** अक्रि. डगसगाना, डॉवाडोल होना। ಅಲ್ಲಾಡು, ತುಳುಕಾಡು, ಕೆಳಗೆ ಮೇಲೆಯಾಗು, ಅಲ್ಲೋಲಕಲ್ಲೋಲವಾಗು. सक्रि उलट-पुलट करना। ಮಗುಚು, ಹೊರಳಿಸು, ಬುಡಮೇಲು ಮಾಡು

**उथल-पुथल–** स्त्री उलट-पुलट, विपर्यस्त। ತಿರುವು-ಮುರುವು, ತಲೆ ಕೆಳಗು वि उलट-पुलट। ತಲೆ ಕೆಳಗಾದ, ತಿರುವು-ಮುರುವಾದ, ಕ್ರಮ ತಪ್ಪಿದ, ಬುಡಮೇಲಾದ

**उथला–** वि कम गहरा, छिछला। ಕಡಿಮೆ ಆಳವಾದ, ಆಳವಿಲ್ಲದ.

**उदकना–** अक्रि ऊपर उठना, कूदना। ಏಳು, ನೆಗೆ, ಕುಣಿ.

**उदमदना–** अक्रि उन्मत्त होना। ಉನ್ಮತ್ತನಾಗು, ಹುಚ್ಚನಾಗು.

**उदमाद–** पु दे 'उन्माद'।

**उदमान–** वि. उन्मत्त। ಉನ್ಮತ್ತನಾದ, ಹುಚ್ಚನಾದ.

**उदरना–** अक्रि फटना, नष्ट होना, टुकडे टुकडे होना। ಹರಿ, ಒಡೆ, ಮುರಿ, ಸೀಳು, ನಷ್ಟವಾಗು, ಚೂರು ಚೂರಾಗು.

**उदवना–** अक्रि. उदय होना। ಉದಯಿಸು, ಕಾಣಿಸು, ಹೊರಹೊಮ್ಮು, ಮೊಳೆ.

**उदारना–** सक्रि फाडना, छिन्नविच्छिन्न

करना। ಹರಿ, ಹರಿ, ಸೀಳು, ಚೂರುಚೂರು ಮಾಡು.

**उदास**– वि. रंजीदा, दु:खी। ಖಿನ್ನ, ದುಃಖಿತ, ಉದಾಸೀನ.

**उदासी**– स्त्री. खिन्नता, दु:ख। ಉದಾಸೀನತೆ, ದುಃಖ. पु. विरक्त, त्यागी, दु:खित, नानक पंथी साधु। ವಿರಕ್ತ, ತ್ಯಾಗಿ, ದುಃಖಿತ, ನಾನಕ ಪಂಥದ ಸಾಧು.

**उदुंबर**– पु. गूलर, चौखट, नपुंसक। ಅತ್ತಿಯಗಿಡ, ಚೌಕಟ್ಟು, ಹೊಸ್ತಿಲು, ನಪುಂಸಕ.

**उदै, उदो, उदौ**– पु. उदय, उन्नति। ಉದಯ, ಉನ್ನತಿ.

**उदोत**– पु प्रभा, प्रकाश। ಪ್ರಭೆ, ಪ್ರಕಾಶ वि चमकीला। ಪ್ರಕಾಶಿತ, ಹೊಳೆಯುವ.

**उद्गम**– पु. उत्पत्ति, उदय। ಉತ್ಪತ್ತಿ, ಉದಯ, ಮೂಲ, ಉದಯ ಸ್ಥಾನ.

**उद्घाटन**– पु प्रकाशन। ಪ್ರಕಾಶನ, ತೆರೆಯುವಿಕೆ, ಉದ್ಘಾಟನ.

**उद्दाम**– वि. उच्छृंखल, उद्दंड, बड़ा, स्वतंत्र, असीम, प्रचंड। ನಿರಂಕುಶ, ಸ್ವೈರ, ಉದ್ದಂಡ, ದೊಡ್ಡ, ಮಹಾನ್, ಸ್ವತಂತ್ರ, ಅಸೀಮ, ಪ್ರಚಂಡ.

**उद्धत**–वि. उजड्ड, उग्र, निडर। ಒರಟ, ಉಗ್ರ, ಸೊಕ್ಕಿನ, ಮೂರ್ಖ, ಅಂಜಿಕೆಯಿಲ್ಲದ.

**उद्भट**– वि. बड़ा, प्रबल। ದೊಡ್ಡ, ಪ್ರಬಲ, ಪ್ರಚಂಡ.

**उद्यत**–वि. तैयार, उतारू। ಸಿದ್ಧನಾದ, ತಯಾರಾದ, ಸನ್ನದ್ಧ.

**उद्यम**–पु. उद्योग, प्रयत्न। ಉದ್ಯೋಗ, ಪ್ರಯತ್ನ.

**उधड़ना**– अक्रि. खुलना, अलग होना। ತೆರೆ, ಬಿಚ್ಚು, ಬೇರೆಯಾಗು, ಕಳಚಿ ಹೋಗು.

**उधम**– पु. उपद्रव। ಉಪದ್ರವ.

**उधर**– क्रिवि. उस तरफ। ಅತ್ತ, ಆ-ಕಡೆ, ಎರಡನೆಯ ಕಡೆ.

**उधरना**– अक्रि उद्धार पाना, निकल जाना। ಉದ್ಧಾರವಾಗು, ಬೇರೆಯಾಗು, ಬಿಚ್ಚಿ ಹೋಗು. सक्रि उद्धार करना। ಉದ್ಧಾರ ಮಾಡು, ಪಾರು ಮಾಡು.

**उधराना**–अक्रि विखरना, उन्मत्त होना, ऊधम मचाना। ಬೇರೆಬೇರೆಯಾಗು, ಸಿಡಿದು ಹೋಗು, ಹಂಚು, ಹರವು, ಉನ್ಮತ್ತನಾಗು, ಗದ್ದಲವೆಬ್ಬಿಸು.

**उधार**–पु. देन, मँगनी, उद्धार। ಸಾಲ, ಕಡ, ಉದ್ರಿ, ಉದ್ಧಾರ, ಮುಕ್ತಿ.

**उधारना**– सक्रि. उद्धार करना। ಉದ್ಧಾರ ಮಾಡು, ಮುಕ್ತಗೊಳಿಸು.

**उधेड़ना, उधेरना**– सक्रि. अलग करना, खोलना। ಬೇರೆ ಬೇರೆ ಮಾಡು, ಬಿಚ್ಚು, ಹೊಲಿಗೆ ಬಿಚ್ಚು, ಸಿಪ್ಪೆ-ತೆಗೆ, ತೆರೆ, ಹರವು.

**उधेड़बुन**– स्त्री सोचविचार, चिंता।

ಆಲೋಚನೆ, ವಿಚಾರ, ಚಿಂತೆ, ಗೊಂದಲ.

**उनचास**–वि. ४९ । ನಲವತ್ತೊಂಭತ್ತು.

**उनतालीस**– वि. ३९ । ಮೂವತ್ತೊಂಭತ್ತು.

**उनतीस**– वि. २९ । ಇಪ್ಪತ್ತೊಂಭತ್ತು.

**उनदा, उनदौंहा, उनींदा**– वि ऊंघता हुआ, नीदका सताया हुआ । ತೂಕಡಿಸುವ, ನಿದ್ರೆಗೆಟ್ಟು ತ್ರಾಸ ಹೊಂದಿದ, ನಿದ್ದೆಯಿಂದ ಆವರಿಸಲ್ಪಟ್ಟ

**उनमना**– वि. दे 'अनमना'।

**उनमाथना**– सक्रि मथना । ಕಡೆ, ಮಥಿಸು.

**उनमाद**– पु. दे 'उन्माद'।

**उनमान**–पु. अंदाजा, सामर्थ्य, योग्यता, नाप । ಅಂದಾಜು, ಅನುಮಾನ, ಊಹೆ, ಶಕ್ತಿ, ಸಾಮರ್ಥ್ಯ, ಯೋಗ್ಯತೆ, ಮಾಪ, ಅಳತೆ. वि समान। ಸಮಾನ, ಅಂಥ.

**उनमेख**– पु खुलना, विकास । ತೆರೆಯುವದು, ವಿಕಾಸ.

**उनमेखना**– अक्रि खुलना, खिलना । (ಕಣ್ಣು) ತೆರೆ, ಅರಳು

**उनरना**– अक्रि उमडना, उछलना । ಉನ್ನತವಾಗು, ತುಂಬಿಬರು, ಜಿಗಿಯುತ್ತ ನಡೆ, ಹಾರುತ್ತ ನಡೆ.

**उनवना**– अक्रि झुकना, लटकना, घिर आना । ಬಾಗು, ತೂಗಾಡು, ಜೋತಾಡು, ಶರಣಾಗತನಾಗು, ಕೂಡಿಬರು, ಕವಿ, ಮುತ್ತು

**उनवान**– पु. अनुमान, खयाल। ಅನುಮಾನ, ಸಂದೇಹ, ವಿಚಾರ

**उनसठ**– वि. ५९ । ಐವತ್ತೊಂಭತ್ತು

**उनहत्तर**–वि. ६९ । ಅರವತ್ತೊಂಭತ್ತು

**उनहानि**–स्त्री बराबरी, समता । ಸಮಾನತೆ, ಸರಿ, ಸಾದೃಶ್ಯ.

**उनहार**– वि समान, सदृश । ಸಮಾನ, ಸರಿಯಾದ, ಸದೃಶ

**उनहारि**–स्त्री. समानता, सादृश्य । ಸಮಾನತೆ, ಸಾದೃಶ್ಯ, ಏಕರೂಪ

**उनाना**– सक्रि झुकाना, प्रवृत्त करना । ತಿರುಗಿಸು, ಪ್ರವೃತ್ತಿಸು, ಒಲಿಸು, ಬಗ್ಗಿಸು. अक्रि. मानना । ಕೇಳು, ಪಾಲಿಸು.

**उनिमह**– सर्व. उसमे । ಅದರಲ್ಲಿ.

**उनींदा**– स्त्री. दे. 'उनदा'।

**उन्नइस, उन्नीस**– वि १९ । ಹತ್ತೊಂಭತ್ತು. **उन्नीस बीस्वे**=बहुत करके. ज्यादा । ಬಹಳವಾಡಿ, ಹೆಚ್ಚಾಗಿ

**उन्नासी**– वि. ७९ । ಎಪ್ಪತ್ತೊಂಭತ್ತು.

**उन्नीस**– वि. १९ । ಹತ್ತೊಂಭತ್ತು.

**उन्माद**– पु पागलपन, उन्मत्तता । ಮರುಳು, ಹುಚ್ಚು, ಉನ್ಮತ್ತತೆ, ಮದ

**उन्मेष**– पु खुलना, खिलना, विकास, चमक । ತೆರೆಯುವಿಕೆ, ಅರಳುವದು, ವಿಕಾಸ, ಹೊಳಪು, ಪ್ರಕಾಶ

**उपंत**– वि उत्पन्न । ಉತ್ಪನ್ನವಾದ. ಉತ್ಪಾದಿತ.

**उपगत**– वि प्राप्त, स्वीकृत, ज्ञात ।

ಪ್ರಾಪ್ತ, ಸ್ವೀಕೃತ, ಸಿಕ್ಕ, ಪರಿಚಿತ, ಜ್ಞಾತ.

**उपज**– स्त्री पैदावर, मनगढ़ंत, नयी-उक्ति। ಹುಟ್ಟುವಳಿ, ಬೆಳೆ, ಬೆಳವಣಿಗೆ, ಕಪೋಲಕಲ್ಪನೆ, ಹೊಸ ಕಲ್ಪನೆ, ಕಟ್ಟುಕತೆ.

**उपजना**– अक्रि उत्पन्न होना, पैदा होना। ಉತ್ಪನ್ನವಾಗು, ಹುಟ್ಟು, ಬೆಳೆ, ಮೊಳೆ.

**उपजाऊ**– वि. उर्वरा। ಬೆಳೆಯುಳ್ಳ, ಸಲವತ್ತಾದ, ಸಮೃದ್ಧವಾದ, ಹುಲುಸಾದ.

**उपजाना**– सक्रि उत्पन्न करना, पैदा करना। ಹುಟ್ಟಿಸು, ಉತ್ಪನ್ನಮಾಡು, ಬೆಳೆಯಿಸು.

**उपटन**– पु. उबटन, आघात इत्यादि का चिह्न। ಸ್ನಾನದ ಮೊದಲು ಹಚ್ಚಿಕೊಳ್ಳುವ ಲೇಪ, ಸುಗಂಧಿ ದ್ರವ್ಯ, ಆಘಾತ ಮುಂತಾದವುಗಳ ಚಿಹ್ನೆ, ಬಾಸಾಳ, ಗಾದರಿ.

**उपटना**– अक्रि उखड़ना, चिह्न पड़ना। ಕಿತ್ತುಹೋಗು, ನಾಶವಾಗು, ಬಾಸಾಳ ಮೂಡು, ಚಿಹ್ನೆ ಮೂಡು, ಗಾದರಿ ಮೂಡು.

**उपटाना**– सक्रि. उखड़वाना, उबटन लगवाना। ಕೀಳಿಸು, ದೂರ ಮಾಡಿಸು, ಲೇಪ ಹಚ್ಚಿಸು, ಲೇಪ ಸವರು.

**उपटारना, उपठारना**– सक्रि उच्चाटन करना, हटाना। ಕೀಳು, ಕಳಚು, ಅಗಲಿಸು.

**उपड़ना**– अक्रि. दे 'उपटना'।

**उपत्यका**– स्त्री घाटी, तराई। ತಪ್ಪಲು, ಪರ್ವತದ ಹತ್ತಿರದ ಭೂಮಿ, ಕೊಳ್ಳ.

**उपदेस**– पु. उपदेश। ಉಪದೇಶ.

**उपद्रव**– पु. ऊधम, उत्पात। ಗಲಾಟೆ, ಗದ್ದಲ, ಉಪದ್ರವ, ತೊಂದರೆ.

**उपधरना**–अक्रि. सहारा देना, अंगीकार करना। ಆಶ್ರಯ ಕೊಡು, ಆಧಾರ ಕೊಡು, ಅಂಗೀಕರಿಸು, ಸ್ವೀಕರಿಸು.

**उपनना**–अक्रि. उत्पन्न होना। ಹುಟ್ಟು, ಉತ್ಪನ್ನವಾಗು.

**उपनाना**– सक्रि पैदा करना। ಹುಟ್ಟಿಸು, ಉತ್ಪನ್ನಮಾಡು, ಬೆಳೆಯಿಸು.

**उपनिवेश**– पु. दूसरे देशसे आकर नये स्थानमें बसना। ವಸಾಹತು, ಪರ ದೇಶಕ್ಕೆ ಹೋಗಿ ಒಕ್ಕಲು ಮಾಡು ವಿಕೆ.

**उपन्यास**–पु. कल्पित कहानी, प्रस्ताव। ಕಟ್ಟುಕತೆ, ಕಾದಂಬರಿ, ಪ್ರಸ್ತಾವ.

**उपरना**– पु. दुपट्टा, ऊपरी वस्त्र। ಹೊದಿಕೆ,ದುಪ್ಪಟಿ. अक्रि दे.'उखड़ना'।

**उपरोहित**– पु. पुरोहित। ಪುರೋಹಿತ.

**उपरांत**– क्रिवि. अनंतर। ಅನಂತರ, ಆಮೇಲೆ.

**उपरा-चढ़ी**– स्त्री. चढ़ावढ़ी, प्रतिस्पर्धा। ಮೇಲಾಟ, ಪ್ರತಿಸ್ಪರ್ಧೆ, ಸ್ಪರ್ಧೆ.

**उपराजना**–सक्रि.उत्पन्न करना, बनाना। ಹುಟ್ಟಿಸು, ತಯಾರಿಸು, ಬೆಳೆ-

ಯಿಸು.

**उपराना–** अक्रि. ऊपर चढना, प्रगट होना। ಮೇಲೆಬರು,ಪ್ರಕಟವಾಗು, ಹೊರಬೀಳು सक्रि ऊपर करना। ಮೇಲೆ ಮಾಡು, ಎತ್ತು.

**उपराला–** पु सहायता। ನೆರವು, ಸಹಾಯ

**उपरी-उपरा–** पु दे. 'उपराचढी'।

'**उपरोक्त, उपर्युक्त**–वि ऊपर कहा हुआ। ಮೇಲೆ ಹೇಳಿದ.

**उपरोध–** पु ढकना, रोक। ಆವರಣ, ಮುಚ್ಚಳ, ಅಡ್ಡಿ, ಪ್ರತಿಬಂಧ.

**उपरोधक**–वि प्रतिबंधक, रोकनेवाला। ಭಾಧಕ, ಪ್ರತಿಬಂಧಕ, ಅಡ್ಡಿ ಮಾಡುವ पु भीतरी कमरा। ಒಳಕೋಣೆ.

**उपरौटा–** पु.'ऊपरी भाग, ऊपरी पल्ला। ಮೇಲ್ಭಾಗ, ಮೇಲಿನ ಪದರು.

**उपल–** पु. पत्थर, रत्न, ओला। ಕಲ್ಲು, ರತ್ನ, ಆಣೆಕಲ್ಲು.

**उपला–** पु गोबरका सुखाया हुआ टुकडा। ಒಣಗಿಸಿದ ಸೆಗಣಿಯ ಚೂರುಗಳು, ಕುಳ್ಳು, ಬೆರಣಿ.

**उपली–** स्त्री कण्डी। ಕುಳ್ಳು, ಬೆರಣಿ.

**उपसना–** अक्रि सड जाना, दुर्गन्धित होना। ಕೊಳೆ, ನಾರು, ಹೊಲಸು ವಾಸನೆ ಹೊರಡು.

**उपस्थित–** वि हाजिर, सम्मुख आया हुआ। ಹಾಜರಿರುವ, ವಿದ್ಯಮಾನ, ಮುಂದೆ ಬಂದಿರುವ

**उपस्थिति–** स्त्री उपस्थान, पहुंच। ಹಾಜರು, ಮುಟ್ಟುವಿಕೆ, ತಲುಪುವದು.

**उपहार–** पु भेंट, नजराना। ಕಾಣಿಕೆ, ಉಡುಗೊರೆ, ಪಾರಿತೋಷಕ, ಸಂಭಾವನೆ.

**उपहास–** पु हँसी, निंदा। ಪರಿಹಾಸ, ನಿಂದೆ, ಕೇಡು.

**उपही–** वि अपरिचित, परदेशी। ಅಪರಿಚಿತ, ಪರದೇಶದ.

**उपाइ, उपाउ–** पु उपाय, युक्ति। ಉಪಾಯ, ಯುಕ್ತಿ, ಸಾಧನ.

**उपाटना, उपाडना–** सक्रि उखाडना। ಬೇರುಸಹಿತ ಕಿತ್ತು.

**उपादेय–** वि ग्राह्य, उत्तम, श्रेष्ठ। ಸ್ವೀಕರಿಸಲು ಯೋಗ್ಯವಾದ, ಗ್ರಾಹ್ಯ, ಉತ್ತಮ, ಶ್ರೇಷ್ಠ, ಒಳ್ಳೆಯ.

**उपाधि–** स्त्री छल, विघ्न, पदवी। ಕಪಟ, ವಿಘ್ನ, ಬಾಧೆ, ಪದವಿ, ಬಿರುದು.

**उपानत, उपानर–** पु जूता, पादत्राण। ಪಾದತ್ರಾಣ, ಕೆರವು.

**उपाना–** सक्रि उत्पन्न करना, करना, रचना। ಹುಟ್ಟಿಸು, ಮಾಡು, ರಚಿಸು, ಕಲ್ಪಿಸು.

**उपालंभ–** पु ताना, निंदा। ನಿಂದೆ, ದೂರು, ವ್ಯಂಗ

**उपासना–** स्त्री पूजा, सेवा। ಆರಾಧನೆ, ಪೂಜೆ, ಸೇವೆ. सक्रि पूजा करना। ಪೂಜಿಸು, ಭಜಿಸು अक्रि उपवास

करना । ಉಪವಾಸ ಮಾಡು.

**उपँना**– वि. खुला हुआ, नग्न । ತೆರೆದ, ನಗ್ನ, ಬೆತ್ತಲೆ.

**उफ़**–अव्य. अफसोस, आह । ಅಯ್ಯೋ!

**उफडना, उफनना**– अक्रि. उबलना । ಉಕ್ಕು, ಕುದಿ, ಮರಳು.

**उफनाना**– अक्रि. उबलना । ಉಕ್ಕು, ಕುದಿ, ಕಾಯು.

**उफान**– पु. फेन, उबाल । ಕುದಿ, ಉಕ್ಕು.

**उबकना**– अक्रि. वमन करना । ವಾಂತಿ ಮಾಡು, ಕಾರು, ವಾಕರಿಸು.

**उबकाई**– स्त्री. जी मचलाना, वमन । ವಾಕರಿಕೆ, ವಮನ, ವಾಂತಿ.

**उबटन**– पु. अभ्यंग, लेप । ಸ್ನಾನದ ಮೊದಲು ಹಚ್ಚಿಕೊಳ್ಳುವ ಲೇಪ, ತೈಲ.

**उबटना**–अक्रि. उबटन लगाना । ಲೇಪ ಹಚ್ಚು, ತೈಲ ಸವರು.

**उबरना**– अक्रि मुक्ति पाना, उद्धार होना । ಮುಕ್ತನಾಗು, ಉಳಿ, ಉದ್ಧಾರನಾಗು.

**उबरा सुबरा**–वि बचा हुआ । ಉಳಿದ, ಮಿಕ್ಕಿದ.

**उबलना**–अक्रि. खौलना । ಕುದಿ,ಉಕ್ಕಿ ಬರು, ಸಳಸಳ ಕುದಿ.

**उबसना**– अक्रि सड़ना, मैला होना । ಕೊಳೆ, ಕಿಚಿಕಿಚಿಯಾಗು, ಹೊಲಸಾಗು, ಪಾತ್ರೆ ತೊಳೆ.

**उबहना**–सक्रि हथियार उठाना । ಶಸ್ತ್ರ ಎತ್ತು, ಕತ್ತಿಯನ್ನು ಒರೆಯಿಂದ ಹೊರಗೆ ತೆಗೆ.

**उबहनी**– स्त्री. रस्सी । ಹಗ್ಗ

**उबांत**– स्त्री कै, वमन । ವಾಂತಿ, ಕಾರಿಕೆ.

**उबार**– पु. मोक्ष, उद्धार । ಮುಕ್ತಿ, ಬಿಡುಗಡೆ, ಉದ್ಧಾರ.

**उबारना**– सक्रि. मुक्ति देना, उद्धार करना । ಉದ್ಧರಿಸು, ಬಿಡುಗಡೆ ಮಾಡು, ಕಾಪಾಡು.

**उबाल**– पु. आँच लगनेपर फेनके साथ ऊपर उठना, उद्वेग । ಕುದಿ,ಉಕ್ಕು, ಆವೇಶ, ಕ್ಷೋಭೆ.

**उबालना**– सक्रि. खौलाना । ಕುದಿಸು, ಮರಳಿಸು.

**उबासी**– स्त्री. जंभाई । ಆಕಳಿಕೆ.

**उबीठना**– सक्रि अच्छा न लगना । ಚಲೋ ಅನಿಸದಿರು, ಸೇರದಿರು, ಬೇಸರವಾಗು.

**उबेना**– वि नंगे पैरका । ಬರಿಗಾಲಿನ.

**उबेरना**– सक्रि. दे 'उबारना'।

**उबेहना**– सक्रि बेठाना । ಚೂಚ್ಚಿಸು, ಹೆಣೆ, ಪೋಣಿಸು.

**उभक**– पु. रीछ । ಕರಡಿ.

**उभडना, उभरना, उभना**– ऊपर उठना, बढ़ना, जवानीपर आना, फूलना, प्रकाशित होना, खुलना, उद्धार पाना । ಮೇಲೆ ಬರು,ಉಬ್ಬು, ತಾರುಣ್ಯಕ್ಕೆ ಬರು,ಅರಳು,ವಿಕಸಿತವಾಗು, ಪ್ರಕಾಶಿತವಾಗು, ತೆರೆ,

ಉದ್ಧಾರವಾಗು.

**उभराई**— स्त्री. अहंकार, उभाड । ಅಹಂಕಾರ, ಉಬ್ಬು, ಉಬ್ಬರ,ಏರು.

**उभरौंहा**— वि ऊपर उठा हुआ। ಉಬ್ಬಿದ, ವೃದ್ಧಿ ಹೊಂದಿದ

**उभाड**— पु उठान, उंचाई, वृद्धि। ಎತ್ತರ, ಉಬ್ಬರ, ವೃದ್ಧಿ.

**उभाडना, उभारना**— सक्रि उत्तेजित करना, बहकाना। ಉತ್ತೇಜಿಸು, ಮೇಲೆ ಎತ್ತು, ಮನ ಒಲಿಸು, ಉಬ್ಬಿಸು, ಪ್ರೇರೇಪಿಸು.

**उमंग, उमग, उमगन**— स्त्री जोश, मौज, लहर, उभाड । ಆವೇಶ, ಒಲವು,ಆನಂದ,ಉತ್ಸಾಹ, ವೃದ್ಧಿ.

**उमँगना, उमगना**— अक्रि. उमड़ना, जोशमे आना, उल्लासित होना। ಉಬ್ಬು, ಉಕ್ಕೇರು, ಉತ್ಸಾಹಿತನಾಗು, ಆನಂದಿತನಾಗು, ವೃದ್ಧಿಯಾಗು

**उमगाना**— सक्रि उत्तेजित करना, उभाड़ना। ಉತ್ತೇಜಿಸು, ಹುರಿದುಂಬಿಸು, ಉಬ್ಬಿಸು.

**उमड**— बाढ, उभाड, भराव। ಪೂರ, ನೆರೆ, ವೃದ್ಧಿ, ಉಬ್ಬು, ತುಂಬುವಿಕೆ, ಕವಿಯುವಿಕೆ, ಮುತ್ತಿಗೆ.

**उमड़ना**— अक्रि आवेशमें आ जाना, फैलना, बाढ आना, छाना। ಆವೇಶವೇರು, ಹಬ್ಬು, ಉಕ್ಕು, ತುಳುಕು, ತುಂಬು, ಮಹಾಪೂರ ಬರು, ಕವಿ.

**उमदगी**— स्त्री अच्छाई, बढियापन। ಉತ್ತಮತನ, ಉತ್ಕೃಷ್ಟತೆ.

**उमदना**—अक्रि. उभडना,उमंगमें भरना। ತುಂಬಿ ಬರು,ಉಕ್ಕು, ಹೊರಚೆಲ್ಲು, ಉತ್ಸಾಹಿತನಾಗು, ಆವೇಶ ತುಂಬು.

**उमदा**— वि. बढिया, अच्छा। ಒಳ್ಳೆಯ, ಉತ್ತಮ, ಉತ್ಕೃಷ್ಟ

**उमर**— स्त्री दे 'उम्र'।

**उमरा, उमराव**— पु. सर्दार, 'अमीर' का बहुवचन । ಸರದಾರರು, ಪ್ರತಿಷ್ಠಿತ ಜನರು, ಪ್ರಭುಗಳು.

**उमस**— स्त्री. हवा न चलनेसे उत्पन्न गरमी। ಸೆಕೆ, ಗಮ್ಮು, ಝಳ, ಧಗೆ, ಹವೆಯಾಡದಾಗ ಆಗುವ ಸೆಕೆ.

**उमहना**— अक्रि दे. 'उभडना'।

**उमाह**—पु उत्साह, उमंग। ಉತ್ಸಾಹ, ಪ್ರಫುಲ್ಲತೆ, ಆನಂದ, ಆವೇಶ.

**उमाहल**— वि. उत्साहयुक्त, आनंदित। ಉತ್ಸಾಹಿತ, ಉತ್ಸಾಹ ಪೂರ್ಣ, ಆನಂದಿತ.

**उमेठना**— सक्रि मरोडना। ತಿರುಗಿಸು, ಹೊಸೆ.

**उमेडना,उमैठना**— सक्रि. दे. 'उमेठना'।

**उमेलना**— सक्रि. खोलना, प्रकट करना। ತೆರೆ, ಪ್ರಕಟಿಸು

**उम्दगी**— स्त्री. दे 'उमदगी'।

**उम्दा**— वि दे 'उमदा'।

**उम्मीद, उम्मेद**— स्त्री. आशा, भरोसा। ಆಸೆ, ಭರವಸೆ, ನೆಚ್ಚಿಕೆ.

**उम्मीदवार, उम्मेदवार**– पु नौकरी पानेकी आशा करनेवाला, चुनावके लिये खड़ा होनेवाला । ಉದ್ಯೋಗಾರ್ಥಿ, ಉಮೇದವಾರ, ಅಪೇಕ್ಷಕ, ಚುನಾವಣೆಗೆ ನಿಂತುಕೊಳ್ಳುವವ.

**उम्र**– स्त्री. आयु, अवस्था । ವಯಸ್ಸು, ಆಯುಷ್ಯ, ಜೀವಮಾನ.

**उरग**– पु साँप । ಹಾವು.

**उरगना**– सक्रि. ग्रहण करना । ಸ್ವೀಕರಿಸು, ಅಂಗೀಕರಿಸು.

**उरज, उरजात**– पु स्तन, कुच । ಸ್ತನ, ಮೊಲೆ.

**उरझना**– सक्रि. दे ‘ उलझना ’ ।

**उरझाना**– सक्रि. दे ‘ उलझाना ’ ।

**उरद**– पु एक अन्न । ಉದ್ದು

**उरध**–क्रिवि ऊर्ध्व, ऊपर । ಊರ್ಧ್ವ, ಮೇಲೆ.

**उरधारना**– सक्रि. दे. ‘ उधेड़ना ’ ।

**उरवी, उर्वी**– पृथ्वी । ಪೃಥ್ವಿ

**उरविज**–पु मंगलग्रह । ಮಂಗಳಗ್ರಹ.

**उरस**– वि फीका, नीरस । ನೀರಸ, ರುಚಿಯಿಲ್ಲದ. पु. हृदय । ಹೃದಯ, ಎದೆ.

**उरसना**– अक्रि. उथलपुथल करना । ಮೇಲೆ ಕಳಗೆ ಮಾಡು, ಅಗಳಾಡಿಸು, ಕೂಡಿಸು.

**उरहन, उरहना**– पु उलाहना । ನಿಂದೆ, ದೂರು.

**उराऊ, उराव**– पु उमंग चाह । ಉತ್ಸಾಹ, ಇಚ್ಛೆ, ಅಭಿಲಾಷೆ, ಲವಲವಿಕೆ.

**उराहना**– पु. दे ‘ उलाहना ’ ।

**उरिण, उरिन**– वि. ऋणमुक्त । ಋಣಮುಕ್ತ.

**उरूस**– स्त्री दुलहिन । ಮದುಮಗಳು, ವಧು.

**उरेखना**–सक्रि लिखना, देखना, कल्पना करना । ಬರೆ, ನೋಡು, ಕಲ್ಪಿಸು, ಕಲ್ಪನೆ ಮಾಡು

**उरेह**– पु. चित्रकारी । ಚಿತ್ರಕಲ.

**उरेहना**– सक्रि. चित्र खींचना । ಚಿತ್ರ ತೆಗೆ, ಬಣ್ಣ ಕೊಡು.

**उर्दू**– स्त्री. सेना, सेना की हाट, फारसी लिपिमें लिखी जानेवाली एक भाषा । ದಂಡು, ಸೈನ್ಯ, ಸೈನ್ಯದೊಳಗಿನ ಸಂತೆ, ಸೈನ್ಯದ ಭಾಷೆ, ಫಾರಸಿ ಲಿಪಿಯಲ್ಲಿ ಬರೆಯುವ ಒಂದು ಭಾಷೆ, ಉರ್ದು ಭಾಷೆ.

**—बाजार** = सेनाकी हाट । ದಂಡಿನ ಪೇಟೆ.

**उर्फ़**– पु. उपनाम । ಉಪನಾಮ, ಮತ್ತೊಂದು ವಿಧವಾಗಿ, ಅಡ್ಡಹೆಸರು

**उर्वरा**– उपजाऊ । ಬೆಳೆಯುಳ್ಳ, ಫಲವತ್ತಾದ.

**उर्स**– पु. मुसलमान पीर आदि की मृत्युतिथि । ಮುಸಲ್ಮಾನ ಸಾಧುಗಳ ನಿರ್ವಾಣ ತಿಥಿ.

**उलझन**– स्त्री. फँसाव, बाधा, फेर, समस्या, चिंता । ಗಂಟು, ತೊಡಕು,

ವಿಘ್ನ, ಬಾಧೆ, ಒಗಟು, ಸಮಸ್ಯೆ, ಚಿಂತೆ, ವ್ಯಗ್ರತೆ.

**उलझना**–अक्रि लड़ना, झगड़ना, मोहित होना, कामसे लगना, फँसना, कठिनाई में पड़ना, टेढ़ा होना। ಜಗಳಾಡು, ಮೋಹಿತನಾಗು, ಅಸಕ್ತನಾಗು, ಕೆಲಸದಲ್ಲಿ ಮಗ್ನನಾಗು, ತೊಡಕು ಬೀಳು, ಸಿಕ್ಕಿಕೊಳ್ಳು, ಅಂಟು, ಸಂಕಟದಲ್ಲಿ ಬೀಳು, ವಕ್ರವಾಗು.

**उलझाना**–सक्रि. फँसाना, गाठ डालना, मोहित करना, टेढ़ा करना, कठिनाईमे डालना। ಸಿಕ್ಕಿಸು, ತೊಡಕು ಹಾಕು, ಗಂಟುಹಾಕು, ಮೋಹಗೊಳಿಸು, ಡೊಂಕು ಮಾಡು, ಅಡಚಣಿ ತರು, ಸಂಕಟದಲ್ಲಿ ಕೆಡಹು

**उलझाव, उलझेडा**– पु फँसाव, चिंता, झंझट। ಸಿಕ್ಕು, ತೊಡಕು, ಚಿಂತೆ, ಒಗಟು, ಸಮಸ್ಯೆ ರಗಳೆ.

**उलटना**– सक्रि. ऊपरका नीचे करना, अस्तव्यस्त करना, वमन करना, लौटना, नाश करना, बिगाडना। ಬುಡಮೇಲು ಮಾಡು, ಅಸ್ತವ್ಯಸ್ತ ಮಾಡು, ಮಗುಚು, ವಾಂತಿ ಮಾಡು, ತಿರುಗಿ ಕಳಿಸು, ನಾಶಮಾಡು, ಕೆಡಿಸು. अक्रि. ऊपरका नीचे होना, लौटना, बदल जाना। ಬುಡಮೇಲಾಗು, ಮಗುಚಿ ಬೀಳು, ತಿರುಗಿ ಬರು, ಬದಲಾಗು

**उलट-पलट, उलट-पुलट**– पु. फेरफार, अव्यवस्था, गडबडी। ಅದಲು ಬದಲು, ಗಲಿಬಿಲಿ, ಗೊಂದಲ, ತಿರುವು ಮುರುವು. वि. अस्तव्यस्त, परिवर्तित। ಅಸ್ತವ್ಯಸ್ತವಾದ, ತಿರುವು ಮುರುವಾದ, ಪರಿವರ್ತಿತ.

**उलट-फेर**– पु. अदल बदल, परिवर्तन। ಅದಲು ಬದಲು, ಪರಿವರ್ತನ, ಮಾರ್ಪಾಟ, ಪಲ್ಲಟ

**उलटा**– वि औधा, विपरीत। ತಲೆ ಕೆಳಗಾದ, ವಿರುದ್ಧವಾದ, ಹಿಂದು ಮುಂದಾದ, ಎದುರಿನ. क्रिवि विरुद्ध क्रमसे। ಕ್ರಮತಪ್ಪಿ, ತಿರುವು ಮುರುವಾಗಿ पु. चीला। ಒಂದು ಪಕ್ವಾನ್ನ

**उलटाना**– सक्रि लौटाना, उलटपलट करना। ತಿರುಗಿಸು, ತಿರುಗಿ ಕಳಿಸು, ಬುಡಮೇಲು ಮಾಡು, ಅಸ್ತವ್ಯಸ್ತ ಮಾಡು.

**उलटा-पलटी**– स्त्री परिवर्तन, झंझट। ಪರಿವರ್ತನ, ಮಾರ್ಪಾಟು, ತೊಡಕು.

**उलटाव**– पु पलटाव, घुमाव। ಬದಲಾವಣೆ, ತಿರುಗಿಸುವಿಕೆ, ಪಲ್ಲಟ.

**उलटी**– स्त्री वमन, एक कसरत। ವಮನ, ವಾಂತಿ, ಲಾಗ

**उलटे**– क्रिवि विरुद्ध ढंगसे। ವಿರುದ್ಧವಾಗಿ, ವಿಪರೀತವಾಗಿ, ವಿರುದ್ಧಕ್ರಮದಿಂದ.

**उलथना**– अक्रि उथल-पुथल होना, उलटना। ಕೆಳಗೆ ಮೇಲೆಯಾಗು,

ಮುಗುಚಿ ಬೀಳು, ತಿರುಗು. सक्रि. ऊपर नीचे करना। ಕೆಳಗೆ ಮೇಲೆ ಮಾಡು, ಮಗುಚು.

**उलथा, उल्था**– पु अनुवाद, एक प्रकार का नाच, करवट बदलना। ಅನುವಾದ, ಭಾಷಾಂತರ, ಒಂದು ತರದ ಕುಣಿತ, ಮಗ್ಗಲು ಬದಲಿಸುವದು.

**उलफत, उल्फत**– स्त्री प्रेम। ಪ್ರೇಮ, ಪ್ರೀತಿ.

**उलमना**– अक्रि लटकना, झुकना। ಜೋತಾಡು, ನೇತಾಡು, ಬಾಗು, ಬಗ್ಗು.

**उलसना**–अक्रि शोभित होना। ಶೋಭಿಸು, ಮೆರೆ.

**उलहना**– अक्रि अंकुरित होना, फूलना, उभड़ना। ಅಂಕುರಿಸು, ಅರಳು, ವೃದ್ಧಿಂಗತವಾಗು. पु उलाहना। ನಿಂದೆ, ದೂರು.

**उलारना**– सक्रि उछालना। ಎಸೆ, ಬೀಸಾಡು, ಎರಚು.

**उलाहना**–पु. शिकायत, निंदा। ನಿಂದೆ, ದೂರು.

**उलिचना, उलीचना**– सक्रि पानी निकालना, पानी फेंकना। ನೀರು ತೋಡು, ಬರಿದು ಮಾಡು, ಹೊಯ್ಯು, ಚಿಮುಕಿಸು, ಉಗ್ಗು.

**उलूक**– पु उल्लू पक्षी, इंद्र, ओखली, ज्वाला। ಗೂಗೆ, ಗೂಬೆ. ಇಂದ್ರ. ಒರಳು, ಜ್ವಾಲೆ

**उलूखल**– पु ओखली, गुग्गुल। ಒರಳು, ಕಲಬತ್ತು, ಗುಗ್ಗುಳ.

**उलूम**– पु 'इल्म' का बहुवचन। ವಿದ್ಯೆಗಳು, ಶಾಸ್ತ್ರಗಳು.

**उलेडना**– सक्रि. दे. 'उंडेलना'।

**उल्था**– पु. दे. 'उलथा'।

**उल्लंघन**– पु. अतिक्रमण, लांघना। ಅತಿಕ್ರಮಣ, ದಾಟುವಿಕೆ, ಮೀರುವದು.

**उल्लू**– पु एक पक्षी। ಗೂಗೆ, ಗೂಬೆ. पु बेवकूफ। ಮೂರ್ಖ, ದಡ್ಡ.

**—बनाना**= मूर्ख बनाना, धोखा देना। ಮೂರ್ಖನನ್ನಾಗಿ ಮಾಡು, ಮೋಸಗೊಳಿಸು, ಹುಚ್ಚನನ್ನಾಗಿ ಮಾಡು.

**उवना**– अक्रि. दे. 'उगना'।

**उष्णीश, उष्णीष**– पु. मुकुट, साफा। ಕಿರೀಟ, ಮುಕುಟ, ಪಗಡಿ, ರುಮಾಲು.

**उस**– सर्व 'वह' का विभक्ति लगाने का पूर्वरूप। 'वह' ಶಬ್ದಕ್ಕೆ ವಿಭಕ್ತಿ ಪ್ರತ್ಯಯ ಸೇರುವಾಗ ಆಗುವ ರೂಪ.

**उसकन**– पु घासपात या नारियलकी जटा आदिका मुट्ठा जिससे बर्तन मांजे जाते हैं। ಪಾತ್ರೆಗಳನ್ನು ಬೆಳಗಲು (ತಿಕ್ಕಲು) ಉಪಯೋಗಿಸುವ ತೆಂಗಿನ ಕತ್ತ, ಹುಲ್ಲು, ನಾರು, ಮುಂತಾದವುಗಳು.

**उसकना**– सक्रि दे 'उकसना'।

**उसकाना**– सक्रि दे उकसाना।

**उसनना**– सक्रि उबालना । ಕುದಿಸು, ಬೇಯಿಸು, ಮರಳಿಸು, ಅಡು.

**उसनाना**– सक्रि. 'उसनना' का प्रे. रूप.

**उसमा**– पु दे 'उबटन'।

**उसरना**– अक्रि. हटना, अलग होना, बीतना, भूल जाना । ದೂರವಾಗು. ತನ್ನ ಸ್ಥಳದಿಂದ ದೂರ ಸರಿ, ಬೇರೆಯಾಗು, ಅಗಲು, ಕಳೆ, ಮರೆತುಬಿಡು

**उसलना**– अक्रि हटना, उखड जाना, बीतना, पानीके ऊपर आना, भूल जाना । ದೂರಸರಿ, ಕಾಲು ಕಿತ್ತು, ಕಳೆ, ವ್ಯತೀತವಾಗು, ನೀರಿನಮೇಲೆ ಬರು, ತೇಲು, ಮರೆತುಬಿಡು.

**उसास**– पु लम्बी सॉस, दुखकी सॉस। ಉಚ್ಛ್ವಾಸ, ನಿಟ್ಟುಸುರು.

**उसाना**– सक्रि पछोरना। ಕೇರು,ಗಾಳಿ ಕೊಡು.

**उसारना**– सक्रि. उखाडना, भगाना, छिन्नभिन्न करना । ಕಿತ್ತು, ಕೀಳು, ಓಡಿಸು, ಅಗಲಿಸು, ಛಿನ್ನವಿಚ್ಛಿನ್ನ ಮಾಡು, ಮುಂದೆ ಹಾಕು, ದೂರ ಮಾಡು

**उसारा**– पु. दालान । ಕೈಸಾಲೆ,ಮೊಗಸಾಲೆ, ಪಡಸಾಲೆ.

**उसास**– स्त्री उच्छ्वास, श्वास । ಉಚ್ಛ್ವಾಸ, ಶ್ವಾಸ, ನಿಟ್ಟುಸಿರು.

**उसासी**– स्त्री अवकाश, आराम। ಅವಕಾಶ, ಬಿಡುವು.

**उसिसवा, उसीसा**– पु सिरहाना, तकिया। ತಲೆಯ ಕಡೆ, ತಲೆದಿಂಬು, ಲೋಡು, ತಕ್ಕೆ.

**उसूल**– पु. सिद्धात । ಸಿದ್ಧಾಂತ,ತತ್ವ, ಕಾರಣ, ಮತ.

**उस्तरा, उस्तुरा**– पु छुरा । ಕತ್ತಿ, ನಾವಲಿಗನ ಕತ್ತಿ, ರೇಝುರ್

**उस्ताद**– पु सिक्षक । ಶಿಕ್ಷಕ, ಗುರು. वि चतुर, चालाक। ಚತುರ,ಧೂರ್ತ, ನಿಪುಣ, ಜಾಣ, ರಕ್ಕ.

**उस्तादी**– स्त्री चालाकी, प्रवीणता । ಚಾತುರ್ಯ, ಧೂರ್ತತನ, ನಿಪುಣತೆ. शिक्षक का काम। ಶಿಕ್ಷಕ ವೃತ್ತಿ, ಉಪಾಧ್ಯಾಯರ ಕೆಲಸ.

**उस्ताना**– सक्रि जलाना। ಉರಿಸು, ಬೆಂಕಿಹಚ್ಚು.

**उस्तुरा**– पु दे 'उस्तरा'।

**उहदा**– पु दे. 'ओहदा'।

**उहवां, उहॉ**– क्रिवि वहॉ। ಅಲ್ಲಿ.

**उहार**– पु परदा। ಪರದೆ, ತೆರೆ

**उहै**– सर्व वही। ಅವನೇ, ಅವಳೇ, ಅದೇ, ಅಷ್ಟೇ.

# ऊ

ऊँग– स्त्री दे. 'ऊघ'। 
ऊँघ, ऊवन– स्त्री. ऊंघाई, झपकी। ತೂಕಡಿಕೆ, ಅರೆನಿದ್ದೆ.
ऊँघना– अक्रि झपकी लेना। ತೂಕಡಿಸು, ಅರೆನಿದ್ದೆಯಾಗು.
ऊँच– वि दे. 'ऊँचा'।
ऊँचा– वि ऊपर उठा हुआ, उन्नत, श्रेष्ठ। ಎತ್ತರ, ಉನ್ನತ, ಶ್ರೇಷ್ಠ, ಕುಲೀನ, ದೊಡ್ಡ.
—नीचा = खरा खोटा, हानिलाभ। ಸಟೆದಿಟ, ಹಾನಿಲಾಭ.
ऊँचाई– स्त्री उच्चता, गौरव। ಎತ್ತರ, ಶ್ರೇಷ್ಠತೆ, ಕುಲೀನತೆ, ದೊಡ್ಡತನ.
ऊँचे–क्रिवि. ऊपरको, उच्चस्वरसे। ಮೇಲೆ,ಎತ್ತರವಾಗಿ,ಕುಲೀನತೆಯಿಂದ, ಉಚ್ಚ ಸ್ವರದಿಂದ.
ऊँछना– सक्रि. बालोंमे कंघी करना। ತಲೆ ಬಿಕ್ಕು, ಬಾಚು.
ऊँट– पु उष्ट्र। ಒಂಟೆ.
ऊँटनी– स्त्री. साँडनी। ಹೆಣ್ಣು ಒಂಟೆ.
ऊँटवान– पु. ऊँट हाँकनेवाला। ಒಂಟೆ ನಡಿಸುವವ.
ऊँडा– पु तहखाना, जमीन मे गाड़ा देनेवाला धनका वर्तन। ನೆಲಮನೆ, ಹಣ ಹೂಳಿಡುವ ಪಾತ್ರೆ. वि गहरा। ಆಳವಾದ.
ऊँहूँ– अव्य. नहीं। ಬೇಡ, ಅಲ್ಲ, ಇಲ್ಲ, (ಅಸಮ್ಮತಿ ಸೂಚಕ ಉಚ್ಚಾರ).
ऊ– सर्व दे. 'वह'। अव्य भी। ಊ, ಸಹ.
ऊअना– अक्रि उदय होना। ಉದಯವಾಗು, ಮೂಡು, ಹುಟ್ಟು.
ऊआबाई– वि. अंडबंड। ವ್ಯರ್ಥ, ನಿರರ್ಥಕ, ಅಸಂಬದ್ಧ.
ऊक–स्त्री. तपन, आँच, गलती। ತಾಪ, ಕಾವು, ತಪ್ಪು, ಅಪರಾಧ.
ऊकना– सक्रि. गलती करना, चूकना, भूल जाना, जलाना। ತಪ್ಪು ಮಾಡು, ತಪ್ಪು, ಮರೆ, ಕಾಯಿಸು. अक्रि. चूकना। ತಪ್ಪು, ಗುರಿತಪ್ಪು.
ऊख– पु. गन्ना, गर्मी। ಕಬ್ಬು, ಸೆಕೆ, ತಾಪ, ಉಷ್ಣತೆ. वि. गर्म। ಉಷ್ಣ, ಬಿಸಿಯಾದ.
ऊखल– पु. ओखली। ಒರಳು.
ऊखाडी– स्त्री. ऊखका बाग। ಕಬ್ಬಿನ ಗದ್ದೆ, ಕಬ್ಬಿನ ತೋಟ.
ऊगना– अक्रि दे. 'उगना'।
ऊजड़, ऊजर– वि. दे 'उजाड'।
ऊजर, ऊजरा, ऊजा– वि उज्वल, कांतियुक्त, सफेद या गोरे रंगका। ಉಜ್ವಲ, ಕಾಂತಿಯುಕ್ತ, ಬಿಳಿಯ ಅಥವಾ ಗೌರ ವರ್ಣದ.
ऊटकनाटक– पु. वृथाका कार्य, बेकार इधर-उधर भ्रमना। ಅನುಪಯುಕ್ತ

ಕೆಲಸ, ಯದ್ವಾತದ್ವಾ ಕೆಲಸ,ಕೆಲಸ ವಿಲ್ಲದೆ ತಿರುಗಾಡುವದು.

**ऊटपटांग**–वि. बेढंगा, निरर्थक,असंबद्ध। ಅರ್ಥವಿಲ್ಲದ, ಅವ್ಯವಸ್ಥಿತ, ಯದ್ವಾತದ್ವಾ, ವಿಸಂಗತ, ನಿರರ್ಥಕ.

**ऊढा**–पु. न्यूनता, कमी, घाटा,अकाल। ಕುಂದು, ಕೊರತೆ, ನ್ಯೂನತೆ, ಹಾನಿ, ಬರ.

**ऊढना**– अक्रि अनुमान करना, चिंतन करना। ಅನುಮಾನ ಮಾಡು, ತರ್ಕಿಸು, ವಿಚಾರ ಮಾಡು.

**ऊत**– वि. पुत्रहीन, मूर्ख । ಮಕ್ಕಳಿಲ್ಲದ, ಪುತ್ರಹೀನ, ದಡ್ಡ, ಮಂಕ.

**ऊदबत्ती**– स्त्री. धूपबत्ती। ಊದಬತ್ತಿ, ಅಗರುಬತ್ತಿ, ಊದಿನಕಡ್ಡಿ.

**ऊदबिलाव**– पु. नेवले के आकार का एक जंतु । ನೀರುಬೆಕ್ಕು.

**ऊदा**– वि. बैंगनी । ಬದನೇಕಾಯಿ ಬಣ್ಣದ, ನೀರಲ ವರ್ಣದ

**ऊधम**–पु उपद्रव। ಉಪದ್ರವ, ಗಲಭೆ, ಗದ್ದಲ, ಬಂಡಾಯ, ಧಾಂಧಲೆ, ಹಾವಳಿ.

**ऊधमी**– वि उपद्रवी। ಗಲಭೆಖೋರ, ಹಾವಳಿಗಾರ, ಉಪದ್ರವಿ.

**ऊधव, ऊधो, ऊधौ**– पु उद्धव जो कृष्ण के सखा थे। ಕೃಷ್ಣನ ಗೆಳೆಯ ಉದ್ಧವ.

**ऊन**–वि. न्यून, तुच्छ। ಕಡಿಮೆಯಾದ, ಕೊರತೆಯುಳ್ಳ, ತುಚ್ಛ. पु. भेड या बकरी का रोम, दुःख। ಉಣ್ಣೆ, ದುಃಖ, ಗ್ಲಾನಿ.

**ऊना**– वि. न्यून, तुच्छ । ಕಡಿಮೆ, ಅಲ್ಪ, ನ್ಯೂನ, ತುಚ್ಛ. पु. दु.ख ದುಃಖ, ವ್ಯಸನ.

**ऊनी**– वि. ऊनका बना। ಉಣ್ಣೆಯ, ಉಣ್ಣೆಯಿಂದಾದ. स्त्री दुःख थोडी। ದುಃಖ, ಗ್ಲಾನಿ, ಕಡಿಮೆ, ಕೊರತೆ.

**ऊपजना**– अक्रि. दे 'उपजना'।

**ऊपर**– क्रिवि. ऊँची जगहपर, अधिक पहले, अतिरिक्त, बाहरी तौरपर। ಮೇಲೆ, ಅಧಿಕ, ಹೆಚ್ಚು, ಮೊದಲು, ಅತಿರಿಕ್ತ,ಹೊರ್ರಾಗಿ, ಹೊರಗೆ, ಪ್ರಕಟವಾಗಿ.

**ऊपरी**– वि ऊपरका, बाहरी, दिखाऊ। ಮೇಲಿನ, ಹೊರಗಿನ,ತೋರಿಕೆಯ.

**ऊब**– पु. व्यग्रता, अरुचि, उमंग। ವ್ಯಾಕುಲತೆ, ಬೇಸರ, ಜಿಗುಪ್ಸೆ, ಉತ್ಸಾಹ.

**ऊबट**– वि. ऊंचा-नीचा। ಹುರಬುರಕ, ತಗ್ಗುದಿನ್ನೆಗಳುಳ್ಳ, ಕರಡು, ತರಕಲು. पु. ऊबड-खावड मार्ग। ತಗ್ಗುದಿನ್ನೆಗಳುಳ್ಳ ಮಾರ್ಗ, ಕಠಿಣ ಮಾರ್ಗ, ಕರಡುದಾರಿ.

**ऊबड-खाबड़**– वि. दे. 'ऊबट'।

**ऊबना**– अक्रि. उकताना, घबड़ाना। ಬೇಸರಾಗು, ವ್ಯಾಕುಲಗೊಳ್ಳು, ಜುಗುಪ್ಸೆಯಾಗು, ಹೇವರಿಸು.

**ऊभना**– अक्रि. खड़ा होना, उठना। ಎದ್ದು ನಿಲ್ಲು, ಏಳು. अक्रि दे.

‘ ऊबना ’।

ऊमक– स्त्री. झोंक, वेग। ಸೆಳೆತ,ವೇಗ.

ऊमना– अक्रि. दे. ‘ उमड़ना ’।

ऊरध, ऊर्ध– वि. ऊपरका, ऊपरकी ओर, खड़ा। ಮೇಲಿನ, ಊರ್ಧ್ವ, ಎದ್ದುನಿಂತ. क्रिवि. ऊपर। ಮೇಲೆ.

ऊर्जित– वि. ओजपूर्ण, तीव्र।ಊರ್ಜಿತ, ವಿಕಸಿತ, ಸಮೃದ್ಧ, ಉನ್ನತಿಗೇರಿದ, ತೀವ್ರ.

ऊलजलूल– वि. उटपटांग, अशिष्ट। ಯದ್ವಾತದ್ವಾ, ಕ್ರಮವಿಲ್ಲದ, ಅ-ಶಿಷ್ಟ, ಹುಂಬ, ಮೂರ್ಖ, ಪೆದ್ದ.

ऊसर– पु. अनुपजाऊ जमीन। ಬಂಜೆ ಭೂಮಿ, ಬರಡು ಭೂಮಿ. वि अनुपजाऊ। ಬಂಜೆ, ಪಡ, ಬರಡು.

ऊहापोह– पु. तर्कवितर्क, सोचविचार। ತರ್ಕವಿತರ್ಕ, ಊಹಾಪೋಹ.

---

# ऋ

ऋक्ष, ऋच्छ– पु. भालू, तारा। ಕರಡಿ, ನಕ್ಷತ್ರ, ಚಿಕ್ಕೆ.

ऋच्छरा– स्त्री. वेश्या। ವೇಶ್ಯೆ.

ऋतुमती–वि. रजस्वला स्त्री। ರಜಸ್ವಲೆ.

ऋतुराज– पु. वसंतकाल। ವಸಂತ-ಕಾಲ.

ऋद्धि– स्त्री. वैभव, समृद्धि। ವೈಭವ, ಸಂಪತ್ತು, ಸಮೃದ್ಧಿ.

ऋण, ऋन– पु. कर्ज, देना। ಸಾಲ, ಋಣ.

ऋणी, ऋनिया, ऋनी– वि. कर्जदार, देनदार। ಸಾಲಗಾರ, ಋಣಿಯಾ-ಗಿರುವವ.

ऋषभ– पु. बैल। ಎತ್ತು, ಬಸವ.

ऋष्टि– स्त्री. तलवार, शोभा। ಕತ್ತಿ, ಭಲ್ಲಿ, ಶೋಭೆ.

---

# ए

एचपेंच– पु. उलझन, टेढ़ी चाल। ತೊ-ಡಕು, ಸುತ್ತು, ಪೇಚಾಟ, ಕುಟಿ-ಲತೆ, ವಕ್ರತೆ.

एंडाबेंडा– वि. उलटपुलट, अंडबंड। ತಿರುವುಮುರುವು, ಯದ್ವಾತದ್ವಾ, ಅಸಂಬದ್ಧ.

एंडी– स्त्री. एकप्रकार का रेशमका कीड़ा, रेशम, एड़ी। ಒಂದು ಪ್ರಕಾ ರದ ರೇಷ್ಮೆ ಹುಳ,ರೇಷ್ಮೆ,ಹಿಮ್ಮಡಿ.

एंडुआ– पु. गेंडुरी। ಸಿಂಬಿ, ಸುರುಳಿ.

**एकंगा**– वि. एक तरफका । ಒಂದೇ ಕಡೆಯ, ಒಂದೇ ಪಕ್ಷದ.

**एक**– वि. दो का आधा, अकेला,अद्वितीय, समान । ಒಂದು, ಒಂಟಿ, ಅದ್ವಿತೀಯ, ಸಾಟಿಯಿಲ್ಲದ, ಹೋಲುವ, ಸರಿಯಾದ

**एकटक**– क्रिवि अनिमेष । ನೆಟ್ಟ ದೃಷ್ಟಿಯಿಂದ, ದಿಟ್ಟಿಸಿ, ರೆಪ್ಪೆ ಹೊಡೆಯದೆ, ದುರುದುರನೆ.

**एकटकी**– स्त्री 'स्थिर दृष्टिसे देखना । ದಿಟ್ಟಿಸಿ ನೋಡುವಿಕೆ, ಎವೆ ಹೊಡೆಯದೆ ನೋಡುವಿಕೆ

**एकट्ठा**– वि. दे. 'इकट्ठा' ।

**एकड़**– पु पृथ्वीकी ३/५वीघाकी नाप । ಎಕರೆ, ( ಭೂಮಿಯ ಅಳತೆ ) ೪೦ ಗುಂಠೆ.

**एकत**– क्रिवि एकत्र, एक स्थानपर । ಒಂದೇ ಕಡೆಯಲ್ಲಿ, ಒಂದೇ ಸ್ಥಳದಲ್ಲಿ.

**एकतरफ़ा**– वि एक पक्षीय । ಒಂದೇ ಪಕ್ಷದ, ಪಕ್ಷಪಾತಯುಕ್ತ, ಒಂದು ಮಗ್ಗುಲಿನ.

**एकता**– स्त्री मेल, समानता । ಐಕ್ಯ, ಮೈತ್ರಿ, ಹೋಲಿಕೆ, ಸಮಾನತೆ.

**एकतारा**– पु एक तारका सितारा । ಒಂದೇ ತಂತಿಯ ತಂಬೂರಿ.

**एकतालीस**–वि. ४१ । ನಾಲ್ವತ್ತೊಂದು.

**एकतीस**– वि. ३१ । ಮೂವತ್ತೊಂದು.

**एकत्र**–वि. एक स्थानमें, मिलजुलकर । ಒಂದೆಡೆ, ಕೂಡಿ, ಒಂದಾಗಿ, ಒಟ್ಟಾಗಿ.

**एकन्नी**– स्त्री अेक आना । ಒಂದಾಣೆ ನಾಣ್ಯ.

**एक ब-एक,एकबारगी**– क्रिवि. एक साथ, अचानक । ಒಂದೇಸಾರಿ, ಅಕಸ್ಮಾತ್ತಾಗಿ, ತಟಕ್ಕನೆ, ಒಮ್ಮಿಂದೊಮ್ಮೆ

**एकबाल**–पु भाग्य, प्रताप, स्वीकृति । ಭಾಗ್ಯ, ದೈವ, ಪ್ರತಾಪ, ಕೀರ್ತಿ, ಸ್ವೀಕೃತಿ, ಅಂಗೀಕಾರ.

**एकरंग**– वि. समान, साफ दिलका । ಸಮಾನ, ಒಂದೇತರದ, ಮೊದಲಿನಿಂದ ಕೊನೆಯ ವರೆಗೆ ಒಂದೇ ತರದ, ನಿಷ್ಕಪಟ.

**एकरार**– पु. वचन, प्रतिज्ञा, स्वीकृति । ವಚನ, ಪ್ರತಿಜ್ಞೆ, ಕರಾರು, ಸ್ವೀಕೃತಿ, ಒಪ್ಪಿಗೆ.

**एकल, एकला**– वि अकेला, बेजोड़ । ಒಬ್ಬನೇ, ಒಂಟಿಗ, ಅಸಮಾನ.

**एकलौता**– वि दे. 'इकलौता' ।

**एकवाँज**– स्त्री. जिस स्त्रीको एक ही संतान हुई हो । ಒಂದೇ ಮಗುವಿನ ತಾಯಿ.

**एकवेणी**– वि एक वेणीवाली, विधवा । ವಿರಹಿಣಿ, ವಿಧವೆ.

**एकसठ**–वि. ६१ । ಅರವತ್ತೊಂದು.

**एकसर**– वि. अकेला, एकहरा, तमाम । ಒಂಟಿಗ, ಒಂದೇ ಮಡಿಕೆಯ, ಸಂಪೂರ್ಣ.

**एकसाँ**– वि समान । ಸಮಾನ,ಒಂದೇ ತರದ.

एकहत्तर– वि. ७१। ಎಪ್ಪತ್ತೊಂದು.
एकहरा– वि. दे. 'इकहरा'।
एका–पु. एकता, मेल। ಐಕ್ಯ, ಒಕ್ಕಟ್ಟು.
एकाई– स्त्री. एकत्व, एकका भाव। ಏಕತ್ವ, ಅದ್ವೈತ, ಒಂದು.
एकाएक– क्रिवि. अचानक, सहसा। ಒಮ್ಮಿಂದೊಮ್ಮೆ, ಅನಿರೀಕ್ಷಿತವಾಗಿ, ಅಕಸ್ಮಾತ್ತಾಗಿ, ತಟಕ್ಕನೆ.
एकाएकी– क्रिवि. दे. 'अकाएक'। वि. अकेला। ಒಂಟಿ, ಒಬ್ಬನೇ.
एकाकार– वि. एक ही आकृतिका। ಒಂದೇತರದ, ಒಂದೇ ಆಕೃತಿಯ.
एकाकी– वि. अकेला। ಒಂಟಿ, ಏಕಾಕಿಯಾದ.
एकाध– वि. थोड़ासा। ಸ್ವಲ್ಪ, ಕೆಲವು.
एकोतरसौ– वि. एक सौ एक। ನೂರಾಒಂದು.
एकौझा– वि. अकेला। ಒಂಟಿಗ, ಒಬ್ಬನೇ.
एक्का– दे. 'इक्का'।
—दुक्का=दे. 'इक्कादुक्का'।
एक्कावान–पु. एक्का हाँकनेवाला। ಎಕ್ಕಾ ಗಾಡಿ ಹೊಡೆಯುವವ.
एक्की– स्त्री. एक बैल या घोडेकी गाडी, तागका एक बूटिवाला पत्ता। ಒಂಟಿ ತ್ತಿನ ಅಥವಾ ಒಂದೇ ಕುದುರೆಯ ಗಾಡಿ, ಎಕ್ಕ (ಇಸ್ಪೀಟಿನಲ್ಲಿ).
एक्यानवे–वि. ९१। ತೊಂಭತ್ತೊಂದು.
एक्यावन–वि. ५१। ಐವತ್ತೊಂದು.
एक्यासी– वि. ८१। ಎಂಭತ್ತೊಂದು

एड, एडी– स्त्री. टखनेके नीचेवाला पैरका पिछला भाग। ಹಿಮ್ಮಡಿ.
एडी से चोटी तक– पूरा पूरा। ಪಾದದಿಂದ ತಲೆಯ ವರೆಗೆ, ಪೂರ್ಣ, ಆಪಾದ ಮಸ್ತಕ.
एढाटेढा– वि. वक्र। ವಕ್ರ, ಅಂಕಡೊಂಕಾದ.
एतबार– पु. विश्वास। ನಂಬಿಕೆ, ವಿಶ್ವಾಸ, ವತ್ತು.
एतमाद– पु. विश्वास। ನಂಬಿಕೆ, ನೆಚ್ಚಿಕೆ, ಭರವಸೆ.
एतराज़–पु. विरोध, आपत्ति। ವಿರೋಧ, ಆಪತ್ತು, ಅಡ್ಡಿ, ಶಂಕೆ, ಆಕ್ಷೇಪಣೆ.
एतवार– पु. रविवार। ರವಿವಾರ, ಭಾನುವಾರ.
एता– वि. इतना। ಇಷ್ಟು.
एतिक, एती– वि. स्त्री. इतनी। ಇಷ್ಟು.
एरंड– पु. रेंड। ಔಡಲಗಿಡ, ಹರಳುಗಿಡ.
एलची– पु. राजदूत। ರಾಯಭಾರಿ, ರಾಜದೂತ.
एला– स्त्री. इलायची। ಸಣ್ಣ ಯಾಲಕ್ಕಿ.
एलान– पु. दे 'ऐलान'।
एवं– अव्य. इसी प्रकार, और। ಹಾಗೆಯೇ, ಅಂತೆಯೇ, ಮತ್ತು.
एवज़– पु. वदलेमें काम करनेवाला, वदला, प्रतिकार। ಬದಲಿಯವ, ಪ್ರತಿನಿಧಿ, ಸೇಡು, ಪ್ರತಿಕಾರ.
एवज़ी– पु. वदलेमें काम करनेवाला।

ಬದಲಿಯುವ, ಪ್ರತಿನಿಧಿ, ಸ್ಥಾನಾಪನ್ನ, ಹಂಗಾಮಿ.

**एषणा**– स्त्री. इच्छा, खोज । ಇಚ್ಛೆ, ಅನ್ವೇಷಣೆ.

**एह**– सर्व. दे. 'यह'।

**एहतियात**– स्त्री. सावधानी, खबरदारी। ಎಚ್ಚರ, ಜಾಗರೂಕತೆ, ಸಂರಕ್ಷಣೆ, ಪಾಪಭೀರುತನ.

**एहसान**–स्त्री. उपकार, कृतज्ञता । ಕೃತಜ್ಞತೆ,ಉಪಕಾರ,ದಾಕ್ಷಿಣ್ಯ,ಹಂಗು.

**—फरामोश** = कृतघ्न । ಕೃತಘ್ನ, ಉಪಕಾರ ಸ್ಮರಿಸದವ.

**—मंद** = कृतज्ञ । ಕೃತಜ್ಞ, ಉಪಕಾರ ಸ್ಮರಿಸುವವ, ಆಭಾರಿ.

**एहसास**– पु हाथसे छूना, अनुभव करना । ಸ್ಪರ್ಶಿಸುವಿಕೆ, ಅನುಭವ ತೆಗೆದುಕೊಳ್ಳುವಿಕೆ.

**एहि**– सर्व दे 'यही'।

---

# ऐ

**ऐंचना**– सक्रि. खींचना, तानना। ಎಳೆ, ಸೆಳೆ, ಜಗ್ಗು, ಕಸಿದುಕೊಳ್ಳು.

**ऐंचाताना**– वि. फिरी हुयी ऑखवाला। ಮೆಳ್ಳೆಗಣ್ಣಿನವ, ಮಾಲುಗಣ್ಣಿನವ

**ऐंचातानी**– स्त्री. खींचा-खीची । ಎಳೆದಾಟ, ಜಗ್ಗಾಟ.

**ऐंछना**– सक्रि झाडना, बाल ऊंछना । ಸ್ವಚ್ಛಮಾಡು, ಗುಡಿಸು, ಹಿಕ್ಕು, (ಕೂದಲು) ಬಾಚು.

**ऐंठ**– स्त्री. अकड, मरोड़, घमंड, ईर्षा, द्वेष । ಕೊಂಕು, ಗರ್ವ, ತಿರುಪು, ಸೊಕ್ಕು, ಈರ್ಷೆ, ಸೆಡವು, ವಕ್ರತೆ, ದ್ವೇಷ, ವೈರತ್ವ.

**ऐंठन**– स्त्री घुमाव, लपेट, मरोड, गर्व। ಕೊಂಕು, ವಕ್ರ, ತಿರುಪು, ಸೆಡಕು, ಗರ್ವ, ಮುರುಕ, ಬಿಂಕು, ಒಯ್ಯಾರ, ಹಿಂಡುವಿಕೆ.

**ऐंठना**– सक्रि मरोडना, छलसे लेना । ತಿರುಗಿಸು, ಹಿಂಡು,ಕೊಂಕು ಮಾಡು, ಸಿಕ್ಕಿಸು, ಮೋಸದಿಂದ ತೆಗೆದುಕೊಳ್ಳು अक्रि खिचना अकडना, इतराना । ಎಳೆ, ಹರಿ, ಕೆರೆ, ಒಯ್ಯಾರ ಮಾಡು, ಗರ್ವ ಮಾಡು, ಸೆಡವಿನಿಂದ ನಡೆ, ನೆಟಿ.

**ऐंठवाना**– सक्रि ऐंठने का काम दूसरेसे करवाना । ಹಿಂಡಿಸು, ಕೊಂಕು ಮಾಡಿಸು, ಸಿಕ್ಕಿಸು

**ऐंठा**– पु. रस्सी ऐंठनेका एक यंत्र ।

ದಾರ ಸುತ್ತುವ ರಾಟೆ. वि. नीच, वक्र । ನೀಚ, ದುಷ್ಟ, ವಕ್ರ, ಅಂಕ ಡೊಂಕಾದ. —हुआ = लपेटा हुआ । ಸುತ್ತಿದ.

ऐंठू— वि. अभिमानी । ಸಿಡುಕಿನವ, ಅಭಿಮಾನಿ, ಸೊಕ್ಕಿನ.

ऐड़— पु. अकड़, अभिमान, पानीका भँवर । ಗರ್ವ, ಅಭಿಮಾನ, ಕೊಬ್ಬು, ಮುರುಕ, ನೀರಿನ ಸುಳಿ, ತಿರುಗಣಿ.

ऐंडदार— वि. घमंडी, कुटिल । ಗರ್ವಿಷ್ಠ, ಸೊಕ್ಕಿನ, ಕುಟಿಲ.

ऐड़ना— अक्रि. अंगड़ाना, घमंड करना, सूखकर कड़ा होना । ಹೊರಳು, ಮೈಮುರಿ, ನೋವುಂಟಾಗು, ಗರ್ವಮಾಡು, ಸೆಟೆ, ಒಣಗಿ ಗಟ್ಟಿಯಾಗು. सक्रि. घुमाना, तोड़ना । ತಿರುಗಿಸು, ತಿರಿಚು, ಮುರಿ.

ऐंडबैंड—वि. तिरछा, बाँका, ऐंठा हुआ । ಅಂಕಡೊಂಕ, ಡೊಂಕುಡೊಂಕಾದ, ವಕ್ರ, ಸೆಟೆದ.

ऐंडा— वि. टेढ़ा, घुमौआ । ವಕ್ರ, ತಿರುಗಿದ, ಅಂಕಡೊಂಕ, ಸಿಡುಕು ಮೋರೆಯ.

ऐन— वि. ठीक, उपयुक्त । ಸರಿಯಾದ, ನಿಜವಾದ, ಯೋಗ್ಯ, ಉಪಯುಕ್ತ. स्त्री. आँख । ಕಣ್ಣು. पु घर, कस्तूरी मृग । ಮನೆ, ಕಸ್ತೂರಿ-ಮೃಗ.

ऐनक— स्त्री आँखका चश्मा । ಕನ್ನಡಕ, ಸುಲೋಚನ.

ऐना— पु दे. 'आइना' ।

ऐपन— पु. हल्दीके साथ पिसा हुआ गीला चावल । ಮಂಗಲಾಕ್ಷತೆ, ಮಂತ್ರಾಕ್ಷತೆ.

ऐब— पु. दोष, बुराई । ಕುಂದು, ದೋಷ, ದುರ್ಗುಣ, ಐಬು.

ऐबजोई— स्त्री. ऐब ढूँढ़ना । ದೋಷಾನ್ವೇಷಣ, ದೋಷ ಹುಡುಕುವಿಕೆ

ऐबपोश— पु. दोषोंको छिपानेवाला । ದೋಷ ಮುಚ್ಚಿಡುವವ.

ऐबी— वि. दोषयुक्त, बुरा, काना । ದೋಷವುಳ್ಳ, ಕೆಟ್ಟ, ದುಷ್ಟ, ಮೆಳ್ಳೆಗಣ್ಣಿನವ.

ऐयाम— पु. समय, ज़माना । ಸಮಯ, ವೇಳೆ, ಕಾಲ, ಋತು.

ऐयार— पु. धूर्त, चालाक । ಧೂರ್ತ, ರಕ್ಕ, ಮೋಸಗಾರ, ತಂತ್ರಗಾರ.

ऐयारी— स्त्री छल, कपट । ಕಪಟ, ತಂತ್ರ, ಮೋಸ.

ऐयाश— वि. विषयासक्त । ವಿಲಾಸಿ, ಲಂಪಟ, ವಿಷಯಾಸಕ್ತ.

ऐयाशी— विषयासक्ति । ವಿಲಾಸ ಪ್ರಿಯತೆ, ವಿಷಯಾಸಕ್ತಿ.

ऐरागैरा— वि. अजनबी, तुच्छ । ಅಪರಿಚಿತ, ಹೊಸ, ತುಚ್ಛ, ಕ್ಷುದ್ರ.

ऐरापति—पु. ऐरावत हाथी । ಐರಾವತ

ऐल— पु. बाढ़, प्रचुरता । ಪ್ರವಾಹ, ಭರತಿ, ನೆರೆ, ಬಹಳ, ಹೆಚ್ಚಳ, ಪ್ರಚುರ.

**ऐलान**– पु. घोषणा,मुनादी। ಘೋಷ-ಣೆ, ಪ್ರಕಟಣೆ, ಆದೇಶ, ಡಂಗುರ.

**ऐश, ऐस**– पु. आराम, भोगविलास। ನೆಮ್ಮದಿ, ಸುಖ, ವಿಲಾಸ.

**ऐसा**– वि. इस तरहका। ಇಂಥ, ಈ ಪ್ರಕಾರದ.

**ऐसे**– क्रिवि. इस तरह। ಹೀಗೆ, ಈ ಪ್ರಕಾರವಾಗಿ.

**ऐहिक**– वि सासारिक। ಸಾಂಸಾರಿಕ, ಇಹಲೌಕಿಕ.

# ओ

**ओंइछना**– सक्रि वारना, न्योछवार करना। ಬಲಿ ಕೊಡು, ಇಳಿ ತೆಗೆ, ನಿವಾಳಿಸು.

**ओकना**– अक्रि. कै करना, ऊब जाना। ಕಾರು, ವಾಂತಿ ಮಾಡು, ಬೇಸ-ರಾಗು.

**ओंगना**– अक्रि. गाड़ी की धुरी में तेल देना। ಹರೆ ಹಾಕು, ಗಾಡಿಯ ಗಾಲಿಗೆ ಎಣ್ಣೆ ಹಾಕು.

**ओंठ**– पु. होंठ, लब। ತುಟಿ, ಅಧರ.

**ओंडा**– वि. गहरा। ಆಳವಾದ. पु गड्ढा। ತಗ್ಗು, ಗುಣಿ.

**ओक**– पु. घर, आश्रम, अंजली, नक्षत्र-पुंज। ಮನೆ, ಸ್ಥಾನ, ಆಶ್ರಮ, ಅಂಜಲಿ,ಬೊಗಸೆ,ನಕ್ಷತ್ರಗಳ ಗುಂ-ಪು. स्त्री. कै। ವಾಕರಿಕೆ, ವಮನ

**ओकना**– अक्रि कै करना। ವಮನ ವಾಗು, ವಾಕರಿಸು.

**ओकाई**– स्त्री कै, वमन। ವಮನ, ವಾಂತಿ, ವಾಕರಿಕೆ.

**ओखरी,ओखली**– स्त्री उखली। ಒರಳು.

**ओखा**– पु. बहाना। ನೆವ, ನೆಪ, ಢೋಂಗ. वि खोटा, कठिन, टेढा, झीना। ಸುಳ್ಳು, ಮೋಸದ,ಕಠಿಣ, ವಕ್ರ, ವಿರಳ, ತೆಳುವಾದ.

**ओग**– पु चंदा, महसूल। ಚಂದಾ, ವರ್ಗಣಿ, ವಂತಿಕೆ, ಕರ.

**ओगरा**– पु खिचडी। ಖಿಚಡಿ, ಗಂಜಿ.

**ओघ**– पु राशि, समूह, प्रवाह। ರಾಶಿ, ಸಮೂಹ, ಪ್ರವಾಹ, ಸೆಳೆತ.

**ओछना**– सक्रि दे ‘ऊछना’।

**ओछा**– वि. क्षुद्र, नीच, छोटा। ಕ್ಷುದ್ರ, ನೀಚ, ಕೀಳು, ಹಗುರು, ಹೀನ.

**ओछाई**– स्त्री. **ओछापन**–। पु नीचता, क्षुद्रता। ಕ್ಷುದ್ರತೆ, ನೀಚತನ, ಹೀ-ನತನ.

**ओज**– पु तेज, प्रताप। ತೇಜ, ಬೆಳ-ಕು, ಬಲ, ಪ್ರತಾಪ.

ओझ– पु. पेट, आत । ಹೊಟ್ಟೆ, ಕರಳು
ओझर– पु. ओझरी– स्त्री. पेट । ಹೊಟ್ಟೆ.
ओझल– पु ओट, आड । ಮರೆ, ಆ-ಸರ, ಚಿಣ್ಣೂರೆ.
ओझा– पु ब्राह्मणोंकी एक जाति, भूत-प्रेत झाड़नेवाला । ಬ್ರಾಹ್ಮಣರ ಒಂದು ಜಾತಿ, ಭೂತಪ್ರೇತಗಳನ್ನು ಇಳಿಸುವವ, ಜಾದೂಗಾರ.
ओट– स्त्री. आड़, रोक, परछाई, घूंघट, सहारा । ಮರೆ, ಅಡ್ಡಿ, ನೆರಳು, ತೆರೆ, ಪರದೆ, ಆಶ್ರಯ.
ओटना– अक्रि. रुई और विनौले को पृथक् करना, अपने ऊपर लेना, अपनी ही बात कहते रहना। ಹತ್ತಿ ಅರೆ, ಹತ್ತಿಯಿಂದ ಹತ್ತಿಕಾಳು ಬೇರ್ಪಡಿಸು, ತನ್ನಮೇಲೆ ತೆಗೆದು ಕೊಳ್ಳು, ತನ್ನದನ್ನೇ ಹೇಳುತ್ತಿರು.
ओटनी, ओटी– स्त्री. कपाससे विनौला अलग करनेकी चरखी । ಹತ್ತಿ ಅರೆಯುವ ಯಂತ್ರ, ಹತ್ತಿ ಬೀಜ ಬಿಡಿಸುವ ಯಂತ್ರ, ಗಿರಣಿ.
ओठ– पु. दे ओंठ ।
ओडन– पु. ढाल । ಗುರಾಣಿ.
ओडना– सक्रि. रोकना, आड करना, सहना । ತಡೆ, ಮರೆ ಮಾಡು, ಸಹಿಸು
ओढ़न– स्त्री. ओढनेका वस्त्र । ಹೊದಿಕೆ, ಹೊದ್ದುಕೊಳ್ಳುವ ವಸ್ತ್ರ.
ओढना– सक्रि वस्त्रसे शरीर ढकना, अपने ऊपर लेना । ಉಡು, ತೊಡು, ಹೊದ್ದುಕೊಳ್ಳು, ಜವಾಬ್ದಾರಿ ವಹಿಸು, ಹೊಣೆ ಹೊರು. पु. ओढनेका कपडा । ಹೊದ್ದುಕೊಳ್ಳುವ ವಸ್ತ್ರ.
ओढनी– स्त्री. स्त्रियों के ओढनेका वस्त्र । ಆವರಣ, ಮೇಲು ಸೆರಗು.
ओढर– पु. वहाना । ನೆವ, ಸೋಗು.
ओढाना– सक्रि. दूसरे के शरीर को वस्त्रसे ढांपना । ಹೊದಿಸು, ಮುಚ್ಚು.
ओतप्रोत– वि. गुथा हुआ, भली भाँति मिलाजुला, अच्छी तरह भरा हुआ। ಹಾಸು ಹೊಕ್ಕಾದ, ಚೆನ್ನಾಗಿ ಕೂಡಿದ, ಒಂದೇ ಜೀವವಾದ, ಒತ್ತಿ ತುಂಬದ, ಘನಿಷ್ಟ.
ओद– वि. तर, भीगा हुआ । ತೊಯ್ದು, ಒದ್ದೆಯಾದ. पु. गीलापन । ಆರ್ದ್ರತೆ, ತೇವ, ಹಸಿ.
ओदरना– अक्रि. फटना, गिर पड़ना । ಹರಿ, ಸೀಳು, ನಷ್ಟವಾಗು. ಕೆಳಗೆ ಬೀಳು
ओदा– वि. गीला । ತೊಯ್ದ, ಆರ್ದ್ರ, ಒದ್ದೆಯಾದ
ओदारना– सक्रि. विदीर्ण करना, फाड डालना । ಹರಿ, ಶೀಳು, ನಾಶಮಾಡು, ಚದುರಿಸು.
ओनचन– स्त्री दे. 'उंचन'।
ओनचना– सक्रि दे 'उंचना'।
ओनवना– सक्रि झुकना, घिर आना । ಬಗ್ಗು, ಬಾಗು, ತೂಗು, ನಮ್ರವಾಗು, ಶರಣು ಹೋಗು, ಮುತ್ತು, ಕವಿ.

**ओप**– स्त्री. कांति, चमक, शोभा। ಕಾಂತಿ, ಹೊಳಪು, ಮಿರುಗು, ಶೋಭೆ, 'ಪಾಲಿಷ್'.

**ओपची**–पु कवचधारी सैनिक। ಕವಚ ಧಾರಿ ಸೈನಿಕ.

**ओपना**–सक्रि. चमकाना, साफ करना। ಸ್ವಚ್ಛ ಮಾಡು, ಬೆಳಗು, ಮಿರುಗಿಸು. अक्रि चमकना। ಹೊಳೆ, ಶೋಭಿಸು, ಮಿರುಗು.

**ओफ़**– अव्य आश्चर्य या दुखादि सूचक शब्द। ದುಃಖ ಆಶ್ಚರ್ಯಾದಿ ಸೂಚಕ ಶಬ್ದ.

**ओबरी**– स्त्री. तंग कोठरी। ಸಣ್ಣ-ಕೋಣೆ, ಇಕ್ಕಟ್ಟಾದ ಕೋಣೆ.

**ओर**– स्त्री. तरफ, पक्ष। ಮಗ್ಗಲು, ಪಕ್ಷ, ಕಡೆ. पु छोर, किनारा। ದಂಡೆ, ತುದಿ, ಕೊನೆ, ಸೀಮೆ क्रिवि तरफ। ಕಡೆಗೆ.

**ओरसे छोर तक**= आदिसे अंत तक। ಮೊದಲಿನಿಂದ ಕೊನೆಯ ವರೆಗೆ.

**ओरहा**– पु होरहा। ಕಡಲೆ ಗಿಡ.

**ओराना**– अक्रि. खत्म हो जाना, चुक जाना। ಮುಗಿ, ತೀರು, ಕೊನೆಗಾಣು.

**ओरिया, ओरी**– स्त्री. दे. 'ओलती'।

**ओलंदेज, ओलंदेजी**– वि हालैण्ड देशका। ಹಾಲಂಡ ದೇಶದವ.

**ओल**– पु. सूरण। ಸೂರಣ ಗಡ್ಡೆ, ಸ್ವರ್ಣ ಗಡ್ಡೆ. स्त्री गोद, आड, रक्षा, शरण, बहाना। ಟೊಂಕ, ಸೊಂಟ, ಮಡಿಲು, ಮರೆ, ಆಶ್ರಯ, ನೆವ, ನೆಪ, ಸೋಗು. वि गीला। ಒದ್ದೆಯಾದ, ಆರ್ದ್ರ, ತೊಯ್ದ.

**ओलती**–स्त्री छप्परका वह भाग जहाँसे पानी नीचे गिरता है। ಸೂರು.

**ओला**– पु वर्षा के साथ गिरा हुआ हिमका टुकडा, बिनौला, मिश्रीसे बना लड्डू, परदा, भेद। ಆಣೆಕಲ್ಲು, ಹತ್ತಿಕಾಳು, ಕಲ್ಲುಸಕ್ಕರೆಯಿಂದ ಮಾಡಿದ ಉಂಡೆ, ಪರದೆ, ಗುಟ್ಟು.

**ओलिक**–पु. पर्दा, ओड। ಪರದೆ,ಮರೆ.

**ओलियाना**– सक्रि आँचलमें भरना, पूरा पूरा भरना, मुँह तक भरना। ಉಡಿಯಲ್ಲಿ ತುಂಬು, ಪೂರ್ಣವಾಗಿ ತುಂಬು, ಅಂಚುಮಟ ತುಂಬು, ತುರುಕು, ಕಂಠದ ವರೆಗೆ ತುಂಬು.

**ओली**– स्त्री गोद, अंचल, झोली। ಮಡಿಲು, ತೊಡೆ, ಸೊಂಟ,ನೆರಗು, ಸೋಟು ಪಟ್ಟಿಗಳ ಅಂಚು, ಕೈಚೀಲು, ಜೋಳಿಗೆ.

**—ओडना** = अंचल पसारकर कुछ याचना करना। ನೆರಗೊಡ್ಡಿ ಬೇಡು.

**ओस**– स्त्री. शबनम। ಮಂಜು, ಇಬ್ಬನಿ.

**ओसर, ओसरिया**– स्त्री. गर्भधारण करने योग्य गाय या भैस। ಮಣಕ, ಕಡಸು.

**ओसाई**– स्त्री ओसाने की क्रिया उसकी

मज़दूरी। ತೂರುವಿಕೆ, ಕೇರು-ವಿಕೆ, ತೂರುವ ಕೂಲಿ.

ओसाना– सक्रि अनाज का भूसा उड़ाना। ಗಾಳಿ ಕೊಡು, ತೂರು, ಕೇರು

ओसार–पु. विस्तार। ಅಗಲ,ವಿಸ್ತಾರ

ओसारा– पु बरामदा, सायवान। ಕೈಸಾಲೆ, ಚಪ್ಪರ, 'ವ್ಹರಾಂಡ'.

ओह– अव्य. दुःख या विस्मय सूचक शब्द। ದುಃಖ ಅಥವಾ ಆಶ್ಚರ್ಯ ಸೂಚಕ ಶಬ್ದ.

ओहदा– पु पद, स्थान। ಪದ, ಹುದ್ದೆ, ಸ್ಥಾನ, ಪದವಿ.

ओहदेदार– पु पदाधिकारी, हाकिम। ಅಧಿಕಾರಿ, ಹುದ್ದೇದಾರ.

ओहार– पु. पालकी, गाड़ी, इत्यादिके ऊपर ढॉपने का वस्त्र, परदा। ಪಲ್ಲಕ್ಕಿ, ಗಾಡಿ, ರಥ ಮುಂತಾದವುಗಳ ಮೇಲೆ ಹೊದಿಸುವ ವಸ್ತ್ರ, ಪರದೆ.

ओहो– अव्य आश्चर्य या हर्ष सूचक शब्द। ಆಶ್ಚರ್ಯ ಅಥವಾ ಆನಂದ ಸೂಚಕ ಶಬ್ದ. ' ಓಹೋ! '

# औ

औंगाना– अक्रि दे 'ओंगना'।

औंगा– वि गूँगा। ಮೂಕ, ಮಾತನಾಡಲಾರದ.

औंगी– स्त्री. गूँगापन, चुपकी। ಮೂಕತನ, ಮೌನ, ಸುಮ್ಮನಾಗಿರುವಿಕೆ.

औंघना, औंघाना– अक्रि ऊँघना, अलसाना। ತೂಕಡಿಸು,ಆಲಸ್ಯಗೊಳ್ಳು.

औंघाई– स्त्री. झपकी। ತೂಕಡಿಕೆ, ಅರೆ ನಿದ್ರೆ.

औंजना– अक्रि ऊबना, अकुलाना, घबराना। ಬೇಸರಾಗು, ವ್ಯಾಕುಲ ಗೊಳ್ಳು, ತ್ರಾಸಗೊಳ್ಳು, ಅಂಜು.

औंड– पु. बेलदार, मिट्टी खोदनेवाला। ಮಣ್ಣೊಡ್ಡ, ಮಣ್ಣು ತೋಡುವವ.

औंडा– वि. गहरा। ಆಳವಾದ.

औंडना– अक्रि. व्याकुल होना, उन्मत्त होना। ವ್ಯಾಕುಲನಾಗು, ಉನ್ಮತ್ತನಾಗು, ಮೂರ್ಛಿತನಾಗು.

औंदाना– अक्रि. घबड़ाना, ऊबना। ಗಾಬರಿಯಾಗು, ದಿಗಿಲುಗೊಳ್ಳು, ಕಳವಳಗೊಳ್ಳು, ಬೇಸರಗೊಳ್ಳು.

औंधना– अक्रि. औंधा होना। ತಿರುವುಮುರುವಾಗು, ಮಗುಚು, ಪಲ್ಲಟಿಸು सक्रि. उलट देना। ತಿರಿಚು, ತಿರುವುಮುರುವು ಮಾಡು, ಮುಗುಚು.

औंधा–वि. उलटा, टेढा। ತಿರುವು ಮುರುವಾದ, ಮಗುಚಿ ಬಿದ್ದ, ತಲೆ

ಕೆಳಗಾದ, ವಕ್ರ. पु मूर्ख । ಮೂರ್ಖ. **औंधी खोपडी** = मूर्ख । ಮೂರ್ಖ, ಬುದ್ಧಿಹೀನ. **औंधे मुँह गिरना** = बडा धोखा खाना । ಮೋಸ ಹೋಗು.

**औंधाना**– सक्रि. उलटाना, उंडेलना । ತಿರುಗಿಸು, ಬುಡಮೇಲು ಮಾಡು, ಮಗುಚು, ಸುರುವು

**औ**– अव्य. द्रे. 'और' ।

**औकात**– स्त्री. हैसियत, सामर्थ्य । ಸ್ಥಿತಿ, ಸಾಮರ್ಥ್ಯ. पु. समय । ಸಮಯ, ವೇಳೆ, ಕಾಲ.

**औगत**– स्त्री दुर्गति । ದುರ್ದಶೆ, ದುರ್ಗತಿ. वि. अवगत, विदित । ಗೊತ್ತಾದ, ತಿಳಿದ.

**औगी**– स्त्री चाबुक, पशु पकडनेका गड्ढा । ಚಬಕ, ಚಾಟಿ, ಬಾರಕೋಲು, ಪಶುಗಳನ್ನು ಹಿಡಿಯುವದಕ್ಕಾಗಿ ಮಾಡಿದ ತಗ್ಗು.

**औगुन**–पु. अवगुण, दोष । ದುರ್ಗುಣ, ಕೆಟ್ಟಗುಣ, ದೋಷ, ಕಲಂಕ

**औगुनी**– वि दुर्गुणी, दोषी । ದುರ್ಗುಣವುಳ್ಳ, ದೋಷವುಳ್ಳ.

**औघट**– वि कठिण, दुर्गम । ಕಠಿಣ, ದುರ್ಗಮ, ವಿಕಟ. पु दुर्गम मार्ग । ಕಠಿಣ ಮಾರ್ಗ.

**औघड**– पु अघोरी, मनमौजी । ಅಘೋರ ಮತಸ್ಥ, ಮುಡುಕುವವ, ಸ್ವಚ್ಛಂದಿ. वि. अटपट । ಅಡ್ಡತಿಡ್ಡ, ಯದ್ವಾತದ್ವಾ.

**औघर**– वि अद्भुत, विलक्षण । ಅದ್ಭುತ, ವಿಲಕ್ಷಣ, ಹೊಸ, ನವೀನ, ಅವ್ಯವಸ್ಥಿತ.

**औचक**– क्रिवि. एकाएक, सहसा । ಅಕಸ್ಮಾತ್ತಾಗಿ, ಒಮ್ಮಿಂದೊಮ್ಮೆ.

**औचट**– स्त्री. कठिनाई, संकट । ಸಂಕಟ, ಅಡಚಣೆ, ಅಸುವಿಧೆ. क्रिवि सहसा, भूलसे । ಅಕಸ್ಮಾತ್ತಾಗಿ, ತಪ್ಪಿ

**औचित**– वि निश्चित । ನಿಶ್ಚಿಂತ.

**औज**– स्त्री. ओज, तेज, बल, प्रकाश । ತೇಜ, ಕಾಂತಿ, ಪ್ರಭೆ, ಬಲ, ಕುಲೀನತೆ, ಶ್ರೇಷ್ಠವದ, ಔನ್ನತ್ಯ

**औज़ार**– पु चीरने, काटने, कूटने, इत्यादि के सामान, हथियार । ಉಪಕರಣ, ಸಲಕರಣೆ, ಆಯುಧ.

**औझड, औझर**– क्रिवि लगातार । ನಿರಂತರವಾಗಿ, ಸತತ, ಯಾವಾಗಲೂ.

**औटना**– सक्रि गरम करना, खौलना । ಕಾಯಿಸು, ಗಟ್ಟಿ ಮಾಡು. अक्रि. घूमना, खौलना, गरम होकर गाढा होना । ತಿರುಗಾಡು, ಕುದಿ, ಕಾಯ್ದು ಗಟ್ಟಿಯಾಗು.

**औटाना**– सक्रि गरम करके गाढा करना । ಕಾಯಿಸಿ ಗಟ್ಟಿಮಾಡು (ಹಾಲು ಮುಂ.)

**औढर**– वि मनमौजी, थोडेमे प्रसन्न होनेवाला । ಸ್ವಚ್ಛಂದಿ, ಮನಸ್ವಿ, ಸ್ವಲ್ಪದರಲ್ಲಿ ತೃಪ್ತಿಪಡುವವ

औंदसा– स्त्री. दुर्दशा, विपत्ति । ದುರ್ದಶೆ, ವಿಪತ್ತು.

औंध– पु अवध, कोशल देश । ಅಯೋಧ್ಯೆ, ಕೋಶಲ ದೇಶ. स्त्री सीमा, अंत समय । ಸೀಮೆ, ಗಡಿ, ಅಂತ ಸಮಯ.

औंध, औंधि– स्त्री सीमा, अवधि । ಸೀಮೆ, ಗಡಿ, ಅವಧಿ, ನಿಶ್ಚಿತ, ಸಮಯ, ಕೊನೆ.

औनापौना– वि. थोड़ाबहुत । ಸ್ವಲ್ಪ, ಕೊಂಚ, ಅರ್ಧಮರ್ಧ. क्रिवि. थोडाबहुत । ಹೆಚ್ಚುಕಡಿಮೆಯಾಗಿ.

औनि– स्त्री अवनि । ಅವನಿ, ಪೃಥ್ವಿ, ಭೂಮಿ.

औपनिवेशिक– वि उपनिवेश संबंधी । ವಸಾಹತು ಸಂಬಂಧದ, ವಸಾಹತಿನ.

औपन्यासिक– वि. उपन्यास संबंधी, अनोखा । ಕಾದಂಬರಿ ಸಂಬಂಧದ, ಕಾದಂಬರಿಗೆ ಯೋಗ್ಯ, ಅದ್ಭುತ. पु. उपन्यास लिखनेवाला । ಕಾದಂಬರಿಕಾರ.

औम–पु क्षय हुयी तिथि । ಕ್ಷಯತಿಥಿ.

और– अव्य दो शब्दों या वाक्यों को मिलानेवाला शब्द । ಮತ್ತು, ಸಹ, ಅಲ್ಲದೆ वि. अन्य, अधिक । ಎರಡನೆಯ, ಅನ್ಯ, ಅಧಿಕ.

—का और = कुछका कुछ, उलटा । ವಿಪರೀತ, ವಿರುದ್ಧ.

—तो और = आश्चर्य की बात नहीं । ಆಶ್ಚರ್ಯಪಡತಕ್ಕದ್ದೇನಿಲ್ಲ, ವಿಶೇಷವೇನಿಲ್ಲ.

औरत– स्त्री. स्त्री, महिला, पत्नि । ಸ್ತ್ರೀ, ಹೆಂಗಸು, ಪತ್ನಿ.

औरस– पु. विवाहित स्त्रीसे उत्पन्न पुत्र । ಔರಸ ಪುತ್ರ, ನಿಜ ಪುತ್ರ, ಕುಲೀನ.

औरसना–अक्रि. विरस होना रुष्ट होना । ವಿರಸನಾಗು, ಸಿಟ್ಟಾಗು.

औरेब– पु टेढी चाल, उलझन । ವಕ್ರಗತಿ, ತೊಡಕು, ತಂತ್ರ.

औला– वि उत्तम, श्रेष्ठ । ಉತ್ತಮ, ಶ್ರೇಷ್ಠ.

औलाद– स्त्री. संतान । ಸಂತಾನ, ಸಂತತಿ, ವಂಶಜ, ಮಗು.

औलिया–पु सिद्ध पुरुष । ಸಿದ್ಧಪುರುಷ.

औवल– वि दे. 'अव्वल' ।

औसत– पु परता, साधारण । ಸರಾಸರಿ, ಸಾಮಾನ್ಯ, ಸರ್ವಸಾಧಾರಣ, ಮಧ್ಯ.

औसना– अक्रि सड़ना, गर्मी बढना । ಕೊಳೆ, ಹಳಸು, ಸೆಕೆಯಾಗು.

औसर– पु. दे 'अवसर' ।

औसान– पु अवसान, अंत, नतीजा, सुधबुध । ಅವಸಾನ, ಅಂತ, ಕೊಳ, ಪರಿಣಾಮ, ಸಮಾಪ್ತಿ, ಪ್ರಜ್ಞೆ.

औसाफ़–स्त्री सद्गुण । ಸದ್ಗುಣಗಳು.

औसेर– स्त्री. दे. 'अवसेर' ।

औहाती– वि सोहागिन । ಸೌಭಾಗ್ಯವತಿ.

# क

**कँउधा–** पु. दे 'कौंधा'।

**कंकड़, कंकर–** पु. पत्थरका टुकड़ा, मिट्टी और चूनेके संयोगसे बने हुए रोडे, सूखी तमाखू, रत्न। ಹರಳು, ಬೆಣಚುಗಲ್ಲು, ಸುಣ್ಣದ ಹರಳು, ಒಣ ತಂಬಾಕು, ರತ್ನ.

**कंकड़ी, कंकरी–** स्त्री. छोटा कंकड़। ಸಣ್ಣ ಹರಳು, ಸಣ್ಣ ತುಂಡು.

**कंकड़ीला–** वि. कंकड़ मिला हुआ। ಹರಳುಗಳುಳ್ಳ, ಉಸುಕಿನ, ಗರಸು ನೆಲ.

**कंकण, कंकन–** पु. कड़ा, कंगन। ಕಡಗ, ಕಂಕಣ, ಬಳೆ.

**कंकर–** पु. दे. 'कंकड़'।

**कंकरीट–** स्त्री. कांक्रीट। ಕಾಂಕ್ರೀಟ.

**कंकरीला–** वि. दे. 'कंकड़ीला'।

**कंकाल–** पु. अस्थिपंजर। ಅಸ್ಥಿಪಂಜರ, ಎಲುಬಿನ ಗೂಡು.

**कँखवारि, कँखौरी–** स्त्री. काँख, काँखकी फुड़िया। ಕಂಕುಳ, ಕಂಕುಳ ಕುರು.

**कंगन, कँगना–** पु. दे. 'कंकन'।

**कंगनी–** स्त्री. छोटा कंगन, छतके नीचे का उभड़ा हुआ भाग, एक अन्न। ಚಿಕ್ಕ ಕಡಗ, ಕಂಕಣ, ಕುಂಬೆ, ನವಣೆ.

**कंगला, कंगाल–** वि. गरीब, दरिद्र। ಬಡವ, ದರಿದ್ರ.

**कँगही–** स्त्री. कंघी। ಹಣಿಗೆ.

**कँगुरिया–** स्त्री. सबसे छोटी उँगली। ಚಿಕ್ಕ ಬೆರಳು.

**कँगूरा–** पु. शिखर, बुर्ज, चोटी। ಶಿಖರ, ಗೋಪುರ, ಹುಡೆ, ತುದಿ.

**कंघा–** पु. बाल झाड़नेकी बड़ी कंघी। ದೊಡ್ಡ ಹಣಿಗೆ, ನೇಕಾರರ ಹಣಿಗೆ, ಬಾಚಣಿಗೆ.

**कंघी–** स्त्री. छोटा कंघा। ಹಣಿಗೆ, ಬಾಚಣಿಗೆ, ಕುಂಚ.

**कँघेरा–** पु कंघा बनानेवाला। ಹಣಿಗೆ ಮಾಡುವವ ಅಥವಾ ಮಾರುವವ.

**कंघेरिन–** स्त्री. कंघा बनाने या बेचनेवाली स्त्री। ಹಣಿಗೆ ಮಾಡುವ ಅಥವಾ ಮಾರುವ ಸ್ತ್ರೀ.

**कंच–** पु. काँच। ಗಾಜು.

**कंचन–** पु. सोना, संपत्ति। ಬಂಗಾರ, ಚಿನ್ನ, ಸಂಪತ್ತು.

**कंचनी–** स्त्री. वेश्या, अप्सरा। ವೇಶ್ಯೆ, ಅಪ್ಸರೆ, ನರ್ತಕಿ.

**कंचुक–** पु. कवच, चोली। ಕವಚ, ಕುಪ್ಪಸ, ರವಿಕೆ.

**कंचुकी–** स्त्री. चोली, केंचुली, दरबान। ಕುಪ್ಪಸ, ಹಾವಿನ ಪರೆ, ಬಾಗಿಲ ಕಾಯುವವ.

**कंचेरा–** पु. काँचका काम करनेवाला। ಗಾಜಿನ ಕೆಲಸ ಮಾಡುವವ, ಕಂ-

ಜೂಗಾರ, ಕಂಚಿನ ಪಾತ್ರೆ ಮಾಡು ವವ.

कंजड, कंजर– पु. एक नीच जाति। ಕೊರವ.

कॅजियाना– अक्रि. मुरझाना, कालासा पड़ना। ಬಾಡು, ಕಪ್ಪಗಾಗು; ತಣ್ಣಗಾಗು.

कंजूस– वि. कृपण। ಜಿಪುಣ, ಕೃಪಣ, ಲೋಭಿ, ಜೀನ.

कंट, कंटक– पु. कॉटा, विघ्न, छोटा शत्रु। ಮುಳ್ಳು, ಬಾಧೆ, ವಿಘ್ನ, ಅಡ್ಡಿ, ವೈರಿ, ಹಗೆ.

कॅटिया– स्त्री. छोटी कील, हुक, सिरका एक गहना। ಸಣ್ಣ ಮೊಳೆ, ಹುಕ್, ತಲೆಯ ಒಂದು ಆಭರಣ.

कॅटीला– वि. कॉटेदार। ಮುಳ್ಳುಗಳುಳ್ಳ, ಮುಳ್ಳಿನ.

कंटोप, कनटोप– पु. सिर तथा कानोंको ढापनेकी एक प्रकार की टोपी। ಕಿವಿ ಟೊಪ್ಪಿಗೆ, ಕುಲಾಯಿ.

कंठ– पु. गला, स्वर। ಕುತ್ತಿಗೆ, ಕಂಠ, ಕೊರಳು; ಧ್ವನಿ, ಸ್ವರ.

कंठमाला– पु. गलेका एक रोग। ಕಂಠಮಾಲೆ, ಗಂಡಮಾಲೆ.

कंठला– पु. बच्चों के गलेमें पहिराने का एक आभरण। ಕಂಠೀಸರ.

कंठा– पु गले का चिह्न जो तोते के कंठ के चारों ओर पड़ जाता है, गले का एक आभूषण। ಕೊರಳು ಪಟ್ಟಿ, ಗಿಳಿಯ ಕೊರಳ ಗೆರೆ, ಕಂಠಹಾರ, ಕಂಠಮಾಲೆ.

कंठाग्र–त्रि. कंठस्थ। ಕಂಠಸ್ಥ, ಬಾಯಿಪಾಠವಾದ.

कंठी– स्त्री. छोटे दाने का कंठा, तुलसी आदि की माला। ಸಣ್ಣ ಮುತ್ತಿನ ಸರ, ಸಣ್ಣ ಕಾಳುಗಳ ಕಂಠೀಸರ, ತುಲಸೀ ಮಣಿಗಳ ಮಾಲೆ.

कंडा– पु गोबरका उपला। ಬೆರಣಿ, ಕುಳ್ಳು.

कंडाल– पु एक तरहका ढोल, तुरही नामका बाजा। ಗಂಗಾಳ, ತುತೂರಿ, ಸನಾದಿ.

कंडील– पु कागज इत्यादि की बनी लालटेन। ಕಾಗದ, ಅಭ್ರಕಗಳಿಂದ ಮಾಡಿದ ಕಂದೀಲು, ಲಾಂದರ.

कंडौरा– पु कंडोंका ढेर। ಕುಳ್ಳಿನ ಸಮೂಹ, ಬೆರಣಿಯ ರಾಶಿ.

कंत– पु कात, पति, ईश्वर। ಕಾಂತ, ಗಂಡ, ಪತಿ, ಈಶ್ವರ.

कथा– पु गुदडी। ಚಿಂದಿ, ಬೊಂತೆ.

कंद– पु. गूदेदार जड, बादल, मिश्री। ಗಡ್ಡೆಗೆಣಸು, ಮೋಡ, ಕಲ್ಲುಸಕ್ಕರೆ.

कंदर, कंदरा– पु. गुफा। ಗುಹೆ, ಗವಿ.

कंदप, कंदर्प– पु. कामदेव। ಮದನ, ಕಾಮದೇವ.

कंदा– पु. दे. 'कंद'।

कंदील– पु. दे. 'कंडील'।

कंदु, कंदुक–पु. गेंद, सुपारी। ಚೆಂಡು, ಅಡಿಕೆ.

**कँदैला–** वि. मैला। ಮಲಿನ, ಹೊಲಸಾದ, ಮಾಸಿದ.

**कँधेरा–** पु. करधनी। ನಡಕಟ್ಟು, ಉಡದಾರ.

**कंध–** पु. दे. 'कंधा'।

**कंधनी–** स्त्री. दे. 'करधनी'।

**कंधा–** पु. स्कंध। ಹೆಗಲು.

**कंधार–** पु. मल्लाह। ಅಂಬಿಗ.

**कँधेला–** पु. कधेपर डाला जानेवाला साडीका छोर। ಹೆಗಲ ಮೇಲೆ ಹೊದ್ದುಕೊಳ್ಳುವ ಸೀರೆಯ ಪದರ, ಸೀರೆಯ ಸೆರಗು.

**कंप, कंपन–** पु. कापना, धडकन। ನಡುಕ, ಕಂಪನ, ನಡುಗುವಿಕೆ.

**कँपकँपी–** स्त्री. कॉपना। ನಡುಕ, ಕಂಪನ.

**कँपना–**अक्रि. कॉपना, डरना। ನಡುಗು, ಕಂಪಿಸು, ಅದುರು, ಅಂಜು.

**कंपा–** पु. लासा लगी हुयी बॉस की लग्गी। ಪಕ್ಷಿಗಳನ್ನು ಹಿಡಿಯುವ ಅಂಟು ಸವರಿದ ಕೋಲು

**कँपाना–** सक्रि हिलाना, कंपित करना, डराना। ಅಲುಗಿಸು, ನಡುಗಿಸು, ಅಂಜಿಸು, ಹೆದರಿಸು.

**कंपू–**पु कैम्प, छावणी, डेरा। ಕ್ಯಾಂಪ, ಶಿಬಿರ, ಸೈನ್ಯವು ನೆಲಸಿದ ಸ್ಥಳ, ಬಿಡಾರ, ಡೇರ.

**कंबर, कंबल–** पु. ऊनका वस्त्रविशेष। ಕಂಬಳಿ, ರಗ್ಗು.

**कँवल–** पु. कमल। ಕಮಲ, ತಾವರೆ.

**कवलगट्टा–** पु कमल का बीज। ತಾವರೆ ಬೀಜ.

**कई–** वि. अनेक, कतिपय। ಹಲವು, ಕೆಲವು.

**ककई–** स्त्री दे. 'कंघी'।

**ककडी, ककरी–** स्त्री ಸವತೆಕಾಯಿ.

**ककहरा–** पु 'क' से 'ह' तकके अक्षर। 'ಕ' ದಿಂದ 'ಹ' ದ ವರೆಗಿನ ಅಕ್ಷರಗಳು.

**ककही–** स्त्री कंघी। ಹಣಿಗೆ.

**ककोडा–** पु. एक तरकारी विशेष। ಕಾಯಿಪಲ್ಲೆಗಾಗಿ ಉಪಯೋಗಿಸುವ ತೊಂಡಲೀ ಕಾಯಿಯಂಥ ಒಂದು ಹಣ್ಣು.

**कक्कड़–** पु. सूखी तमाखू। ಒಣ ತಂಬಾಕದ ಚೂರು.

**कक्का–** पु. काका, नगाड़ा। ಚಿಕ್ಕಪ್ಪ, ಕಕ್ಕ, ನಗಾರಿ, ಭೇರಿ.

**कक्षा–** स्त्री श्रेणी, परिधि, ग्रहमार्ग, कॉख, ड्योढी। ವರ್ಗ, ತರಗತಿ, ಪರಿಧಿ, ಕಂಕುಳು, ಹೊಸ್ತಿಲು

**कखौरी–** स्त्री. दे 'कॅखवारी'।

**कगार–** पु मेड, ऊंचा किनारा, टीला, भीतमे उभड़ी हुयी पट्टी, ओठ। ಬೇಲಿ,ಎತ್ತರವಾದ ದಂಡೆ, ದಿನ್ನೆ, ಗದ್ದೆ ಬದುವು,ಗೋಡೆಯಲ್ಲಿ ಮುಂದೆ ಬಂದ ಭಾಗ, ಕುಂಚಿ, ತುಟಿ. क्रिवि किनारेपर, निकट, अलग। ದಂಡೆಯಲ್ಲಿ, ತೀರದಲ್ಲಿ, ಸಮೀಪದಲ್ಲಿ, ಬೇರೆ,

कगारा– पु. दे 'करारा'।

कच– पु. केश, सूखा हुआ व्रण, झुंड, बादल। ಕೂದಲು,ಒಣಗಿದಹುಣ್ಣು, ಹಕ್ಕಳೆ, ಗುಂಪು, ಸಮೂಹ, ಮೋಡ.

कचक– स्त्री. कुचलने से उत्पन्न चोट। ತುಳಿಯುವದರಿಂದಾದ ನೋವು.

कचकच– स्त्री. बकवाद। ಬಡಬಡಿಕೆ, ವ್ಯರ್ಥವಾದ ಮಾತು, ಒದರಾಟ.

कचकचाना– अक्रि. दाँत पीसना। ಹಲ್ಲು ಕಡಿ, ಕ್ರುದ್ಧನಾಗು.

कचकना– सक्रि. दबना, कुचलना,ठोकर खाना। ಅವುಕಿ ಹೋಗು, ಒತ್ತಲ್ಪಡು, ಎಡವು.

कचकोल– पु. नारियलका बना हुआ भिक्षा पात्र। ಫಕೀರರ ಭಿಕ್ಷಾ ಪಾತ್ರೆ, ತೆಂಗಿನಕಾಯಿಯ ಪರಟೆಯಿಂದ ಮಾಡಿದ ಭಿಕ್ಷಾಪಾತ್ರೆ.

कचड़ा– पु. दे. 'कचरा'।

कचदिला–वि. दुर्बल हृदयका, डरपोक। ದುರ್ಬಲ ಹೃದಯದ, ಅಂಜುಬುರುಕ.

कचनार– पु. एक वृक्ष। ಕಂಚಿವಾಳ.

कचपच– पु. भीड़भाड़, गुत्थम गुत्था। ದಟ್ಟಣೆ, ನೂಕುನುಗ್ಗಲು, ಗುಂಪು, ಜಂಗುಳಿ.

कचपचिया, कचपची– स्त्री. कृत्तिका नक्षत्र, छोटे छोटे तारोंका समूह, चमकीली बिंदी। ಕೃತ್ತಿಕಾ ನಕ್ಷತ್ರ, ಸಣ್ಣ ಸಣ್ಣ ಚಿಕ್ಕೆಗಳ ಗುಂಪು,ಹೊಳೆಯುವ ಚುಕ್ಕೆ ಅಥವಾ ಬೊಟ್ಟು.

कचर-पचर– पु बकवाद, कच्चे फल खानेपर मुँह से निकलने वाला शब्द। ಬಡಬಡಿಕೆ, ಅಸಂಬದ್ಧ ಮಾತು, ತಿನ್ನುವಾಗ ಬಾಯಿಂದ ಹೊರಡುವ 'ಕಜಕಜ' ಶಬ್ದ.

कचरना–सक्रि. पैरसे कुचलना, रौंदना। ತುಳಿ, ನುಚ್ಚು ಮಾಡು.

कचरा–पु. कूड़ा करकट, ककड़ी, समुद्री सेवार। ಹೊಲಸು, ಕಸಕಡ್ಡಿ, ಸೌತೆಕಾಯಿ, ಸಮುದ್ರಪಾಚಿ.

कचलोन– पु. काला नमक। ಕರಿಯ ಉಪ್ಪು.

कचलोहू– पु. घावका पानी। ಗಾಯದಿಂದ ಸೋರುವ ನೀರು, ಕೀವು.

कचहरी– स्त्री. न्यायालय, राजसभा. कार्यालय। ನ್ಯಾಯಾಲಯ, ಕೋರ್ಟು, ದರ್ಬಾರ, ರಾಜಸಭೆ, ಕಾರ್ಯಾಲಯ

कचाई– स्त्री. कचापन, अनुभवहीनता। ಅಪರಿಪಕ್ವತೆ, ಕಚ್ಚಾ, ಹಸಿ, ಅನನುಭವ, ಅಪೂರ್ಣ.

कचाकची–स्त्री. विवाद, झगड़ा। ವಿವಾದ, ಕಚ್ಚಾಟ, ಜಗಳ, ಜಗ್ಗಾಟ.

कचाना– अक्रि. साहस हारना, आगा-पीछा करना। ಎದೆಗುಂದು,ಹೆದರು, ಹಿಂದುಮುಂದು ನೋಡು.

कचायँध– स्त्री. कचेपनकी बू। ಅಪಕ್ವತೆಯ ವಾಸನೆ.

कचारना– सक्रि. पटकना, पटककर

कपडा धोना। ಅಪ್ಪಳಿಸು, ಒಡೆ, ಎತ್ತಿ ಒಡೆದು ಅರಿವೆ ಒಗೆ.

**कचालू**– पु घुइयाँ। ಶ್ಯಾವೆ ಗಡ್ಡೆ, ಕೆಸುವಿನ ಗಡ್ಡೆ.

**कचिया**– पु हँसिया। ಕುಡುಗೋಲು

**कचियाना**– अक्रि हिम्मत हारना, हिचकिचाना। ಎದೆಗುಂದು, ಅಂಜು, ಅನುಮಾನಿಸು

**कचूमर**– पु भरता, कुचली हुई वस्तु। ಚಟ್ಣಿ, ಜಜ್ಜಿದ ವಸ್ತು.

**कचोटना**–अक्रि चुभना। ಚುಚ್ಚು, ಒಳ ನೋಯು.

**कचोडी**– स्त्री दे 'कचौरी'।

**कचोना**– सक्रि 'धंसाना। ಚುಚ್ಚು, ತಿವಿ.

**कचोरा**– पु. कटोरा। ಬಟ್ಟಲು, ಕಪ್ಪು.

**कचौडी, कचौरी**– स्त्री एक तरह की पूरी। ಒಂದು ತರದ ಉಪ್ಪು ಹಾಕಿದ ಉದ್ದಿನ ಪುರಿ, ಕರ್ಜಿ ಕಾಯಿ.

**कचा**– वि. हरा, अपक्व, विना पका हुआ, अस्थाई, कमजोर, अपरिपुष्ट, नि सार, कच्ची मिट्टीका, अनुभवहीन। ಹಸಿರು, ಮಾಗದ, ಅಪಕ್ವ, ಬೇಯಿಸದ, ಅಸ್ಥಾಯಿ, ಅಶಕ್ತ, ಅಪೂರ್ಣ, ತುಂಬದ, ಅಪರಿಪುಷ್ಟ, ನಿಸ್ಸಾರವಾದ, ಮಣ್ಣಿನಿಂದಾದ, ಅನುಭವವಿಲ್ಲದ.

—**चिट्ठा**=रहस्य। ರಹಸ್ಯ, ಒಳಗುಟ್ಟು.

**कची**– स्त्री. न पकी हुई रसोई। ಬೇಯದ ಅಥವಾ ಕರೆಯದ ಅಡಿಗೆ.

**कची रसोई**– स्त्री केवल जलमें पका हुआ भोजन। ಬರೀ ನೀರಿನಲ್ಲಿ ಕುದಿಸಿದ ಆಹಾರ, ಅನ್ನ, ರೊಟ್ಟಿ, ಬೇಳೆ ಮುಂತಾದವು.

**कची सडक**– स्त्री मिट्टी की सडक। ಮಣ್ಣು ರಸ್ತೆ.

**कच्चू**– पु घुइयाँ। ಶ್ಯಾವೆಗಡ್ಡೆ, ಕೆಸು

**कच्छ**– पु जल के पासकी भूमि, कछार, धोती की लाँग, कछुआ। ದಡ, ತೀರ, ಮುಳುಗುವ ಭೂಮಿ, ಕಚ್ಚೆ, ಆವೆ.

**कच्छू**– पु कछुआ, खुजली। ಆಮೆ, ಆವೆ, ಕಜ್ಜಿ.

**कछना**– सक्रि. धारण करना। ಧರಿಸು, ತೊಡು.

**कछनी**– स्त्री. छोटी धोती। ಸಣ್ಣ ದೋತರ, ಪಂಜೆ, ದಟ್ಟಿ, ಚಡ್ಡಿ.

**कछरा**– पु. चौडे मुँहका मिट्टीका बरतन। ಅಗಲ ಬಾಯಿಯ ಮಣ್ಣಿನ ಪಾತ್ರೆ.

**कछार**– पु नदी या समुंदरके किनारे की नीची भूमि। ನದಿ ಅಥವಾ ಸಮುದ್ರ ತೀರದ ನಿಮ್ನ ಭೂಮಿ.

**कछु, कछुक**– वि. थोड़ा, कुछ। ಸ್ವಲ್ಪ, ಕೆಲವು.

**कछुआ**– पु. कच्छप। ಆಮೆ, ಆವೆ.

**कछोटा**– पु कछौटी-स्त्री. काछ, कछनी, लाग। ಕಚ್ಚೆ, ಸಣ್ಣ ದೋತರ, ಪಂಜೆ, ಚಡ್ಡಿ, ಲಂಗೋಟಿ, ಲಾಂಗ.

कज– पु. कमल, दोष, टेढापन। ಕಮಲ, ದೋಷ, ವಕ್ರತೆ. वि. टेढा। ವಕ್ರ.

कजक– स्त्री. अंकुश। ಅಂಕುಶ.

कजरा– पु. काजल। ಕಾಡಿಗೆ.

कजराई– स्त्री. कालापन। ಕಪ್ಪುತನ.

कजरारा– वि. काजलयुक्त, काला। ಕಾಡಿಗೆಯುಳ್ಳ, ಕಾಡಿಗೆ ಹಚ್ಚಿಕೊಂಡ, ಕಪ್ಪಾದ.

कजरौटा– पु कजरौटी– स्त्री. काजल रखने की डिबिया। ಕಾಡಿಗೆ ಡಬ್ಬಿ.

कजलाना–अक्रि काला पडना, बुझना। ಕಪ್ಪಾಗು, ಆರು, ನಂದು. सक्रि. काजल लगाना। ಕಾಡಿಗೆ ಹಚ್ಚು.

कजलौटा– पु. कजलौटी– स्त्री दे 'कजरौटा'।

क़ज़ा– स्त्री. मौत। ಮೃತ್ಯು, ಸಾವು.

कज़्ज़ाक, कज़्ज़ाक– पु लुटेरा। ದರೋಡೆಕೋರ, ಕೊಳ್ಳೆ ಹೊಡೆಯುವವ.

क़ज़िया– पु. झगड़ा बखेडा। ಜಗಳ, ಕಲಹ, ಉಪದ್ರವ.

कजी– स्त्री वक्रता, दोष। ವಕ್ರತೆ, ಡೊಂಕು, ದೋಷ.

कज्जल– पु. काजल, अंजन, मेघ। ಕಾಡಿಗೆ, ಅಂಜನ, ಮೋಡ.

कटक– पु. सेना, कंकण, एक देश, पहाड़के बीचका स्थान, समूह, वलय। ಸೇನೆ, ಕಂಕಣ, ಬಳೆ, ಕಡಗ, ಒಂದು ದೇಶ, ಪರ್ವತದ ಮಧ್ಯ ಭಾಗ, ಗುಂಪು, ವಲಯ.

कटकई, कटकाई– स्त्री सेना। ಸೈನ್ಯ, ದಂಡು, ಪಡೆ.

कटकटना, कटकटाना– अक्रि. दाँत पीसना। ಹಲ್ಲು ಕಡಿ.

कटखना– वि काट खानेवाला। ಕಡಿಯುವ, ಕಚ್ಚುವ. पु. युक्ति। ಯುಕ್ತಿ, ಉಪಾಯ, ತಂತ್ರ

कटघरा– पु बडा पीजड़ा। ಕಟಾಂಜನ, ದೊಡ್ಡ ಪಂಜರ, ಮರದ ಪಂಜರ.

कटजीरा– पु. काला जीरा। ಕರಿ ಜೀರಿಗೆ.

कटड़ा– पु भैंसका नर बच्चा। ಎಮ್ಮೆಯ ಕರು (ಗಂಡು)

कटती–स्त्री.बिक्री,खपत। ವಿಕ್ರಯ,ಮಾರಾಟ, ಖರ್ಚು.

कटना– अक्रि. टुकड़ा होना, छूटना, बीतना, खपना, नष्ट होना, लज्जित होना, मोहित होना। ತುಂಡಾಗು, ಜಾರಿಗು, ಬಿಡು, ಬೇರೆಯಾಗು, ಕಳೆ, ಖರ್ಚಾಗು, ನಷ್ಟವಾಗು, ಹಾಳಾಗು, ಲಜ್ಜಿತನಾಗು, ಮೋಹಿಸು, ಆಸಕ್ತನಾಗು.

कटनि– स्त्री. काट, प्रीति। ಕಡಿತ, ಕಚ್ಚು, ಪ್ರೀತಿ, ಸ್ನೇಹ.

कटनी– स्त्री फसल काटनेकी क्रिया, कटाई का हंगाम, कटती। ಕೊಯ್ಲು, ಕೊಯಿಲು, ಬೆಳೆ ಕೊಯ್ಯುವದು, ಸುಗ್ಗಿ, ಮಾರಾಟ, ಖರ್ಚು.

कटरा– छोटा बाजार, भैंसका बछडा। ಸಣ್ಣ ಸಂತೆ, ಅಂಗಡಿ ಬೀದಿ, ಎಮ್ಮೆಯ ಕರು.

कटल्लू– पु व्याध, मॉस बेचनेवाला। ವ್ಯಾಧ, ಬೇಡ, ಮಾಂಸ ಮಾರುವವ, ಕಟುಕರವ

कटवाँ– वि. कटा हुआ, काटकर बना हुआ। ಕೊಯ್ದ, ಕೊಯ್ದು ಮಾಡಿದ, ಕತ್ತರಿಸಿದ.

कटवाना– सक्रि 'काटना' का प्रे रूप।

कटसरैया– स्त्री एक कँटीला पौधा। ಒಂದು ಮುಳ್ಳು ಕಂಟಿ.

कटहर– पु. दे. 'कटहल'।

कटहरा– पु दे. 'कटघरा'।

कटहल– पु एक पेड़ या उसका फल। ಹಲಸಿನ ಗಿಡ, ಹಲಸಿನ ಹಣ್ಣು.

कटहा– वि काटनेवाला। ಕಚ್ಚುವ. (ನಾಯಿ)

कटाइक– पु काटनेवाला। ಕೊಯ್ಯುವವ, ಕಡಿಯುವವ.

कटाई– स्त्री काटनेका काम, अन्नका काटा जाना, काटनेकी मजदूरी। ಕೊಯಿತ, ಕೊಯಿಲು, ಕೊಯ್ಯುವ ಕೆಲಸ, ಕಡಿತ, ಸುಗ್ಗಿ, ಕೊಯ್ಯುವ ಕೂಲಿ.

कटाऊ– पु काट, काट छाँट, बेलबूटा। ಕೊಯ್ತ, ಕಡಿತ, ಕುಸುರಿನ ಕೆಲಸ.

कटाकट– पु 'कटकट' का शब्द, झगडा। ಕಟಕಟ ಶಬ್ದ, ಜಗಳ, ತಂಟೆ, ಗಲಾಟೆ.

कटाकटी– स्त्री. मारकाट, वध। ಹೊಡೆದಾಟ, ಯುದ್ಧ, ಹಿಂಸೆ, ವಧೆ.

कटाक्ष, कटाच्छ– पु तिरछी चितवन, आक्षेप, व्यंग। ವಕ್ರ ನೋಟ, ಓರೆನೋಟ, ಆಕ್ಷೇಪ,ವ್ಯಂಗ್ಯ.

कटान– स्त्री काटनेका कार्य या पद्धति। ಕೊಯ್ಯುವ ಕೆಲಸ ಅಥವಾ ಪದ್ಧತಿ.

कटाना– सक्रि काटनेका काम दूसरोंसे कराना। ಕೊಯ್ಯುವ ಕೆಲಸವನ್ನು ಎರಡನೆಯವರಿಂದ ಮಾಡಿಸು, ಕತ್ತರಿಸಿಸು

कटार– पु एक तरहका दुधारा हथियार। ಕಟಾರಿ, ಚಿಕ್ಕ ಕತ್ತಿ.

कटारिया– पु. एक प्रकार का रेशमी वस्त्र। ಒಂದು ತರದ ರೇಷ್ಮೆ ಬಟ್ಟೆ.

कटारी– स्त्री. छोटा कटार। ಕಿರುಗತ್ತಿ, ಚಿಕ್ಕ ಕಠಾರಿ.

कटाव– पु. काटछाँट, बेलबूटे। ಕತ್ತರಿಸುವಿಕೆ, ಕೆತ್ತುವಿಕೆ, ಕೆತ್ತನೆ ಕೆಲಸ, ಕಸೂತಿ ಕೆಲಸ.

कटास– पु. वनबिलाव, कटार। ಕಾಡು ಬೆಕ್ಕು, ಕಟಾರಿ.

कटाह– पु. कडाह, कछुएकी खोपडी, सूर्य, नरक, कुआँ,ऊंचा टीला, नरक विशेष। ಕಡಾಯಿ, ಕೊಪ್ಪರಿಗೆ, ಆಮೆಯ ಚಿಪ್ಪು, ಸೂರ್ಯ, ನರಕ, ಬಾವಿ, ಮಣ್ಣಿನ ಗುಂಪು, ದಿನ್ನೆ, ನರಕ.

कटि, कटी– स्त्री. कमर। ನಡ,ಟೊಂಕ,

ಸೊಂಟ.

कटिबद्ध– वि तत्पर, तैयार । ತತ್ಪರ, ಸಿದ್ಧನಾದ, ಟೊಂಕ ಕಟ್ಟಿದ.

कटीला– वि. नुकीला, तीक्ष्ण,कॉटेदार । ಮೊಣಚಾದ, ಹದನ, ಮೊನೆಯುಳ್ಳ, ತೀಕ್ಷ್ಣ, ಮುಳ್ಳುಗಳುಳ್ಳ.

कटु,कटुक– वि कड़ुआ, अप्रिय, तीक्ष्ण, विरस । ಕಹಿಯಾದ, ಕಟುವಾದ, ಅಪ್ರಿಯ, ಸೇರದ, ತೀಕ್ಷ್ಣ, ವಿರಸವಾದ.

कटैया– पु काटनेवाला । ಕೊಯ್ಯುವವ, ಕಡಿಯುವವ.

कटोरदान– पु. पका हुआ भोजन रखनेका ढक्कनदार कटोरा । ಅನ್ನವನ್ನು ಇಡುವ ಮುಚ್ಚಳಿಕೆಯುಳ್ಳ ಪಾತ್ರೆ, ಊಟದ ಡಬ್ಬಿ.

कटोरा– पु. बड़ा प्याला । ಬೋಗುಣಿ, ದೊಡ್ಡ ಬಟ್ಟಲು, ಡಬರಿ, ಕೊಳಗದಪ್ಪಲೆ.

कटोरी– स्त्री. छोटा कटोरा, प्याली, तलवारकी मुठियाका उभड़ा हुआ गोल भाग । ಬಟ್ಟಲು, ಲೋಟಾ, ಕತ್ತಿಯ ಹಿಡಿಕೆಯ ಮೇಲಿನ ದುಂಡಾದ ಭಾಗ.

कटौती–स्त्री. किसी रकममें से कुछ अंश काट लेना । ಕಮೀಶನ್, ಧರ್ಮಾರ್ಥ ಅಥವಾ ಬೇರೆ ಕೆಲಸಕ್ಕಾಗಿ ಕೆಲವು ಹಣ ತೆಗೆದಿಡುವದು, ಪಟ್ಟಿ, ಉಪ್ಪಾರ.

कट्टर– वि. अंधविश्वासी, कार खानेवाला । ಹಟ ಮಾಡುವವ, ಛಲವಾದಿ, ಮತಾಂಧ, ಅಂಧ ವಿಶ್ವಾಸವುಳ್ಳವ, ಕಚ್ಚುವ, ಕಡಿಯುವ.

कट्टा– वि. बलवान, स्थूल, कड़ा । ಬಲವುಳ್ಳ, ಸ್ಥೂಲ, ಬಿರುಸಾದ. पु. जबड़ा । ದವಡೆ.

कट्ठा– पु. भूमिकी एक नाप, मोटा गेहूँ । ಭೂಮಿಯ ಒಂದು ಅಳತೆ, ದಪ್ಪ ಗೋದಿ.

कठकेला– पु जंगली केला । ಕಾಡುಬಾಳೆ.

कठकोला, कठफोड़वा– पु एक पक्षी । ಬಡಿಗನ ಹಕ್ಕಿ, ಮರಕುಟಿಗನ ಹಕ್ಕಿ.

कठगुलाब– पु. जंगली गुलाब । ಕಾಡು ಗುಲಾಬಿ ಹೂ.

कठघरा– पु दे 'कटघरा'।

कठड़ा– पु. दे 'कठरा'।

कठपुतली– स्त्री. लकड़ी की गुड़िया जिसमें तार बांधकर नचाते है, दूसरों के कहनेपर चलनेवाला पुरुष । ಸೂತ್ರದ ಗೊಂಬೆ, ಕಟ್ಟಿಗೆಯ ಗೊಂಬೆ, ಎರಡನೆಯವರು ಕುಣಿಸಿದಂತೆ ಕುಣಿಯುವವ.

कठफोड़वा, कठफोड़ा– पु. दे 'कठकोला'।

कठबाप– पु सौतेला पिता । ಮಲತಂದೆ.

कठमलिया– पु. झूठा संत । ಢೋಂಗಿ ಸಾಧು, ಕಪಟಿ ಸಾಧು

**कठमस्त**– वि. हट्टाकट्टा, व्यभिचारी। ಸುದೃಢ, 'ಗಟ್ಟಿಮುಟ್ಟ, ಲಂಪಟ, ವ್ಯಭಿಚಾರಿ.

**कठरा**–पु. काठ का बड़ा संदूक, कटघरा। ಮರದ ಪೆಟ್ಟಿಗೆ, ಪಂಜರ, ಕಟಾಂಜನ.

**कठला**– पु बच्चों के गलेकी माला। ಹುಡುಗರ ಕೊರಳೊಳಗಿನ ಮಾಲೆ, ತಾಯಿತ, ಕಂಠೀಸರ.

**कठवत**– स्त्री **कठवता**– पु. काठका बड़ा बरतन। ಕಟ್ಟಿಗೆಯ ದೊಡ್ಡ ಪಾತ್ರೆ, ಟಬ್ಬು.

**कठार**– पु. दे 'कटार'।

**कठारा**– पु नदी इत्यादिका किनारा। ನದಿ ಮುಂತಾದವುಗಳ ತೀರ.

**कठिन**– वि. कड़ा, कठोर, दुष्कर। ಬಿರುಸು, ಕಠೋರ, ಕಠಿಣ.

**कठिनाई**– स्त्री. कड़ाई, कठोरता, संकट। ಕಠೋರತೆ, ಬಿರುಸುತನ, ಸಂಕಟ, ತೊಂದರೆ.

**कठिया**– वि कड़े छिल्केका। ಬಿರುಸು ಸಿಪ್ಪೆಯ, ದಪ್ಪ ತೊಗಟೆಯ, ಕಠಿಣವಾದ.

**कठियाना**– अक्रि. कड़ा होना, सूखना। ಬಿರುಸಾಗು, ಒಣಗು, ಗಟ್ಟಿಯಾಗು.

**कठुआना, कठुवाना**– अक्रि सूखकर कड़ा होना, सर्दी से हाथ पैर ठिठुरना। ಒಣಗಿ ಬಿರುಸಾಗು, ಚಳಿಯಿಂದ ಕಾಲುಕೈ ಸೆಟೆ, ಬಿರುಸಾಗು, ಗಟ್ಟಿಯಾಗು.

**कठेठ, कठेठा**– पु कड़ा, पुष्ट। ಗಟ್ಟಿಯಾದ, ಬಲಿಷ್ಠ, ಪುಷ್ಟವಾದ.

**कठोर**– वि कठिन, निर्दय। ಕಠಿಣ, ಬಿರುಸು, ಒಣ, ನಿರ್ದಯ, ಕ್ರೂರ.

**कठौता**– पु. काठ का बड़ा बरतन। ಕಟ್ಟಿಗೆಯ ದೊಡ್ಡ ಪಾತ್ರೆ.

**कठौती**– स्त्री छोटा कठौता। ಮರದ ತಟ್ಟೆ, ಕಟ್ಟಿಗೆಯ ಸಣ್ಣ ಪಾತ್ರೆ.

**कड़कड़ाना**–अक्रि. कड़कड़ शब्द करना। ಕಡಕಡ ಶಬ್ದ ಮಾಡು, ಕಡಕಡ ಸಪ್ಪಳ ಮಾಡು, ಮುರಿ. सक्रि. खूब गरम करना। ಬಹಳವಾಗಿ ಕಾಯಿಸು.

**कड़कड़ाहट**– स्त्री. गर्जन, कठोर शब्द। ಗರ್ಜನೆ, ಕರ್ಕಶ ಧ್ವನಿ, ಕಡಕಡ ಶಬ್ದ.

**कड़कना**– अक्रि. दे. 'कड़कड़ाना'।

**कड़का, कड़खा**– पु. वीरो को उत्तेजित करनेवाला गीत। ವೀರ ಗೀತೆ, ರಣ ಗೀತೆ.

**कड़खैत**– पु. कड़खा गानेवाला। ವೀರ ಗೀತೆಗಳನ್ನು ಹಾಡುವವ, ಮಾಗಧಿ, ಚಾರಣ.

**कड़बी, कड़वी**–स्त्री. मकई और ज्वारके पौधे जो काटकर पशुओको खिलाये जाते हैं। ಜೋಳ ಅಥವಾ ಗೋಂಜೋಳದ ದಂಟು, ಕಣಿಕೆ.

**कड़वा**– वि. दे. 'कटु'।

**कड़ा**– वि कठोर, कठिन, उग्र, प्रचंड।

ಕಠೋರ, ಕಠಿಣ, ಬಿರುಸು, ಉಗ್ರ, ಪ್ರಚಂಡ. पु. कुण्डा, कंगन, या चूड़ा। ಚಿಲಕ, ಬಳೆ, ಕಡಗ, ಕೈಯೊಳಗಿನ ಕಡೆ.

कड़ाई– स्त्री. कटोरता। ಕಠೋರತೆ, ಬಿರುಸುತನ.

कड़ाका– पु. टूटनेका शब्द, लंघन। ಮುರಿಯುವ ಸಪ್ಪಳ, ಕಡಕಡ ಶಬ್ದ, ಉಪವಾಸ.

कड़ाकेका–वि. प्रचंड। ಪ್ರಚಂಡವಾದ, ವೇಗದ.

कड़ाह, कड़ाहा– पु. बड़ी कड़ाही। ಕಡಾಯಿ, ಕಾಯಲಿ, ಹುರಿಗಾವಲಿ.

कड़ाही– स्त्री. लोहे आदिका कुंडेदार छोटा गोल पात्र। ಕಡಾಯಿ.

कड़ी– स्त्री. जंजीरका छल्ला। ಕೊಂಡಿ, ಚಿಲಕದ ಬಳೆ, ಕೊಕ್ಕೆ, ಸರಪಣಿಯ ಕೊಂಡಿ.

कड़ीदार– वि. छल्लेदार। ಕೊಂಡಿಗಳುಳ್ಳ, ಗೊಣಸುಗಳುಳ್ಳ.

कड़ुआ– वि. कटु, तीखा, क्रोधी, अप्रिय। ಕಟುವಾದ, ಕಹಿಯಾದ, ತೀಕ್ಷ್ಣ, ಚುರುಕು, ಒಗರು, ಸಿಟ್ಟಿನ, ಅಪ್ರಿಯ.

—घूँट = कठिन कार्य । ಕಠಿಣವಾದ ಕೆಲಸ.

—कसैले दिन = कष्टके दिन। ಕಷ್ಟಕಾಲ, ಸಂಕಟಸಮಯ, ದುರ್ದಿನ.

कड़ुआना– अक्रि. कड़ुआ लगना। ಕಹಿ ಹತ್ತು, ಅಪ್ರಿಯವಾಗು, ಸಿಟ್ಟಿಗೇಳು, ಕಂಡರೆ ಆಗದಿರು.

कड़ुआहट– स्त्री. कड़ुआपन। ಕಹಿತನ, ಒಗರು, ಅಪ್ರಿಯತೆ.

कढ़ना– अक्रि. निकलना, उदय होना, खिचना, गाढा होना, अपने यारके साथ स्त्रीका भाग जाना। ಹೊರಡು, ಹುಟ್ಟು, ಏರು, ಹೊರಬೀಳು,ಎಳೆಯಲ್ಪಡು, ಹಿಂಡಲ್ಪಡು, ದಟ್ಟವಾಗು, ಘನೀಭೂತವಾಗು, ಉಪಪತಿಯ ಕೂಡ ಓಡಿಹೋಗು.

कढ़राना, कढ़लाना– सक्रि. घसीटना। ಎಳೆ, ಎಳೆದು ಹೊರಗೆ ಹಾಕು.

कढ़वाना, कढ़ाना– सक्रि निकलवाना। ಹೊರಗೆ ಹಾಕಿಸು, ಎಳೆಯಿಸು, ಹೊರಗೆಳೆ.

कढ़ाव– पु. बेलबूटेका काम। ಸೂಜಿಶಿಲ್ಪ, ಕಸೂತಿ, ಕುಸುರಿನ ಕೆಲಸ.

कढ़ी– स्त्री. एक प्रकारका सालन। ಒಂದು ಪ್ರಕಾರದ ಹುಳಿ ಸಾರು, ಪಳದ್ಯ.

कढ़ोरना, कढ़ोलना– सक्रि घसीटना, खींचना। ಎಳೆ, ಜಗ್ಗು, ಹಿಂಡು.

कत, कतक– क्रिवि. क्यों, किसलिये, किसतरह। ಯಾಕೆ, ವ್ಯಾಗೆ, ಯಾವ ಕಾರಣದಿಂದ.

कत– पु. कलमका अग्रभाग। ಲೆಕ್ಕಣಿಕೆಯ ತುದಿ.

क़तई– अव्य. बिल्कुल, पूरा। ಆಗದೀ, ಹೀರ, ಸುತರಾಂ, ಪೂರಾ.

**कतना**– अक्रि. काता जाना । ನೂಲಲ್ಪಡು. क्रिवि. दे 'कितना'।

**कतरछाँट**– स्त्री. काटछाँट । ಕತ್ತರಿಸುವಿಕೆ, ಸಣ್ಣದಾಗಿ ಮಾಡುವಿಕೆ, ಮಿತವ್ಯಯ.

**कतरन**– स्त्री. काटछाँट के बाद बचे हुए कागज या कपड़ेके टुकड़े । ಅರಿವೆ ಅಥವಾ ಕಾಗದು ಕತ್ತರಿಸಿದಮೇಲೆ ಉಳಿದ ಚೂರುಗಳು.

**कतरना**– सक्रि. कैंचीसे काटना । ಕತ್ತರಿಸು, ಕೆತ್ತು, ಹೆಚ್ಚು, ತುಂಡು ಮಾಡು.

**कतरनी**– स्त्री कैंची । ಕತ್ತರಿ.

**कतरब्यौंत**– स्त्री काटछाँट, युक्ति, सोचविचार । ಕತ್ತರಿಸುವಿಕೆ, ಕಡಿತ, ಮಿತವ್ಯಯ, ಯುಕ್ತಿ, ವಿಚಾರ, ಆಲೋಚನೆ.

**कतरवाना**– सक्रि. दे 'कतराना'।

**कतरा**– पु टुकडा । ತುಂಡು, ಚೂರು.

**क़तरा**– पु. बूँद । ಹನಿ.

**कतराई**–स्त्री कतरनेका काम, कतरनेका पारिश्रमिक । ಕತ್ತರಿಸುವ ಕೆಲಸ, ಕತ್ತರಿಸುವ ಕೂಲಿ.

**कतराना**– सक्रि कतरवाना, कटवाना। ಕತ್ತರಿಸುವ ಕೆಲಸ ಎರಡನೆಯವರಿಂದ ಮಾಡಿಸು, ಕಡಿಯಿಸು. अक्रि बचकर निकल जाना । ಗೊತ್ತಾಗದಂತೆ ಹೋಗಿ ಬಿಡು, ಕಣ್ಣಿಗೆ ಬೀಳದಂತೆ ಹೋಗಿ ಬಿಡು, ಜಾರಿಕೊಳ್ಳು, ತಪ್ಪಿಸಿಕೊಳ್ಳು.

**क़तल, क़त्ल**– पु हत्या । ವಧೆ, ಹತ್ಯೆ, ಕೊಲ್ಲುವಿಕೆ.

**क़तलबाज**– पु संहार करनेवाला । ಕೊಲ್ಲುವವ, ಸಂಹರಿಸುವವ.

**कतवाना**– सक्रि. 'कातना' का प्रे. रूप । ನೂಲಿಸು.

**कतवार**–पु. कूडा करकट । ಹೊಲಸು, ಕಸ, ನಿರರ್ಥಕ ವಸ್ತು, ಕಸಕಡ್ಡಿ. वि कातनेवाला । ನೂಲುವವ.

—**खान**= पु कूड़ा करकट फेकनेका गड्ढा । ತಿಪ್ಪೆಗುಂಡಿ.

**कतहुँ, कतहूँ**– क्रिवि. कहीं । ಎಲ್ಲಿಯಾದರೂ, ಯಾವದೊಂದು ಸ್ಥಳದಲ್ಲಿ.

**कता**– स्त्री आकार, काटछाँट, ढंग, पंक्ति । ಆಕಾರ, ನಿಲುವಿಕೆ, ತುಂಡು, ರೀತಿ, ಸಾಲು, ಶ್ರೇಣಿ.

**कताई**– स्त्री कातने का काम, कातने की मजदूरी । ನೂಲುವ ಕೆಲಸ, ನೂಲುವ ಕೂಲಿ.

**कताना**– सक्रि. दूसरेसे कातनेका काम कराना । ನೂಲುವ ಕೆಲಸ ಎರಡನೆಯವರಿಂದ ಮಾಡಿಸು.

**क़तार**– स्त्री पंक्ति, श्रेणी, समूह । ಸಾಲು, ಶ್ರೇಣಿ, ಕ್ರಮ, ಸಮೂಹ.

**कतारा**–पु. एक प्रकार की लाल छिलके की मोटी ईख । ಒಂದು ತರದ ಕೆಂಪು ಸಿಪ್ಪೆಯ ಕಬ್ಬು, ಕಾಂತಾರ ಕಬ್ಬು.

**कति**–वि कितने, कौन, बहुत । ಎಷ್ಟು,

खौरना–सक्रि चंदनका तिलक लगाना। ಹಣೆಗೆ ಚಂದನ ಹಚ್ಚಿಕೊಳ್ಳು, ತಿಲಕ ಹಚ್ಚು.

खौरहा– वि. खौरा रोगवाला, गंजा। ಕೂದಲು ಉದುರುವ ರೋಗವುಳ್ಳ, ಕೂದಲಿಲ್ಲದ. ಬೋಳ.

खौरा– पु. एक चर्म रोग जिसमें बाल गिर जाते हैं। ಕೂದಲು 'ಉದುರಿ ಹೋಗುವ ಒಂದು ಚರ್ಮರೋಗ. वि. 'खौरहा'।

खौरी– स्त्री. स्त्रीयोके सिरका एक गहना, चदनका तिलक। ಸ್ತ್ರೀಯರು ತಲೆಯ ಮೇಲೆ ಧರಿಸುವ ಒಂದು ಆಭರಣ, ಚಂದನದ ಬೊಟ್ಟು, ತಿಲಕ

खौलना– अक्रि उबलना जोश खाना। ಕುದಿ, ಉಕ್ಕು, ಸಳಮಳಿಸು, ಆವೇಶಬರು.

खौलाना– सक्रि उबालना, गरम करना। ಕಾಯಿಸು, ಮರಳಿಸು, ಕುದಿಸು.

खौहा– वि पेटू, दूसरोंकी कामईपर निर्वाह करनेवाला। ಹೊಟ್ಟೆಬಾಕ, ಎರಡನೆಯವರ ಗಳಿಕೆಯ ಮೇಲೆ ಹೊಟ್ಟೆ ತುಂಬಿಕೊಳ್ಳುವವ.

ख्यात–वि प्रसिद्ध। ಪ್ರಸಿದ್ಧ, ವಿಖ್ಯಾತ.

ख्याल– पु ध्यान, विचार, मत, आदर, खेल, हँसी। ಧ್ಯಾನ, ಗಮನ, ವಿಚಾರ, ಮತ, ಆದರ, ಕ್ರೀಡೆ, ಆಟ, ವಿನೋದ.

ख्याली– वि. कल्पित, खेल करनेवाला। ಕಲ್ಪಿತ, ಊಹೆಯ, ಆಟಗಾರ.

—पुलाव=हवामें पुल बांधना। ಮನಸ್ಸಿನ ಮಂಡಿಗೆ, ಅಸಂಭವವಾತು.

ख्वाजा– पु सरदार, मालिक, प्रतिष्ठित व्यक्ति, फकीर, हिजड़ा नौकर। ಸರದಾರ, ಒಡೆಯ, ಯಜಮಾನ, ಮುಖಂಡ, ಪ್ರತಿಷ್ಠಿತ ವ್ಯಕ್ತಿ, ಮುಸಲ್ಮಾನ ಸಾಧು, ಅಂತಃಪುರದ ನಪುಂಸಕ ನೌಕರ.

ख़्वान–पु वडी थाली। ದೊಡ್ಡ ತಾಟು, ಊಟದ ತಟ್ಟೆ.

ख्वाब– पु. स्वप्न, सोना। ಸ್ವಪ್ನ, ಕನಸು, ನಿದ್ದೆ.

ख्वार– वि. खराब, तिरस्कृत। ಕೆಟ್ಟ, ನಷ್ಟವಾದ, ಹಾಳಾದ, ತಿರಸ್ಕೃತ.

ख्वाह– वि इच्छुक (जैसे-तरक्की-ख्वाह) ಇಚ್ಛುಕ. स्त्री इच्छा। ಇಚ್ಛೆ. अव्य. या, या तो। ಅಥವಾ, ಇಲ್ಲವಾದರೆ.

ख़्वाह-मख़्वाह– क्रिवि. चाहे इच्छा हो या न हो, अवश्य, जरूर। ಇಚ್ಛೆ ಇರಲಿ ಇಲ್ಲದಿರಲಿ, ಅವಶ್ಯವಾಗಿ, ಸುಮ್ಮಸುಮ್ಮನೆ.

ख्वाहाँ– वि चाहनेवाला, इच्छुक। ಇಚ್ಛಿಸುವವ, ಅಪೇಕ್ಷಕ, ಬಯಸುವವ, ಅನುರಾಗಿ

ख्वाहिश–स्त्री इच्छा, अभिलाषा। ಇಚ್ಛೆ, ಬಯಕೆ, ಅಭಿಲಾಷೆ, ಆಕಾಂಕ್ಷೆ.

ख्वाहिशमद– वि इच्छुक, अभिलाषी। ಇಚ್ಛಿಸುವವ, ಅಪೇಕ್ಷಕ, ಬಯಸುವವ.

ಮದುವೆಯಲ್ಲಿ ವಧೂವರರ ಉಡಿಗೆಗಳ ಅಂಚು ಕೂಡಿಸಿ ಗಂಟು ಹಾಕುವದು.

**गंड**– पु. कपोल, फोडा, गाँठ। ಗಲ್ಲ, ಕೆನ್ನೆ, ಹುಣ್ಣು, ಗಂಟು.

**गंडा**– पु. गाँठ, चारका समूह, अभिमंत्रित तागा,तावीज, ऊख।ಗಂಟು, ನಾಲ್ಕರ ಸಮೂಹ, ಮಂತ್ರದ ದಾರ, ತಾಯಿತ, ರಕ್ಷೆ, ಕಬ್ಬು.

**गँडासा**– पु. चारा काटनेका अस्त्र। ಕುಡಗೋಲು.

**गँडासी**– स्त्री. छोटा गँडासा। ಚಿಕ್ಕ ಕುಡಗೋಲು.

**गँडेरी**– स्त्री. ईखका छोटा टुकडा। ಕಬ್ಬಿನ ತುಂಡು.

**गंतु, गंतुक**– पु पथिक। ಹಾದಿಕಾರ, ಹೋಗುವವ.

**गंदगी**– स्त्री. मैल, मैलापन।ಹೊಲಸು, ಮಲ, ಕೊಳೆ, ಕೊಳಕು,ಮಲಿನತೆ.

**गंदना**– पु. एक मसाला। ಬೆಳ್ಳುಳ್ಳಿ.

**गंदला**– वि. मैला, गंदा। ಹೊಲಸು, ಮಲಿನವಾದ, ಕೊಳಕಾದ.

**गंदा**– वि. मैला,अशुद्ध। ಹೊಲಸಾದ, ಕೊಳೆಯಾದ, ಅಶುದ್ಧವಾದ.

**गंदुम**– पु. गेहूँ। ಗೋಧಿ.

**गंध**– पु. महँक। ಸುಗಂಧ, ವಾಸನೆ, ಪರಿಮಳ.

**गंधकी**– वि. हलके पीले रंगका। ತಿಳಿ ಹಳದಿ ಬಣ್ಣದ.

**गंधाना**– सक्रि दुर्गंधित करना, महँकाना। ನಾರಿಸು, ದುರ್ಗಂಧಿತ ಮಾಡು, ಪರಿಮಳ ಕೊಡು.

**गंधी**– पु. अत्तार, एक घास, एक कीडा। ಅತ್ತರು ಮಾರುವವ, ಸುಗಂಧ ದ್ರವ್ಯದ ವ್ಯಾಪಾರಿ, ಒಂದು ತರದ ಹುಲ್ಲು, ಒಂದು ಹುಳು.

**गंधीला**– वि दे 'गंदला'।

**गंभीर**– वि. गहरा, घना, शात। ಆಳವಾದ, ದಟ್ಟವಾದ, ಗಂಭೀರ, ಶಾಂತ, ಪ್ರಶಾಂತ.

**गँव**– स्त्री. अवसर, मतलब, युक्ति। ಅವಕಾಶ, ಸಂಧಿ, ವೇಳೆ,ಸಮಯ, ಹೇತು, ಉದ್ದೇಶ, ಉಪಾಯ, ಯುಕ್ತಿ.

**गँवई**– स्त्री. छोटा गाव। ಸಣ್ಣ ಹಳ್ಳಿ. वि ग्रामीण। ಹಳ್ಳಿಯ,ಹಳ್ಳಿಗಾಡ.

**गँवरमसला**– पु. ग्रामीण लोगोंकी कहावत। ಹಳ್ಳಿಯ ಜನರ ಗಾದೆಯ ಮಾತು.

**गँवाना**–सक्रि. खोना, भूलना, बिताना। ಕಳಕೊಳ್ಳು, ದುಂದು ಮಾಡು, ಮರೆ, ಕಾಲಕಳೆ.

**गँवार**– पु. देहाती, बेवकूफ। ಹಳ್ಳಿಗಾಡ, ಮೂರ್ಖ, ಗಾವಿಲ, ಹೆಡ್ಡ, ಅನಾಗರಿಕ, ಪಾಮರ.

**गँवारी**– स्त्री गँवारपन, मूर्खता, गँवार स्त्री.। ಮೂರ್ಖತನ, ಹೆಡ್ಡತನ, ಅನಾಗರಿಕತೆ, ಅಡ್ನಾಡಿತನ, ಹಳ್ಳಿಗಾಡ ಸ್ತ್ರೀ, ಅಸಭ್ಯ ಸ್ತ್ರೀ.

**गँवारू**– वि ग्रामीण, बेढगा। ಹಳ್ಳಿ

ಗಾಡ, ಗಾವಿಲ, ಕಾಡು, ಕುರೂಪ.

गंवेली– स्त्री. गॅवार स्त्री । ಮೂರ್ಖ ಅಥವಾ ಹಳ್ಳಿಗಾಡ ಸ್ತ್ರೀ.

गॅस–पु द्वेष, कुटिलता, ताना । ದ್ವೇಷ, ವೈರತ್ವ, ಕುಟಿಲತೆ, ವ್ಯಂಗ್ಯ. स्त्री. तीरकी नोक । ಬಾಣದ ತುದಿ, ಅಂಬಿನ ಮೊನೆ

गॅसना– सक्रि. जकड़ना, भरना । ಬಿಗಿಯಾಗಿ ಕಟ್ಟು, ತುಂಬು. अक्रि. खूब भरना । ಪೂರ್ಣವಾಗಿ ತುಂಬು, ಒತ್ತಾಗಿರು.

गंसीला– वि नोकदार, ठोस, गॅसा हुआ । ಮೊನೆಯುಳ್ಳ, ಚೂಪಾದ, ಗಟ್ಟಿಯಾದ, ಗಟ್ಟಿಯಾಗಿ ತುಂಬಿದ, ಬಿಗಿಯಾಗಿ ಕಟ್ಟಿದ.

गइंद– पु. गजेंद्र । ಗಜೇಂದ್ರ.

गई करना– अक्रि जाने देना, विचार न करना । ಬಿಡು, ಹೋಗಗೊಡು, ವಿಚಾರ ಮಾಡದಿರು.

गईबहोर–वि. खोई वस्तुको दे देनेवाला, बिगडीको बनानेवाला। ಕಳೆದ ವಸ್ತುವನ್ನು ತಿರುಗಿ ಕೊಡುವವ, ಕೆಟ್ಟದ್ದನ್ನು ಸರಿ ಪಡಿಸುವವ.

गउ– स्त्री. गाय । ಆಕಳು, ಹಸು.

गगन–पु. आकाश। ಆಕಾಶ,ಮುಗಿಲು.

—, फूल = अगक्य काम । ಆಕಾಶ ಕುಸುಮ, ಅಶಕ್ಯ ಕೆಲಸ.

गगनचर– पु आकाशगामी, पक्षी, ग्रह इत्यादि । ಆಕಾಶದಲ್ಲಿ ಸಂಚರಿಸುವವರು, ಪಕ್ಷಿ, ಗ್ರಹ ಮುಂ.

गगनचुंबि, गगनचुंबी– वि. दे 'गगनस्पर्शी'।

गगनस्पर्शी– वि. आकाशको छूनेवाला। ಆಕಾಶವನ್ನು ಮುಟ್ಟುವ, ಅತ್ಯಂತ ಎತ್ತರವಾದ.

गगरा–पु घड़ा। ಕೊಡ,ಕಲಶ,ಬಿಂದಿಗೆ

गगरिया,गगरी– स्त्री. छोटा घड़ा ।ಸಣ್ಣ ಕೊಡ, ಬಿಂದಿಗೆ, ಕೊಡಪಾನ.

गच–पु चूने सुरखी का मसाला जिससे फर्श बनाया जाता है, पक्का फर्श । ಗಚ್ಚು, ಗಾರೆ, ಕಲ್ಲು ಗಚ್ಚಿನ ನೆಲಗಟ್ಟು.

गचकारी, गचगीरी– स्त्री. चूने सुरखीका काम । ಗಚ್ಚು, ಗಾರೆಯ ಕೆಲಸ.

गचना–सक्रि. खूब कसके भरना । ಒತ್ತಿ ತುಂಬು, ತುರುಕು, ಜಡಿ.

गच्छना, गछना– अक्रि. चलना । ನಡೆ, ಹೋಗು. सक्रि. निवाहना,चलाना, गूंथना । ನಿರ್ವಹಿಸು, ನಡೆಯಿಸು, ಹೆಣೆ.

गज़– पु. तीन फुट के बराबर माप । ಗಜ, ಮೂರಡಿಯ ಅಳತೆ.

गज़क– स्त्री. वह चीज जो शराब पीनेके बाद मुँहका स्वाद बदलने के लिये खाई जाती है, जलपान । ನೆರೆ ಕುಡಿದ ಮೇಲೆ ಬಾಯಿಯ ರುಚಿಯನ್ನು ಬದಲಿಸುವ ಸಲುವಾಗಿ ತಿನ್ನುವ ಪದಾರ್ಥಗಳು. (ಹಪ್ಪಳ,ಭಜಿ, ಮುಂ.) ಫಲಹಾರ.

गजगाह– पु हाथिकी झूल, हाथी घोड़े

का गहना । ಆನೆಯ ಝೂಲು, ಆನೆಯ ಮೇಲೆ ಶೃಂಗಾರಕ್ಕಾಗಿ ಹಾಕುವ ಅರಿವೆ, ಆನೆ ಕುದುರೆಗಳ ಆಭರಣ.

**गजनाल**– पु एक तरहका तोप। ಆನೆಗಳಿಂದ ಎಳೆಯಲ್ಪಡುವ ತೋಪು

**ग़ज़ब**– पु आपत्ति, अँधेरा, विलक्षण बात, कोप। ವಿಪತ್ತು, ಸಂಕಟ, ಅತ್ಯಾಚಾರ, ಬಲಾತ್ಕಾರ, ಅದ್ಭುತ ಸಂಗತಿ, ಕೋಪ, ಸಿಟ್ಟು

**ग़ज़बनाक**– वि. बहुत क्रुद्ध। ಬಹಳ ರೇಗಿದ, ಅತಿ ಕೃದ್ಧನಾದ.

**गजर**– पु घंटेकी आवाज। ತಾಸು ತಾಸಿಗೆ ಹೊಡೆಯುವ ಗಂಟೆಯ ಧ್ವನಿ, ಗಡಿಯಾಳದ ಗಂಟೆ, ಮುಂಜಾನೆಯ ಗಂಟೆ.

**गजरदम**– अव्य तड़के। ನಸುಕಿನಲ್ಲಿ, ಬೆಳಗು ಮುಂಜಾನೆ.

**गजरबजर**– वि अंडवंड। ಅಡ್ಡತಿಡ್ಡ, ಅಸ್ತವ್ಯಸ್ತ.

**गजरा**– पु घनी गुँथी हुयी फूलमाला, गाजर, कलाई में पहननेका एक आभूषण, एक रेशमी वस्त्र। ದಟ್ಟವಾಗಿ ಹೆಣೆದ ಹೂವಿನ ಮಾಲೆ, ಕೆಂಪು ಮೂಲಂಗಿ, ಗಜ್ಜರಿ, ಕೈಬಳೆ, ಒಂದು ತರದ ರೇಷ್ಮೆ ವಸ್ತ್ರ.

**गजल**– स्त्री. फारसी और उर्दू में एक प्रकार की कविता। ಫಾರಸಿ ಮತ್ತು ಉರ್ದೂ ಭಾಷೆಗಳಲ್ಲಿ ಒಂದು ತರದ ಕಾವ್ಯ, ಶೃಂಗಾರ ಕಾವ್ಯ.

**गजा**– पु नगाडा बजानेका डंडा। ನಗಾರಿ ಬಾರಿಸುವ ಕೋಲು.

**गज़र**– पु. दलदल। ಕೆಸರು, ಜವುಳು ನೆಲ, ಹುದಿಲು, ಜವುಗು.

**गझिन**– वि मोटा, घनी बुनावटवाला। ದಪ್ಪ, ದಪ್ಪವಾಗಿ ಹೆಣೆದ, ದಟ್ಟಾಗಿ ಹೆಣೆದ, ನಿಬಿಡ, ಧಡೂತಿ.

**गटई, गटइया**– स्त्री गर्दन। ಕುತ್ತಿಗೆ, ಕೊರಳು.

**गटकना**– सक्रि निगलना। ನುಂಗು, ತಿಂದುಬಿಡು, ಅಪಹರಿಸು.

**गटकौला**– वि. गटकनेवाला। ನುಂಗುವವ, ತಿನ್ನುವವ.

**गटपट**– स्त्री. सहवास, मिलावट। ಸಹವಾಸ, ಭೋಗ, ಬೆರಕೆ, ಅತಿ ಸ್ನೇಹ, ಸಂಗ.

**गटी**– स्त्री गाँठ, समूह। ಗಂಟು, ಗ್ರಂಥಿ, ಸಮೂಹ.

**गट्टा**– पु कलाई, गाँठ, बीज। ಮಣಿಕಟ್ಟು, ಗಂಟು, ಗಣಿಕೆ, ಗ್ರಂಥಿ. ಬೀಜ,

**गट्ठर**–पु. बडी गठरी। ದೊಡ್ಡ ಗಂಟು, ಮೂಟೆ, ಹೊರೆ.

**गट्ठा**–पु. बडी गठरी। ದೊಡ್ಡ ಗಂಟು, ಮೂಟೆ.

**गट्ठी**– स्त्री दे 'गठरी'।

**गठन**–स्त्री. बनावट। ರಚನೆ, ಮೈಕಟ್ಟು.

**गठना**– अक्रि मेल होना, जुडना, अनुकूल होना, संभोग करने के लिये जुटना। ಕೂಡು, ಹೊಂದು, ಗೆಳೆ-

ತನವಾಗು, ಅನುಕೂಲವಾಗು, ವಶವಾಗು, ಸಂಭೋಗಕ್ಕಾಗಿ ಕೂಡು, ಗಂಟು ಬೀಳು.

**गठबंधन**– पु. दे 'गॅठजोडा'।

**गठरी**– स्त्री. पोटली। ಗಂಟು, ಬಚ್ಚಿಟ್ಟ ಹಣ.

**—मारना** = किसीका धन छल करके हर लेना। ಮೋಸದಿಂದ ಹಣ ಎತ್ತಿ ಹಾಕು.

**गठवाना**– सक्रि जुडवाना, सिलवाना। ಕೂಡಿಸು, ಸಂಧಿಸು, ಹೊಲಿಯಿಸು.

**गटिया**– स्त्री. गठरी, खुरजी, वातरोग विशेष। ಗಂಟು, ಕಂಟಲಿ, ಹಸಿಬೆ, ಚೀಲ, ಒಂದು ತರದ ವಾಯು ರೋಗ, ಸಂಧಿವಾತ.

**गठियाना**– सक्रि गॅाठ बांधना। ಗಂಟು ಹಾಕು, ಗಂಟುಕಟ್ಟು, ಕೂಡಿಸು.

**गठीला**– वि गॅाठयुक्त, दृढ़। ಗಂಟುಗಳುಳ್ಳ, ದೃಢ, ಶಕ್ತಿಶಾಲಿಯಾದ, ಬಲವುಳ್ಳ, ಗಟ್ಟಿಮುಟ್ಟಾದ.

**गठौत, गठौती**– स्त्री. दोस्ती, षड्यंत्र। ಗೆಳೆತನ, ಮಿತ್ರತ್ವ, ಸಂಬಂಧ, ತಂತ್ರ.

**गडंगिया**– वि. घमंडी। ಅಭಿಮಾನಿ, ಸೊಕ್ಕಿನ.

**गडकाना**– सक्रि. डुबाना। ಮುಳುಗಿಸು.

**गडगडाना**– अक्रि गरजना। ಗರ್ಜಿಸು, ಗಡಗಡ ಶಬ್ದ ಮಾಡು. सक्रि. (हुक्का) पीना। ಸೇದು.

**गडगडाहट**– स्त्री गर्जन। ಗರ್ಜನೆ, ಗಡಗಡ ಶಬ್ದ.

**गड़ना**– अक्रि. चुभना, धॅसना, पीडा करना, स्थिर होना, मिट्टीके नीचे दबना। ಚುಚ್ಚು, ಒಳಸೇರು, ನೋವು ಮಾಡು, ಸ್ಥಿರವಾಗು, ತಳಕ್ಕೆ ಹೋಗು, ಒತ್ತಲ್ಪಡು, ಮಣ್ಣಿನಲ್ಲಿ ಮುಚ್ಚು.

**गड़प**– स्त्री. पानीमें किसी वस्तुका गिरनेका शब्द। ನೀರಿನಲ್ಲಿ ಏನಾದರೂ ಬಿದ್ದರೆ ಆಗುವ ಸಪ್ಪಳ, ಗಬಕ್, ಗುಟುಕ್.

**गड़पना**– सक्रि निगलना। ತಿಂದು ಹಾಕು, ನುಂಗು, ಮೋಸದಿಂದ ಎತ್ತಿಹಾಕು.

**गडप्पा**– पु. गड्ढा। ತಗ್ಗು, ಕೊರಕಲು, ಗುಣಿ.

**गडबड़**–वि. अनियमित, अंडबंड, ऊबड खावड। ಅನಿಯಮಿತ, ಅಸ್ತವ್ಯಸ್ತ, ತಗ್ಗುದಿನ್ನೆಯಾದ. स्त्री. अव्यवस्था, उपद्रव। ಅವ್ಯವಸ್ಥೆ, ಗಡಿಬಿಡಿ, ಗಲಭೆ, ಉಪದ್ರವ, ಗಲಾಟೆ.

**गडबडझाला**– पु गडबडी। ಉಪದ್ರವ, ಗಲಭೆ, ಅವ್ಯವಸ್ಥೆ.

**गडबडाना**– अक्रि. गडबडीमें पड़ना। ವ್ಯಾಕುಲನಾಗು, ಗಾಬರಿಯಾಗು, ಕಂಗೆಡು. सक्रि. गड़बड करना। ಉಪದ್ರವ ಕೊಡು, ತ್ರಾಸ ಕೊಡು, ಗಾಬರಿ ಮಾಡು, ಕಂಗೆಡಿಸು.

**गडबडिया**– वि गड़बड़ करनेवाला। ಉಪದ್ರವಿ, ಗಲಭೆಖೋರ.

**गड़बडी**– स्त्री दे. ' गड़बड़ ' ।

**गड़रिया**– पु. दे ' गडेरिया ' ।

**गड़वाना**– सक्रि ' गड़ना ' का प्रे. रूप ।

**गडहा**– पु. गड्ढा । ಕುಣಿ, ತಗ್ಗು, ಹೊಂಡ, ಗುಂಡಿ.

**गडही**–स्त्री. छोटा गड़हा। ಚಿಕ್ಕಹೊಂಡ.

**गड़ा**– पु. ढेर । ಗುಂಪು, ರಾಶಿ, ಸಮೂಹ.

**गडाना**–सक्रि. चुभाना, गडनेमें लगाना। ಚುಚ್ಚಿಸು, ಇರಿಸು, ತಿವಿಸು, ಹುಗಿಸು, ನೆಡಿಸು.

**गडाप**– पु दे. ' गड़प ' ।

**गड़ापा**– पु. गहरा स्थान । ಆಳವಾದ ಸ್ಥಳ.

**गडायन**– वि. चुभनेवाला । ಚುಚ್ಚುವ, ಇರಿಯುವ.

**गडारी**– स्त्री. पहिया, घेरा, घिरनी । ಗಾಲಿ, ವೃತ್ತ, ವಲಯ, ಬಳೆ, ಗಡಗಡೆ.

**गडारीदार**– वि. घेरेदार, धारीदार । ವಲಯುಗಳುಳ್ಳ, ಉದ್ದ ಗೆರೆಗಳುಳ್ಳ, ಗೀರಿನ.

**गडियार**– वि. सुस्त। ಆಲಸಿ,ಮೈಗಳ್ಳ.

**गडुआ, गडुवा**– पु. लोटा। ಚೆಂಬು, ಗಿಂಡಿ, ಹೂಜಿ.

**गडेरिन**– स्त्री. गडरियेकी स्त्री । ಕುರುಬನ ಹೆಂಡತಿ, ಕುರುಬಗಿತ್ತಿ.

**गडेरिया**– पु. मेड़ पालनेवाली जाति । ಕುರುಬ.

**गडोना**– सक्रि दे. ' गडाना ' ।

**गडौना**– पु. काँटा, एक प्रकारका मीठा पान । ಮುಳ್ಳು, ಒಂದು ತರದ ವೀಳೆದೆಲೆ.

**गड्ड**– पु. ढेर, गड्ढा । ಸಮೂಹ, ರಾಶಿ, ತಗ್ಗು.

**गड्डवड्ड, गड्डमड्ड**– पु घोलमेल । ಕಲಬೆರಿಕೆ.

**गड्डरिका**– पु. गडरिया । ಕುರುಬ.

**गड्डी**– स्त्री. ढेर, राशि । ಗುಂಪು, ರಾಶಿ, ಸಮೂಹ, ಗುಡ್ಡೆ.

**गड्ढा**– पु. गर्त । ತಗ್ಗು, ಹೊಂಡ, ಗುಂಡಿ, ಹಳ್ಳ.

**गढंत**– वि. कल्पित । ಕಲ್ಪಿತ, ಬನಾವಟಿ. स्त्री. कल्पित वार्ता । ಕಲ್ಪಿತ ಸುದ್ದಿ.

**गढ़**– पु. किला, खाई । ಕೋಟೆ, ದುರ್ಗ, ಕಂದಕ.

**गढ़त, गढ़न**– सक्रि. अकृति, बनावट, गठन । ಆಕೃತಿ, ರಚನೆ, ಮೈಕಟ್ಟು.

**गढना**–सक्रि बनाना, रचना । ರಚಿಸು, ಮಾಡು, ನಿರ್ಮಿಸು, ತಯಾರಿಸು, ರೂಪಗೊಳಿಸು, ಕಲ್ಪಿಸು, ದುರಸ್ತಿ ಮಾಡು.

**गढ़पति, गढ़पाल**– पु राजा, किलादार । ಅರಸು, ದುರ್ಗರಕ್ಷಕ.

**गढ़वार, गढवाल**– पु. दे. ' गढपति '। एक प्रदेश । ಸಂಯುಕ್ತ ಪ್ರಾಂತದ ಪಶ್ಚಿಮ ಭಾಗ,

**गढा**– पु गड्ढा । ತಗ್ಗು, ಹೊಂಡ, ಗುಂಡಿ, ಕುಣಿ.

ವ್ಯಾಧಿ, ರೋಗ, ವಿಷ, ಒಂದು ಮಂಗ, ಒಬ್ಬ ಅರಸು, ಶ್ರೀಕೃಷ್ಣನ ಸಣ್ಣ ತಮ್ಮನ ಹೆಸರು.

**गदकारा**–वि मुलायम। ಮೃದುವಾದ, ಮೆತ್ತಗಿರುವ, ನುಣುಪಾದ.

**गदगद**– वि गद्गद। ಬಹಳ ಆನಂದಿತ, ಪುಲಕಿತ, ಬಹಳ ಆನಂದವಾಗಿ ಬಾಯಿಂದ ಮಾತು ಹೊರಡದಿರುವ.

**गदना**– सक्रि. कहना। ಹೇಳು.

**ग़दर**– पु. बगावत, उपद्रव। ಗಲಭೆ, ಬಂಡಾಯ, ವಿದ್ರೋಹ, ಕ್ರಾಂತಿ, ಉಪದ್ರವ.

**गदराना**– अक्रि. पकनेपर होना, परिपुष्ट होना, आँख आनेपर होना। ಪಕ್ವಾವಸ್ಥೆಯನ್ನು ಸಮೀಪಿಸು, ಮೈತುಂಬಿ ಬರು, ಮೈನೆರೆ, ಕಣ್ಣು ಬರು.

**गदला**– वि. मैला। ಹೊಲಸು.

**गदलाना**– अक्रि. मैला होना। ಹೊಲಸಾಗು, ಮಾಸು. सक्रि मैला करना। ಹೊಲಸು ಮಾಡು

**गदहपचीसी**– वि. जवानीकी उम्र। ತಾರುಣ್ಯದ ಹುಚ್ಚಾವಸ್ಥೆ.

**गदहपन**– पु मूर्खता। ದಡ್ಡತನ, ಮೂರ್ಖತನ.

**गदहा**– पु. गधा, वैद्य। ಕತ್ತೆ, ವೈದ್ಯ. वि. मूर्ख। ಮೂರ್ಖ.

**गदाई**–वि. क्षुद्र, खराब। ಕ್ಷುದ್ರ, ಕೆಟ್ಟ, ಹೀನ, ತುಚ್ಛ. स्त्री. फ़कीरी। ಭಿಕ್ಷಾವೃತ್ತಿ.

**गदेरी**– स्त्री. दे. 'गदोरी'।

**गदेला**– पु. गद्दा, बच्चा। ಗಾದಿ, ಮಗು, ಹುಡುಗ

**गदोरी**– स्त्री. हथेली। ಅಂಗೈ.

**गद्गद**– वि प्रेमादिके आवेशसे पूर्ण। ಪ್ರೇಮದಿಂದ ಆವೇಶ ಪೂರ್ಣವಾದ, ಗದ್ಗದಿತ.

**गद्दर**– पु मोटा गद्दा। ದಪ್ಪ ಗಾದಿ. वि अधपका। ಅರ್ಧಮರ್ದ ಪಕ್ವವಾದ

**गद्दा**–पु रूई आदि भरा हुआ बिछौना, घास, रूई आदिका बोझा, किसी कोमल पदार्थ पर मार। ದಪ್ಪಗಾದಿ, ಸುಪ್ಪತ್ತಿಗೆ, ರಜಾಯಿ, ಹುಲ್ಲು, ಅರಳೆ ಮುಂತಾದವುಗಳ ಗಂಟು, ಹೊರೆ, ಕೋಮಲ ಪದಾರ್ಥದ ಮೇಲೆ ಹೊಡೆದ ಹೊಡೆತ.

**गद्दार**– पु भारी विद्रोही। ದೊಡ್ಡ ವಿದ್ರೋಹಿ, ಬಂಡಾಯಗಾರ.

**गद्दी**– स्त्री. किसी अधिकारी के बैठनेका स्थान, छोटा गद्दा, घोडेकी पीठपर रखनेका कपडा, व्यवसाइ आदिके बैठनेकी जगह। ಪೀಠ, ಆಸನ, ಸಿಂಹಾಸನ, ಗದ್ದುಗೆ, ಚಿಕ್ಕಗಾದಿ, ದಿಂಬು, ಜೀನು, ಉದ್ಯೋಗಸ್ಥರು ಕೂಡ್ರುವ ಸ್ಥಳ.

**गद्दीनसीन**–वि सिंहासनारूढ। ಸಿಂಹಾಸನಾರೂಢ, ಸಿಂಹಾಸನದ ಮೇಲೆ ಕುಳಿತ.

ಪ್ರಚಂಡ, ಆಳ.

**गभुआर**– वि. जिसके जन्मके समयके बाल न कटे हो, छोटी अवस्थाका, नादान।ಹುಟ್ಟುಗೂದಲು ತೆಗೆಯದ, ಚಿಕ್ಕ ವಯಸ್ಸಿನ, ಅಜ್ಞ, ತಿಳಿಯದವ.

**गम**– पु. मार्ग, सहवास, पहुंच । ಮಾರ್ಗ, ಗಮನ, ಸಹವಾಸ, ಸಂಭೋಗ, ಸಾಮೀಪ್ಯ, ಪ್ರವೇಶ.

**ग़म**– पु. दु.ख, चिंता। ದುಃಖ,ಶೋಕ, ವ್ಯಥೆ, ವ್ಯಸನ, ಚಿಂತೆ.

**गमकना**– अक्रि. महॅकना । ಸುವಾಸನೆ ಬೀರು, ಪರಿಮಳಿಸು.

**गमकीला**– वि. सुगंधित । ಸುಗಂಧಿತ, ಸುವಾಸನೆಯುಳ್ಳ.

**ग़मख़ोर**– वि. सहिष्णु । ಸಹಿಷ್ಣು, ತಾಳ್ಮೆಯುಳ್ಳವ.

**ग़मगीन**– वि. उदास । ಉದಾಸ, ದುಃಖಿತ, ದುಃಖಾಕ್ರಾಂತ.

**गमछा**–पु. रूमाल, तौलिया । ಕೈವಸ್ತ್ರ, ಚೌಕ, ಟಾವೆಲ್ಲು.

**ग़मज़ा**–पु प्रेमिका का नखरा और हाव-भाव । ಒಯ್ಯಾರ, ಬೆಡಗು, ಮುರುಕು, ಹಾವಭಾವ.

**गमन**– पु. जाना, संभोग । ಗಮನ, ಹೋಗುವದು, ಸಂಭೋಗ.

**गमला**–पु. फूल पौधे लगानेका मिट्टीका पात्र । ಹೂಗಿಡಗಳನ್ನು ಹಚ್ಚುವ ಮಣ್ಣಿನ ಪಾತ್ರೆ, ಕುಂಡ.

**गमाना**– सक्रि. खोना, जाने देना ।ಕಳಕೊಳ್ಳು, ಬಿಡು, ಹೋಗಗೊಡು.

**ग़मी**– स्त्री. शोक, मृत्यु । ಶೋಕ. ದುಃಖ, ಮೃತ್ಯು, ಸಾವು.

**गयंद**– पु बडा हाथी. गजेंद्र । ದೊಡ್ಡ ಆನೆ, ಗಜೇಂದ್ರ.

**गय**– पु घर, आकाश, धन, पुत्र,हाथी. प्राण । ಮನೆ, ಆಕಾಶ, ಧನ,ಪುತ್ರ, ಆನೆ, ಪ್ರಾಣ.

**गयागुजरा, गयाबीता**– वि हीन दशामें पहुंचा हुआ । ನಿಕೃಷ್ಟ, ನೀಚ, ಪತಿತ.

**गयावाल**–पु. गयाका पंडा । ಗಯೆಯಲ್ಲಿಯ ಪೂಜಾರಿ.

**गर**–पु, गरदन, विष, रोग । ಕೊರಳು, ಕುತ್ತಿಗೆ, ವಿಷ, ರೋಗ.

**गर**– अव्य. अगर । ಒಂದುವೇಳೆ, ರೆ.

**गरक़**– वि मग्न । ಮಗ್ನ, ತೊಡಗಿದ, ತಲ್ಲೀನ.

**ग़रक़ाब**– पु डूबनेका भाव । ಮಗ್ನತೆ. ಮುಳುಗುವಿಕೆ. वि. डूबा हुआ । ಮುಳುಗಿದ.

**ग़रक़ी**– स्त्री. बाढ, डुबकी, अतिवृष्टि, नीची जमीन । ಪ್ರವಾಹ, ಮಹಾಪೂರ ಮುಳುಗುವಿಕೆ, ಗೋತ, ಅತಿವೃಷ್ಟಿ, ನಿಮ್ನಭೂಮಿ.

**गरगज**– पु. किलेकी दीवारोंपरका बुर्ज, युद्धकी सामग्री रखनेकी बनावटी टीला नावके ऊपरकी छत, फांसीका तख्ता । ಕೋಟೆಯ ಗೋಡೆಯ ಮೇಲಿನ ಗುಮ್ಮಟ (ಶಿಖರ), ಯು-

ದ್ಧ ಸಾಮಗ್ರಿಗಳನ್ನಿಡುವ ಕೃತ್ರಿಮ ದಿಸ್ಸೆ, ದೋಣಿಯ ಮೇಲಿನ ಚಪ್ಪರ, ಗಲ್ಲಿನ ವೇದಿಕೆ, ಗಲ್ಲಿನ ಅಟ್ಟ. वि. विशाल। ಬಹಳ ವಿಶಾಲ.

गरगया– पु. एक चिड़िया। ಗುಬ್ಬಚ್ಚಿ.

गरगरा–पु. घिरनी, चरखी। ಗಡಗಡೆ, ರಾಟೆ, ಕಪ್ಪಿ.

गरगाव– पु. दे 'गरकाव'।

गरज– स्त्री गंभीर शब्द। ಗರ್ಜನೆ.

गरज– स्त्री मतलब, आवश्यकता। ಉದ್ದೇಶ್ಯ, ಪ್ರಯೋಜನ, ಅಗತ್ಯ, ಅಪೇಕ್ಷೆ, ನಿಮಿತ್ತ, ಆಶೆ. अव्य. आखिरकार, मतलब यह कि सारांश यह कि। ಕೊನೆಗೆ, ಕಡೆಗೆ, ಉದ್ದೇಶವೇನೆಂದರೆ, ಸಾರಾಂಶವೇನೆಂದರೆ.

गरजन–पु. गरज। ಗರ್ಜನೆ, ಗಂಭೀರವಾದ ಧ್ವನಿ.

गरजना– अक्रि. ऊंचा और गंभीर शब्द करना, फूटना। ಗರ್ಜಿಸು, ಗಂಭೀರವಾಗಿ ಧ್ವನಿ ಮಾಡು, ಒಡೆ, ಬಿರಿ. त्रि. गर्जन करनेवाला। ಗರ್ಜಿಸುವ.

गरजमंद– वि. गरजवाला, मतलबी। ಅಗತ್ಯವುಳ್ಳವ, ಪ್ರಯೋಜನವುಳ್ಳ, ಸ್ವಾರ್ಥಿ, ಅಪೇಕ್ಷೆಯುಳ್ಳ.

गरजमंदी– स्त्री स्वार्थता, आवश्यकता। ಸ್ವಾರ್ಥತೆ, ಅಗತ್ಯ, ಅಪೇಕ್ಷೆ.

गरजी, गरजू– वि. दे. 'गरजमंद'।

गरद– स्त्री दे 'गर्द'।

गरदन– स्त्री गला, ग्रीवा। ಕೊರಳು, ಕುತ್ತಿಗೆ, ಕಂಠ.

गरदनियाँ– स्त्री. गरदन पकड़कर निकालना। ಅರ್ಧಚಂದ್ರ ಕೊಡು, ಕುತ್ತಿಗೆ ಹಿಡಿದು ಹೊರಗೆ ಹಾಕು.

गरदनी– स्त्री. कुरते आदिका गला, गलेका एक आभूषण, घोड़ेकी गरदन पर बांधनेका कपड़ा। ಕರಟು, ಅಂಗಿಗಳ ಕೊರಳು, ಅಸಲಿ, ಕೊರಳಲ್ಲಿ ತೊಡುವ ಒಂದು ಆಭರಣ, ಕುದುರೆಯ ಕೊರಳಲ್ಲಿ ಕಟ್ಟುವ ಅರಿವೆಯ ಪಟ್ಟಿ. स्त्री. द. 'गरदनियाँ'।

गरदा– पु. धूल, मिट्टी। ಧೂಳು, ಮಣ್ಣು, ಕಸ.

गरदूँ– पु आकाश, गाडी। ಆಕಾಶ, ಚಕ್ಕಡಿ, ಗಾಡಿ.

गरना– अक्रि. गलना, नष्ट होना, टपकना, निचुड़ना। ಕರಗು, ನಾಶವಾಗು, ಸೋರು, ಹನಿಹನಿಯಾಗಿ ಬೀಳು, ಹಿಂಡಲ್ಪಡು.

गैरनाल– स्त्री. चौड़े मुँह की तोप। ಅಗಲಬಾಯಿಯ ತೋಪು, ದೊಡ್ಡ ಬಾಯಿಯ ಫಿರಂಗಿ.

गरब– पु. गर्व, अभिमान। ಗರ್ವ, ಸೊಕ್ಕು, ಅಭಿಮಾನ.

ग़रब– पु. पश्चिम। ಪಶ್ಚಿಮ ದಿಕ್ಕು.

गरबई– स्त्री गर्वीलापन, घमंड। ಸೊಕ್ಕು, ಅಭಿಮಾನ.

गरवना, गरबाना– अक्रि घमंड करना। ಗರ್ವ ಮಾಡು, ಸೊಕ್ಕು ತೋರು,

ಅಭಿಮಾನ ಪಡು.

**ग़रबी**– वि. पाश्चात्य । ಪಶ್ಚಿಮದ, ಪಾಶ್ಚಾತ್ಯ.

**गरभाना**– अक्रि. गर्भिणी होना । ಗರ್ಭಿಣಿಯಾಗು, ಬಸುರಾಗು, ಗರ್ಭಧರಿಸು,ತೆನೆಯಾಗು,ಕಾಳುಹುಟ್ಟು.

**गरम**– वि उष्ण, उग्र, तीक्ष्ण । ಉಷ್ಣ, ಬಿಸಿಯಾದ, ಉಗ್ರ, ಪ್ರಬಲ, ಪ್ರಚಂಡ, ತೀಕ್ಷ್ಣ, ತೀವ್ರ.

**गरमदल**– पु. उग्रदल । ಉಗ್ರದಲ.

**गरमागरम**– वि गरम, उष्ण । ಉಷ್ಣ, ಬಿಸಿಯಾದ.

**गरमागरमी**– स्त्री उत्साह, जोश, कहासुनी । ಉತ್ಸಾಹ, ಆವೇಶ, ಬೈಯ್ದಾಟ, ಜಗಳ.

**गरमाना**–सक्रि गरम करना । ಕಾಯಿಸು, ಬೆಚ್ಚಗೆ ಮಾಡು. अक्रि गरम होना, क्रोध करना, उमंगमे आना । ಕಾಯು, ಬಿಸಿಯಾಗು, ಸಿಟ್ಟಾಗು, ರೇಗು, ಉತ್ಸಾಹಿತನಾಗು, ಆವೇಶ ಬರು, ಜೋರಾಗು, ಚೈತನ್ಯಬರು.

**गरमाहट**–स्त्री गरमी । ಉಷ್ಣತೆ,ಕಾವು.

**गरमी**– स्त्री. उष्णता, क्रोध, तेजी, गर्व, आवेश । ಉಷ್ಣತೆ, ಕಾವು, ತಾಪ, ಕ್ರೋಧ, ಸಿಟ್ಟು, ಕೋಪ,ಉದ್ರೇಕ, ತೀಕ್ಷ್ಣತೆ, ಗರ್ವ, ಆವೇಶ, ಉತ್ಸಾಹ.

**गरराना**– अक्रि गरजना । ಗರ್ಜಿಸು, ಗಂಭೀರಧ್ವನಿಮಾಡು, ಅಬ್ಬರಿಸು, ಮೊರೆ.

**गरल**– पु. विष । ವಿಷ.

**गरवा**– वि भारी, विशाल । ಬಹಳ ದೊಡ್ಡ,ವಿಶಾಲ. पु गला । ಕುತ್ತಿಗೆ

**गरह**– पु. ग्रह, बाधा । ಗ್ರಹ, ಬಾಧೆ, ಸಂಕಟ.

**गरहन**– पु. ग्रहण । ಗ್ರಹಣ

**गरॉव**– पु चौपायों के गलेकी रस्सी । ಕಣ್ಣಿ, ದನಗಳನ್ನು ಕಟ್ಟುವ ಹಗ್ಗ.

**गरा**– पु. गला । ಕುತ್ತಿಗೆ, ಕೊರಳು, ಕತ್ತು, ಕಂಠ.

**गराडी**– स्त्री. घिरनी, चरखी । ಗಡಗಡೆ, ರಾಟೆ.

**गराना**– सक्रि गलाना, निचोडना । ಹಿಂಡಿಸು, ಕರಗಿಸು, ತೇಯು, ಹಿಂಡು.

**गरारा**–वि. घमंडी, बलवान । ಗರ್ವಿಷ್ಠ, ಸೊಕ್ಕಿನ, ಶಕ್ತಿವಂತ, ಬಲವುಳ್ಳ, ಪ್ರಚಂಡ.

**ग़रारा**– पु. कुल्ला, बडा थैला । ಬಾಯಿ ಮುಕ್ಕಳಿಸುವದು, ದೊಡ್ಡ ಚೀಲ.

**गरासना**– सक्रि. निगलना, पकडना । ನುಂಗು, ಹಿಡಿ, ತ್ರಾಸ ಕೊಡು.

**गरिमा**– स्त्री महत्व, गुरुत्व, घमड, एक सिद्धि । ಮಹತ್ವ, ದೊಡ್ಡಿಸ್ತನ. ಗೌರವ, ಗುರುತ್ವ, ಗರ್ವ,ಸೊಕ್ಕು, ಒಂದು ಸಿದ್ಧಿ.

**गरियाना**– सक्रि दुर्वचन कहना । ಬೈಯು, ಕೆಟ್ಟಮಾತುಗಳನ್ನಾಡು, ಶಪಿಸು.

**गरियार, गरियाल**–वि सुस्त, आलसी।

ಆಲಸಿ, ಪೈಗಳ್ಳ, ತನ್ನ ಸ್ಥಾನ ದಿಂದ ಬೇಗನೆ ಏಳದವ, ಸೋಮಾರಿಯಾದ.

गरी– स्त्री. नारियलके फलके भीतरका गूदा। ಕೊಬ್ಬರಿ, ತಿರುಳು.

ग़रीब– वि. दरिद्र, दीन। ದರಿದ್ರ, ದೀನ, ಪರದೇಶಿ, ಬಡವ, ನಮ್ರ

ग़रीब निवाज– वि दीनदयालु। ದೀನಬಂಧು, ಬಡವರ ಮೇಲೆ ದಯೆ ತೋರುವವ.

ग़रीब परवर– वि. दीन परिपालक। ದೀನರಕ್ಷಕ.

ग़रीबाना– वि. गरीबों जैसा। ಬಡವರಂಥ, ದೀನರಂಥ, ಬಡರೀತಿಯ.

ग़रीबी– स्त्री. निर्धनता, दीनता,नम्रता। ಬಡತನ, ದರಿದ್ರತೆ, ದೀನತೆ,ಅಧೀನತೆ, ವಿಧೇಯತೆ, ದೈನ್ಯ.

गरु, गरुअ, गरुआ– वि गुरु, भारी। ದೊಡ್ಡ, ಪ್ರತಿಷ್ಠಿತ, ಭಾರವಾದ, ಪ್ರಚಂಡ.

गरुआई–स्त्री बड़प्पन, महत्व,भारीपन। ದೊಡ್ಡಸ್ತಿಕೆ, ಮಹತ್ವ, ಜಡತ್ವ.

गरुआना– अक्रि भारी होना। ದೊಡ್ಡದಾಗು ಜಡವಾಗು.

गरुवाई– स्त्री दे. 'गरुआई'।

गरू– वि भारी। ಭಾರವಾದ.

गरूर– पु गर्व घमंड। ಗರ್ವ,ಸೊಕ್ಕು, ಅಹಂಕಾರ. वि दे 'गरुआ'।

गरूरत गरूरताई– स्त्री घमंड, अभिमान। ಗರ್ವ, ಅಭಿಮಾನ, ಸೊಕ್ಕು

ग़रूरा, ग़रूरी– वि. अभिमानी,घमंडी। ಅಭಿಮಾನಿಯಾದ, ಗರ್ವಿಷ್ಠ.

गरेबान– पु. कुरते आदिका गला। ಅಂಗಿ ಮುಂತಾದವುಗಳ ಕೊರಳುಪಟ್ಟಿ, ಅಂಗಿಯ ಕತ್ತು ಪಟ್ಟಿ, ಕಾಲರು.

गरेरना– सक्रि. घेरना, रोकना। ಸುತ್ತುವರಿ, ಮುತ್ತಿಕೊಳ್ಳು, ತಡೆ.

गरैया– स्त्री. गलेकी रस्सी। ಕಣ್ಣಿ.

गरोह– पु. झुंड। ಗುಂಪು, ಸಮೂಹ, ದಳ, ಹಿಂಡು.

ग़र्क़– वि डूबा हुआ, तल्लीन। ಮುಳುಗಿದ,ಮಗ್ನ, ತಲ್ಲೀನ, ಲುಪ್ತವಾದ.

ग़र्क़ाब– वि. डूबा हुआ। ಮುಳುಗಿಹೋದ, ಮಗ್ನನಾದ.

ग़र्क़ी– स्त्री दे 'गरकी'।

गर्गज– पु दे. गरगज'।

गर्गरी– स्त्री. लोटा। ಬಟ್ಟಲು.

गर्जन–पु. गरज, भीषण ध्वनि। ಗರ್ಜನೆ. ಗುಟುರು, ಅಬ್ಬರ, ಗುಡುಗು.

गर्जना– अक्रि. दे. 'गरजना'।

ग़र्ज़– स्त्री दे 'गरज़'।

गर्त्त– पु गड्ढा, दरार। ತಗ್ಗು,ಕುಣಿ, ಹೊಂಡ, ಗುಂಡಿ, ಛಿದ್ರ, ಬಿರುಕು

गर्द–स्त्री धूल, मिट्टी। ಧೂಳು,ಮಣ್ಣು.
—गुबार=धूलमिट्टी। ಧೂಳುದುಂಬು.

गर्दख़ोर, गर्दख़ोरा– वि. जो गर्द पड़नेसे मैला न जान पड़े। ಧೂಳು ಬಿದ್ದರೂ ಹೊಲಸಾಗದ. ಹೊಲಸು ಕಾಣದ. पु पायदाज। ಕಾಲು

ಒರೆಸುವದಕ್ಕಾಗಿ ಇಟ್ಟ ಚಿಕ್ಕಚಾಪಿ, ಗೋಣಿ ತಟ್ಟು.

**गर्दन**– पु दे. 'गरदन'।

**गर्दभ**– पु गधा। ಕತ್ತೆ.

**गार्दिश**–स्त्री विपत्ति, चक्कर। ವಿಪತ್ತು, ಸಂಕಟ, ದುರದೃಷ್ಟ, ತಿರುಗುವಿಕೆ, ಸುತ್ತುವಿಕೆ, ಕಾಲಚಕ್ರ

**गर्भ**–पु. पेट के भीतर का बच्चा, कोख उदर। ಬಸುರು, ಗರ್ಭ, ಗರ್ಭಾಶಯ, ಹೊಟ್ಟೆ.

**गर्भवती**– स्त्री गर्भिणी। ಗರ್ಭಿಣಿ.

**गर्मी**– स्त्री दे 'गरमी'।

**गर्रा**– वि लाहके रंगका। ನಸುಗೆಂಪು ಬಣ್ಣದ, ಅರಗಿನ ಬಣ್ಣದ.

**गर्रा**– पु. गर्व। ಗರ್ವ, ಅಹಂಕಾರ.

**गर्री**– स्त्री सूत लपेटने की चर्खी। ನೂಲು ಸುತ್ತುವ ರಾಟೆ

**गर्व**– पु. अहंकार। ಅಹಂಕಾರ, ಅಭಿಮಾನ, ಗರ್ವ.

**गर्वि, गर्वीला**– वि गर्विष्ठ। ಗರ್ವಿಷ್ಠ, ಅಭಿಮಾನಿ, ಅಹಂಕಾರಿ.

**गर्हण**– पु निंदा। ನಿಂದೆ, ದೂರು

**गर्हणीय**–वि निंदनीय। ನಿಂದನೀಯ, ನಿಂದಿಸಲು ಯೋಗ್ಯವಾದ.

**गर्हित**– वि. निंदित। ನಿಂದಿಸಲ್ಪಟ್ಟ.

**गर्ही**– वि निंदा करनेवाला। ನಿಂದಿಸುವವ.

**गर्ह्य**– वि अधम, निंदनीय, नीच। ಅಧಮ, ನಿಂದನೀಯ, ತುಚ್ಛ.

**गल**– पु. गला, कंठ। ಕುತ್ತಿಗೆ, ಕೊರಳು, ಕಂಠ.

**गलकबल**– पु गाय के गले मे लटकती हुयी खाल। ಗಂಗೆದೊಗಲು, ಹಸುವಿನ ಕುತ್ತಿಗೆಯ ಕೆಳಭಾಗದಲ್ಲಿ ಜೋತಾಡುವ ತೊಗಲು.

**गलका**–पु अंगुली के सिरेपर का फोडा। ಬೆರಳು ಕುರು, ಉಗುರು ಹುಣ್ಣು.

**गलगंजना**– अकि कोलाहल करना। ಕೋಲಾಹಲ ಮಾಡು, ಆನಂದದಿಂದ ಕೂಗಾಡು. सकि लंबी-चौडी बातें करना। ಜಂಭಕೊಚ್ಚು, ಬಡಿವಾರ ಹೇಳು.

**गलगंड**– पु कंठमाला। ಗಂಡಮಾಲೆ

**गलगला**– वि. गीला, तर। ತೊಯ್ದ, ಆರ್ದ್ರ, ತೇವ, ಒದ್ದೆಯಾದ.

**गलगाजना**– दे 'गलगंजना'।

**गलगुथना**– वि हृष्टपुष्ट, जिसका गाल फूले हो। ಕೊಬ್ಬಿದ,ಉಬ್ಬುಗಲ್ಲದವ

**गलचुमनी**– स्त्री. कान का एक गहना। ಕೆನ್ನೆಯ ಮೇಲೆ ಜೋತಾಡುವ ಕಿವಿಯ ಒಂದು ಆಭರಣ.

**गलझंप**– पु हाथी के गले में पहिराने की झूल या सिकडी। ಆನೆಯ ಕೊರಳಲ್ಲಿ ತೊಡಿಸುವ ಜೂಲು ಬಟ್ಟೆ, ಅಥವಾ ಸರಪಣಿ.

**गलतंस**– पु निस्संतान मरे व्यक्ति। ಸಂತಾನವಿಲ್ಲದೆ ಸತ್ತ ಮನುಷ್ಯ.

**गलत**– वि. अशुद्ध, असत्य। ತಪ್ಪಾದ, ಅಶುದ್ಧ, ಅಪದ್ಧ, ಸುಳ್ಳಾದ.

**ग़लतनामा**– पु अशुद्धिपत्र। ಶುದ್ಧಾ-

ಶುದ್ಧಿ ಪತ್ರಿಕೆ, ತಪ್ಪೋಲೆ.

**ग़लत फ़हमी**– स्त्री. समझ की भूल । ತಪ್ಪುತಿಳುವಳಿಕೆ, ಭ್ರಮೆ, ಭ್ರಾಂತಿ.

**गलताड**– पु. जुए की खूंटी । ನೊಗದ ಗೂಟ.

**गलतान**– वि. लुढकता हुआ, जर्जर । ಉರುಳುವ, ಜರ್ಜರಿತ, ಹರಿದ.

**ग़लती**– स्त्री. भूल, भ्रांति । ತಪ್ಪು, ದೋಷ, ಭ್ರಾಂತಿ, ಭ್ರಮೆ.

**गलथन, गलथना**–पु. गलस्तन । ಹೋತಿನ ಕೊರಳ ಮೊಲೆ.

**गलन**– पु. गलकर गिरना । ಪತನ, ಕರಗಿ ಸೋರುವದು.

**गलना**– अक्रि. घुलना, पिघलना, नष्ट होना, ठिठुरना । ಕರಗು, ನಣ್ಣಾಗು, ಬೇಯು, ಸೋರು, ಜಿನುಗು, ಹಾಳಾಗು, ನಷ್ಟವಾಗು, ಹಳಸು, ಚಳಿಯಿಂದ ನೆಟೆ, ಬತ್ತು.

**गलफडा**– पु जलजंतुओ में पानी के भीतर सास लेने का अवयव, गालो के दोनो जबड़ों के बीचका मांस । ಜಲ್ಲಿ, ಜಲಜಂತುಗಳು ನೀರಿನಲ್ಲಿ ಉಸುರಾಡಿಸುವ ಅವಯವ, ಜಲಜಂತುಗಳ ಶ್ವಾಸಕೋಶ, ಕಟವಾಯಿ, ದವಡೆ.

**गलफांसी**–स्त्री गले की फांसी । ಫಾಶಿ ಶಿಕ್ಷೆ, ಮರಣದಂಡನೆ वि. कष्टदायक । ಕಠಿಣ, ಕಷ್ಟದಾಯಕವಾದ.

**गलफूला**– वि जिसका गला फूला हो, गला फूलने का रोग । ಉಬ್ಬುಗಲ್ಲದವ, ಕೆನ್ನೆ ಉಬ್ಬುವ ರೋಗ.

**गलबल**– पु कोलाहल । ಗದ್ದಲ, ಕೋಲಾಹಲ, ಗಲಭೆ.

**गलबहियाँ, गलबाँही**– स्त्री गले में बाँह डालना । ಕಂಠಾಲಿಂಗನ, ಕಂಠಲಗ್ನ.

**गलमुच्छा**– पु गालोपर रखा हुआ बाल । ಕಲ್ಲೀಮೀಸೆ, ಗಲ್ಲಮೀಸೆ.

**गलवाना**– सक्रि. गलानेका काम दूसरेसे कराना । ಎರಡನೆಯವರಿಂದ ಕರಗಿಸುವ, ಕುದಿಸುವ ಕೆಲಸ ಮಾಡಿಸು.

**गलशुंडी**–स्त्री. जीभके जड़ के पास होनेवाला एक रोग । ಕಿರುನಾಲಿಗೆ.

**गलस्तन**– पु. दे. 'गलथन'।

**गला**– पु. ग्रीवा, गर्दन, कंठ, स्वर, गरेबान । ಕುತ್ತಿಗೆ, ಕೊರಳು, ಕಂಠ, ಸ್ವರ, ಅಂಗಿ, ಶರ್ಟು ಮುಂತಾದವುಗಳ ಕೊರಳು ಪಟ್ಟಿ.

—**काटना** = बहुत हानि पहुँचाना । ಅನ್ಯಾಯ ಮಾಡು, ಕುತ್ತಿಗೆಕೊರೆ.

—**घुटना** = साँस लेनेमें कष्ट होना । ಉಸಿರುಗಟ್ಟು.

—**घोटना**=गला दबाकर मार डालना। ಕುತ್ತಿಗೆ ಹಿಚುಕಿ ಕೊಲ್ಲು.

**गले पड़ना**=इच्छा न होते हुए मिलना। ಇಚ್ಛೆಯಿಲ್ಲದೆ ಪ್ರಾಪ್ತವಾಗು.

**गले मढना**= हठ करके देना । ತಲೆಯ ಮೇಲೆ ಹೇರು.

**गलाऊ**–वि. जो गलता हो । ಕರಗುವ, ಸೋರುವ, ಹಳಸುವ.

**गलाना**– सक्रि. द्रवरूपमें लाना, ख

करना । ಕರಗಿಸು, ಕುದಿಸು, ಖರ್ಚು ಮಾಡು.

**गलानि**– स्त्री. दुःख, ग्लानि, पश्चात्ताप, लज्जा । ದುಃಖ, ಗ್ಲಾನಿ, ಪಶ್ಚಾತ್ತಾಪ, ನಾಚಿಕೆ, ಲಜ್ಜೆ.

**गलित**– वि. जीर्ण, नष्ट । ಜೀರ್ಣ, ಕುದಿದ, ಹಣ್ಣಾದ, ಕರಗಿದ, ಸೋರಿದ, ಹಿಂಡಲ್ಪಟ್ಟ.

**गली**– स्त्री. तंग रास्ता । ಬೀದಿ, ಸಂದಿ, ಓಣಿ, ಸಣ್ಣ ಗಲ್ಲಿ.

**—गली मारे फिरना** = जीविका प्राप्त करने के लिये इधर उधर घूमना । ಹೊಟ್ಟೆ ತುಂಬಿಕೊಳ್ಳುವರ ಸಲುವಾಗಿ ಅತ್ತಿತ್ತ ಅಲೆದಾಡು.

**गलीचा**– पु. एक तरहका बेल बूटेदार मोटा बिछावन । ರತ್ನಗಂಬಳಿ, ಜಮಖಾನೆ.

**ग़लीज़**– वि. मैला । ಹೊಲಸು, ಕೊಳಕ. पु. गंदगी । ಹೊಲಸು, ಕಸಕಡ್ಡಿ.

**गलेबाज़**– वि. अच्छे स्वरवाला । ಮಧುರ ಸ್ವರವುಳ್ಳವ, ಒಳ್ಳೆಯ ಕಂಠವುಳ್ಳವ.

**गल्प**– स्त्री. छोटी कहानी, गप, डींग । ಸಣ್ಣ ಕತೆ, ಹರಟೆ, ಜಂಭ, ಬಡಿವಾರ.

**गल्ला**– पु. शोर, झुंड । ಸದ್ದು, ಗಲಾಟೆ, ಗುಂಪು, ಸಮೂಹ, ಹಿಂಡು, ಮಂದೆ.

**ग़ल्ला**– पु. अनाज, फसल, वह धन जो दूकानपर नित्यकी बिक्री से मिलता है । ಬೆಳೆ, ಪೈರು, ಧಾನ್ಯ, ಕಾಳು, ಅಂಗಡಿಯಲ್ಲಿಯ ದಿನಂಪ್ರತಿಯ ಮಾರಾಟದ ಹಣ.

**गल्लेबान**– पु. गड़रिया । ಕುರುಬ, ಕುರಿಕಾಯುವವ.

**गवँ, गवँही**– स्त्री. दे. 'गँव'।

**गवन**– पु. गमन, गौना । ಗಮನ, ಪ್ರಸ್ಥಾನ, ವಧೂಗೃಹ ಪ್ರವೇಶ, ಶೋಭನಪ್ರಸ್ತ.

**गवनचार**– पु. दे. 'गौना'।

**गवनना**– अक्रि. गमन करना, जाना । ಹೋಗು, ನಡೆ.

**गवाँना**– सक्रि. दे. 'गँवाना'।

**गवाक्ष, गवाख, गवाछ**– पु. झरोखा । ಬೆಳಕಿಂಡಿ, ಸಣ್ಣ ಕಿಡಿಕಿ.

**गवारा**–वि. पसंद, मंजूर, सह्य । ಯೋಗ್ಯ, ಸ್ವೀಕೃತ, ಮನಸ್ಸಿಗೆ ಬರುವ, ಸಹ್ಯ, ರುಚಿಕರವಾದ, ಅನುಕೂಲವಾದ.

**गवास**– पु. कसाई । ಕಟುಕ, ಹಿಂಸಕ.

**गवाह**–पु. साक्षी । ಸಾಕ್ಷಿ, ಸಾಕ್ಷಿದಾರ.

**गवाही**–स्त्री. साक्ष्य । ಸಾಕ್ಷ್ಯ, ಪ್ರಮಾಣ.

**गवेजा**– स्त्री. गपशप, वार्तालाप । ಹರಟೆ, ಮಾತುಕತೆ.

**गवेल**– वि. देहाती, गँवार । ಹಳ್ಳಿಗಾಡ, ಅಸಂಸ್ಕೃತ, ಪೆದ್ದ.

**गवेषणा**– स्त्री. खोज । ಅನ್ವೇಷಣೆ, ಶೋಧನೆ.

**गवेषी**– पु. खोजनेवाला । ಅನ್ವೇಷಕ,

ಶೋಧಕ

गवेसना– सक्रि खोजना। ಹುಡುಕು,

गवैया– पु गायक। ಹಾಡುವವ, ಗಾಯಕ.

गवैहाँ– वि. देहाती। ಹಳ್ಳಿಗಾಡ.

ग़श– पु. मूर्छा, बेहोशी। ಮೂರ್ಛೆ, ಬವಳಿ.

—खाना = मूर्छित होना। ಮೂರ್ಛೆ ಹೊಂದು, ಬವಳಿ ಬರು.

गश्त– पु. टहलना, दौरा। ಸಂಚಾರ, ಅಡ್ಡಾಟ, ತಿರುಗಾಟ, ಸುತ್ತು, ಪೋಲೀಸರ ಗಸ್ತು.

गश्ती–पु घूमनेवाला, गश्त लगानेवाला पहरेदार। ತಿರುಗಾಡುವವ, ಗಸ್ತೀ ತಿರುಗುವವ, ಕಾವಲುಗಾರ. स्त्री कुलटा। ವ್ಯಭಿಚಾರಿಣಿ, ಹಾದರಗಿತ್ತಿ.

गसना– सक्रि. जकड़ना। ಬಿಗಿಸು, ಒತ್ತು.

गसीला– वि. जकड़ा हुआ, घना। ಗಟ್ಟಿಯಾಗಿ ಕಟ್ಟಿದ, ಬಿಗಿದ, ದಟ್ಟವಾದ.

गस्सा– पु. ग्रास। ಗ್ರಾಸ, ತುತ್ತು.

गहकना– अक्रि लालसासे पूर्ण होना, शीघ्रता करना, उमंगसे पूर्ण होना। ಆಶೆಪಡು, ಆತುರಪಡು, ಉತ್ಸಾಹಿತನಾಗು, ಆನಂದಿತನಾಗು.

गहगह, गहगहा– वि प्रफुल्लित। ಆನಂದಿತ, ಸಂತೋಷಭರಿತ. क्रिवि धूमके साथ। ಸಡಗರದಿಂದ.

गहगहाना– अक्रि आनंदित होना, लहलहाना। ಸಂತೋಷದಿಂದ ಹಿಗ್ಗು, ಕಂಗೊಳಿಸು, ಚಿಗುರು

गहगहे–क्रिवि. आनंदपूर्वक, धूमधामसे। ಆನಂದಪೂರ್ವಕವಾಗಿ, ಸಡಗರದಿಂದ, ಉತ್ಸಾಹದಿಂದ.

गहडोरना– सक्रि. गदा करना। ಹೊಲಸು ಮಾಡು, ಕದಡು, ಕಲಕು.

गहन– वि ग्रहण, कलंक, बंधन, संकट, गहराई, दुर्गम स्थान। ಗ್ರಹಣ, ಕಲಂಕ, ದೋಷ, ಬಂಧನ, ಸಂಕಟ, ಆಳ, ದುರ್ಗಮ ಸ್ಥಾನ. स्त्री. हठ। ಹಟ, ಹಿಡಿತ, ಆಗ್ರಹ. वि. घना, गहरा, दुर्गम। ದಟ್ಟವಾದ, ನಿಬಿಡ, ಆಳವಾದ, ಘನವಾದ, ದುರ್ಗಮ.

गहना– पु. जेवर, बंधक। ಒಡವೆ, ಆಭರಣ, ಅಡವು, ಒತ್ತಿ. सक्रि पकड़ना, धरना। ಹಿಡಿ, ವಶಮಾಡಿಕೊ.

गहनि– स्त्री. हठ, पकड़, टेक। ಹಟ, ಹಿಡಿತ, ಆಗ್ರಹ.

गहबर– वि. व्याकुल, दुर्गम, ध्यानमग्न। ವ್ಯಾಕುಲ, ಉದ್ವಿಗ್ನ, ದುರ್ಗಮ, ದಟ್ಟ, ಧ್ಯಾನಮಗ್ನ.

गहबरना– अक्रि. व्याकुल होना, घबराना। ಗಾಬರಿಯಾಗು, ಕಳವಳಗೊಳ್ಳು, ಚಿಂತಿತನಾಗು, ಅಂಜು

गहबराना– सक्रि घबड़ा देना। ಅಂಜಿಸು, ವ್ಯಾಕುಲಪಡಿಸು, ಪೀಡಿಸು

गहर– पु. विलंब। ತಡ, ವಿಳಂಬ. वि. गूढ़, सघन। ಗೂಢ, ಗಹನ.

गहरना– अक्रि. देरी करना, झगड़ना,

कुढना। ತಡ ಮಾಡು, ವಿಳಂಬ ಮಾಡು, ಸಿಟ್ಟಾಗು.

**गहरा**– वि गंभीर, अधिक, भारी, गाढा, कठिण। ಆಳವಾದ,ಗಂಭೀರ ವಾದ, ಅಧಿಕ, ದೊಡ್ಡದಾದ, ಪ್ರ- ಚಂಡ, ದಟ್ಟವಾದ, ಕಠಿಣ

—**असामी**=धनी मनुष्य। ಶ್ರೀಮಂತ ಮನುಷ್ಯ.

**गहराई**– स्त्री. गहरापन, गंभीरपन। ಆಳ. ಆಳತೆ, ಗಾಂಭೀರ್ಯ, ದೃಢತೆ.

**गहराना**– अक्रि गहरा होना। ಆಳ ವಾಗು, ಗಂಭೀರವಾಗು. सक्रि गहरा करना। ಆಳವಾಗಿ ಮಾಡು, ಗಂಭೀರ ಮಾಡು.

**गांज**– पु. ढेर, राशि। ಗುಂಪು, ರಾಶಿ, ಸಮೂಹ.

**गांजना**– सक्रि ढेर लगाना। ರಾಶಿ ಮಾಡು, ಕೂಡಿಸು.

**गांजा**– पु. एक मादक वस्तु। ಗಾಂಜಾ.

**गांठ, गाँठि**– स्त्री. गठरी, ग्रथि, जोड, पोर। ಗಂಟು,ಗ್ರಂಥಿ,ಸಂಧಿ,ಕೀಲ, ಕಬ್ಬಿನ ಗಣಿಕೆಯ ಗಂಟು.

—**छोडना** = कठिनाई दूर करना। ತೊಡಕು ಬಿಡಿಸು.

—**का पूरा** = धनवान। ಶ್ರೀಮಂತ.

—**खोलना** = दिल खोलकर बाते करना। ಮನಬಿಚ್ಚಿ ಮಾತನಾಡು.

—**में बाधना** = स्मरण रखना। ನೆನ ಪಿಡು.

**गाँठगोभी**– स्त्री. एक प्रकारकी गोभी जिसमें गूदेदार गोभी होती है। ಕೋಸು ಗಡ್ಡೆ, ಕೋಬೀಜು ಗಡ್ಡೆ.

**गाँठदार**– वि. जिसमे बहुतसी गाँठे हों। ಗಂಟುಗಳುಳ್ಳ, ಗಣಿಕೆಗಳುಳ್ಳ.

**गाँठना**– सक्रि बाँधकर मिला देना, जोडना,सीना, वशमें करना। ಕಟ್ಟು. ಜೋಡಿಸು,ಹೊಲಿ, ಗಂಟುಹಾಕು, ವಶಮಾಡಿಕೊಳ್ಳು, ಒಲಿಸಿಕೊಳ್ಳು.

**गांठी**– स्त्री दे 'गाँठ'।

**गांड**– स्त्री. गुद। ಕುಂಡೆ, ತಿಕ, ಗುದ, ಮಲದ್ವಾರ.

**गाँडा**– पु. गन्नेका कटा हुआ टुकडा, गन्ना। ಕಬ್ಬಿನ ತುಂಡು, ಕಬ್ಬು.

**गाँथना**– सक्रि. दे 'गूँथना'।

**गांधार**–पु देश-विशेष। ಸಿಂಧೂನದಿಯ ಪಶ್ಚಿಮ ಭಾಗದಲ್ಲಿರುವ ಪ್ರದೇಶ.

**गाँव**– पु ग्राम। ಗ್ರಾಮ, ಹಳ್ಳಿ.

**गाँस**– स्त्री गाँठ, वैर, रुकावट, रहस्य, अनी, फंदा, अधिकार। ಗಂಟು, ತೊಡಕು, ವೈರತ್ವ, ದ್ವೇಷ, ಅಡ್ಡಿ. ತಡೆ, ಗುಪ್ತಮಾತು, ಮೊನೆ,ತುದಿ, ಜಾಲ, ಅಧಿಕಾರ, ಶಾಸನ.

**गांसना**– सक्रि गूँथना, कसना, भरना, पकडमें लाना,चुभाना। ಹೆಣೆ,ಕಟ್ಟು, ತುರುಕು, ಬಿಗಿ, ಎಳೆ, ತುಂಬು, ವಶಮಾಡಿಕೊಳ್ಳು, ಚುಚ್ಚು, ತಿವಿ.

**गांसी**– स्त्री तीर या बरछीकी नोक कपट, छल, गाँठ। ಬಾಣ, ಭಲ್ಲೆ, ಕತ್ತಿಗಳ ಮೊನೆಯಾದ ತುದಿ, ಕಪಟ, ಗಂಟು, ತೊಡಕು.

गाहक– पु दे 'गाहक'।
गाइ, गाई– स्त्री. गाय। ಆಕಳು.
गागर, गागरी–स्त्री छोटा घडा। ಚಿಕ್ಕ ಕೊಡ, ಕಲಶ, ಬಿಂದಿಗೆ.
गाछ– पु दरख्त, पेड़। ಗಿಡ.
गाज– स्त्री. गरज, बिजली। ಗರ್ಜನೆ, ಮಿಂಚು, ಸಿಡಿಲು. पु. झाग, फेन। ನೊರೆ, ಬುರುಗು.
—पडना = आपत्ति आना, वज्रपात होना। ಸಂಕಟ ಬರು, ವಜ್ರಪಾತವಾಗು
गाजना– अक्रि गर्जन करना, प्रसन्न होना। ಗರ್ಜಿಸು, ಚೀರು, ಆನಂದದಿಂದ ಕೂಗು, ಆನಂದಿತನಾಗು
गाजर– स्त्री. एक जड़। ಕೆಂಪು ಮೂಲಂಗಿ, ಗಜ್ಜರಿ.
—मूली समझना = तुच्छ जानना। ತುಚ್ಛವೆಂದು ತಿಳಿ.
ग़ाज़ा–पु मुँहपर मलनेका एक प्रकारका सुगंधित चूर्ण। ಫೇಸ ಪಾವಡರ.
गाजाबाजा– पु वाद्य ध्वनि। ವಾದ್ಯಗಳ ಧ್ವನಿ.
गाज़ी– पु. वह मुसलमान जो धर्म के लिये दूसरोंसे युद्ध करे, वीर। ಧರ್ಮಕ್ಕಾಗಿ ಯುದ್ಧಮಾಡುವವ, ವೀರ.
गाड– स्त्री. गड्ढा। ತಗ್ಗು, ಹೊಂಡ.
गाडना– सक्रि दफनाना, छिपाना। ಹೂಗಿ, ಮುಚ್ಚು, ಗುಪ್ತವಾಗಿಡು.
गाडर– पु. भेड। ಕುರಿ.
गाडा– बैलगाडी, गड्ढा। ಚಕ್ಕಡಿ, ಗಾಡಿ, ತಗ್ಗು, ಮೋಸದ ಸ್ಥಳ.
गाड़ी–स्त्री शकट, छकडा, यान। ಗಾಡಿ, ರಥ, ಚಕ್ಕಡಿ, ವಾಹನ.
गाडीवान–पु. गाडी हॉकनेवाला। ಚಕ್ಕಡಿಯುವ, ಚಕ್ಕಡಿ ಅಥವಾ ರಥ ಹೊಡೆಯುವವನ,
गाढ– वि. दृढ, कठिण, घना, गहरा। ದೃಢ, ಗಟ್ಟಿಯಾದ, ಸ್ಥಿರ, ಕಠಿಣ, ಆಳವಾದ, ಅಧಿಕ. स्त्री. संकट, दुःख। ಸಂಕಟ, ದುಃಖ.
गाढ़ा– वि. मोटा, घना, कठिण, गहरा, अतिशय, तीव्र। ದಪ್ಪ, ಗಹನ, ದಟ್ಟ, ಕಠಿಣ, ಗೂಢ, ಆಳವಾದ, ಅತಿಶಯ, ತೀವ್ರ.
गाढा, गाढे– क्रिवि. खूब अच्छी तरह। ಉತ್ತಮ ರೀತಿಯಿಂದ, ಧೃಢತೆಯಿಂದ.
गात– पु. शरीर। ದೇಹ, ಶರೀರ.
गाती– स्त्री. शरीर में लपेटने का वस्त्र। ಹೊದಿಯುವ ವಸ್ತ್ರ.
गात्र– पु. शरीर, अंग। ಶರೀರ,ದೇಹ.
गाथ– पु. स्तोत्र, यश। ಸ್ತೋತ್ರ, ಪ್ರಶಂಸೆ, ಯಶ, ಕೀರ್ತಿ.
गाथक– पु. गानेवाला। ಗಾಯಕ.
गाथा–स्त्री. कथा, कहानी, स्तुति। ಕತೆ, ಸ್ತುತಿ, ಸ್ತೋತ್ರ, ಶ್ಲೋಕ, ಪದ.
गादड़, गादर– पु. सियार, गरियाल बैल। ನರಿ, ಮುಂದೆ ಸಾಗದೆ ನಿಂತು ಬಿಡುವ ಎತ್ತು. वि. भीरु। ಹೇಡಿ, ಪುಕ್ಕ.

**गादा**– पु. कच्चा अन्न । ಪಕ್ವವಾಗದ ಧಾನ್ಯ, ಬಲಿಯದ ಕಾಳು.
**गादी**– स्त्री. दे. ' गद्दी '।
**गाध**– पु. थाह, स्थान, धारा, लोभ । ನೀರಿನ ಅಂತ, ತಳ, ಸ್ಥಾನ, ಪ್ರವಾಹ, ಲೋಭ. वि छिछला । ಆಳವಿಲ್ಲದ, ಸ್ವಲ್ಪ.
**गान**–पु. गाना, गीत । ಹಾಡು,ಗೀತೆ, ಗಾಯನ.
**गाना**– सक्रि लयके साथ ध्वनि निकालना, वर्णन करना । ಹಾಡು, ಸ್ತುತಿಸು. पु. गीत । ಸಂಗೀತ.
**ग़ाफिल**– वि. बेख़बर । ಎಚ್ಚರವಿಲ್ಲದ, ಅಜಾಗರೂಕ.
**गाभ**– पु पशुओंका गर्भ । ದನಗಳ ಗರ್ಭ.
**गाभा**– पु कोंपल, कच्चा अन्न । ಚಿಗುರು, ಅಂಕುರ, ಪಕ್ವವಾಗದ ಧಾನ್ಯ.
**गाभिन, गभिनी**– स्त्री. गर्भिणी । ಗರ್ಭಿಣಿ.
**गाम**– पु. ग्राम । ಗ್ರಾಮ, ಹಳ್ಳಿ.
**गाय**–स्त्री. धेनु, सीधा आदमी । ಆಕಳು, ಒಳ್ಳೆಯ ಮನುಷ್ಯ.
**गायगोठ**– स्त्री. गोशाला । ಕೊಟ್ಟಿಗೆ, ಗೋಶಾಲೆ.
**गायब**– वि. लुप्त, अदृश्य । ಮಾಯವಾದ, ಅದೃಶ್ಯವಾದ.
**ग़ायबाना**– क्रिवि. चुपकेसे, अनुपस्थितिमें । ಗೊತ್ತಾಗದಂತೆ, ಗುಪ್ತವಾಗಿ, ಗೈರುಹಾಜರಿನಲ್ಲಿ.
**ग़ार**– पु गहरा, गड्ढा, गुफा । ಆಳವಾದ ತಗ್ಗು, ಗುಂಡಿ, ಗುಹೆ,ಗವಿ.
**गार**–स्त्री. गाली । ಬೈಗಳು, ಅಪಶಬ್ದ, ನಿಂದೆ, ತೆಗಳಿಕೆ.
**ग़ारत**– वि. बरबाद । ಹಾಳಾದ, ನಷ್ಟವಾದ.
**गारद**– स्त्री रक्षाके लिये नियत सिपाहियोंकी टोली । ಕಾವಲುಗಾರರ ತಂಡ.
**गारना**– सक्रि. निचोडना, कष्ट देना, त्यागना, अलग करना, बरबाद करना । ಹಿಂಡು, ಕಿವುಚು, ತ್ರಾಸ ಕೊಡು, ತ್ಯಜಿಸು, ಬೇರ್ಪಡಿಸು, ಹಾಳುಮಾಡು, ನಾಶಮಾಡು.
**गारा**– पु गीला किया हुआ चूना इत्यादि । ಗಾರೆ, ಗಚ್ಚು.
**गारी**– स्त्री. गाली, कलंक । ಬೈಗಳು, ನಿಂದೆ, ಕಲಂಕ.
**गारुडी**–पु. साँपका विष उतारनेवाला। ಹಾವಿನ ವಿಷ ಇಳಿಸುವವ,ಗಾರುಡಿ.
**गारो**– पु अभिमान, गर्व, प्रतिष्ठा, घर। ಅಭಿಮಾನ,ಗರ್ವ, ಪ್ರತಿಷ್ಠೆ,ಮನೆ.
**गार्हस्थ्य**– पु. गृहस्थका धर्म । ಗೃಹಸ್ಥ ಧರ್ಮ, ಗೃಹಸ್ಥಾಶ್ರಮ.
**गाल**– पु. कपोल, बकवाद करनेकी आदत, कौर । ಕೆನ್ನೆ, ಗಲ್ಲ,ವಾಚಾಲತೆ, ತುತ್ತು, ಕಬಳ.
**—फुलाना**=रूठना । ಸಿಟ್ಟಾಗು,ರೇಗು.
**—बजाना या मारना**=गर्व दिखलाना ।

ಜಂಭಕೊಚ್ಚು, ಗರ್ವಮಾಡು.

गालगूल– पु. व्यर्थ की वार्त। ಗೊಡ್ಡು ಹರಟೆ, ಬಡಬಡಿಕೆ.

गाला– पु प्यूनी, ढेर, बड्बड करनेका अभ्यास। ಹಂಜಿ, ಗುಂಪು, ಬಡ ಬಡಿಕೆಯ ಅಭ್ಯಾಸ.

ग़ालिब– वि. श्रेष्ट, विजयी। ಶ್ರೇಷ್ಠ, ಬಲಿಷ್ಠ, ಗೆದ್ದವ.

ग़ालिबन्– क्रिवि संभवतः। ಸಂಭವತಃ, ಬಹುಶಃ.

ग़ालिम– वि. दे 'ग़ालिब'।

गाली– स्त्री. गारी, कलंक। ಬೈಗಳು, ದುರ್ವರ್ತನ, ಕಲಂಕ.

गाली देना– सक्रि. दुर्वचनका प्रयोग करना। ಬೈಯ್ಯು, ನಿಂದಿಸು.

गाली गलौज– स्त्री. गाली गुफ्ता– पु. परस्पर गाली प्रदान। ಬಯ್ದಾಟ, ಪರಸ್ಪರ ಅಪಶಬ್ದಗಳನ್ನಾಡುವದು

गालीचा– पु दे 'गलीचा'।

गाल्‌– वि. बकवादी, डींग मारनेवाला। ಬಡಬಡಿಸುವವ, ವಾಚಾಲ, ಜಂಭ ಕೊಚ್ಚುವವ.

गाव– स्त्री गौ। ಆಕಳು, ಗೋವು.

गावकुशी– स्त्री. गोवध। ಗೋವಧೆ, ಗೋಹತ್ಯ.

गावतकिया– पु मसनद। ದಿಂಬು, ತಕ್ಕೈ, ದೊಡ್ಡ ಲೋಡು.

गावदी– वि मूर्ख। ಮೂರ್ಖ, ದಡ್ಡ, ಮುಠ್ಠಾಳ, ಕಿಸವಾಯಿ.

गायन– वि गानेकी क्रिया या ढंग। ಹಾಡುಗಾರಿಕೆ ಅಥವಾ ಹಾಡುವ ರೀತಿ.

गास– पु. संकट। ಸಂಕಟ, ವಿಪತ್ತು.

गाह– पु अवगाहन करनेवाला, गहन, पकड, मगर, ग्राहक, घात। ಮುಳುಗುವವ, ಮರ್ಮಜ್ಞ, ಕಠಿಣ, ದುರ್ಗಮ, ಹಿಡಿತ, ಮೊಸಳೆ, ಗಿರಾಕಿ, ಮೋಸ.

गाहक– पु. अवगाहन करनेवाला, खरीदने वाला, कदर करनेवाला, अभिलाषी। ಮುಳುಗುವವ, ಮರ್ಮಜ್ಞ, ಗಿರಾಕಿ, ಕೊಂಡುಕೊಳ್ಳುವವ, ಆದರಿಸುವವ, ಅಭಿಲಾಷಿ.

गाहकताई– स्त्री. प्रतिष्टा, कदरदानी। ಪ್ರತಿಷ್ಠೆ, ಗುಣಗ್ರಹಣತೆ.

गाहना– सक्रि. डुबकी लगाना, डंडेसे उलट-पलटकर मारना, ग्रहण करना, मथना। ಮುಳುಗು, ಆಳ ತಿಳಕೊಳ್ಳು, ಬಡಿ, ತುಳಿ, ಕಾಳು ಉದುರಿಸು, ತೆಗೆದುಕೊಳ್ಳು, ಮಥಿಸು, ಕಡೆ, ಆಂದೋಲನ ಮಾಡು.

गाहा– स्त्री कथा, वृत्तात। ಕತೆ, ವೃತ್ತಾಂತ, ವಾರ್ತೆ.

गाही– स्त्री पाँच वस्तुओंका समूह। ಐದು ವಸ್ತುಗಳ ಸಮೂಹ, ಪಂಚಕ

गिजना– अक्रि हाथ लगने या उलटने पुलटने के कारण गंदा हो जाना, मिकुटना। ಕೈ ಹತ್ತಿ ಅಥವಾ ಅತ್ತಿತ್ತ ಬಿದ್ದು ಹೊಲಸಾಗುವದು, ಮುದುರು, ಮುರುಟು, ಕಿವುಚಲ್ಪಡು.

**गिंडुरी**– स्त्री. दे 'गेंडुरी'।

**गिआन**– पु. ज्ञान। ಜ್ಞಾನ.

**गिउ**– पु गला। ಕುತ್ತಿಗೆ, ಗೋಣು.

**गिचपिच, गिचरपिचर**– वि सटा हुआ अस्पष्ट। ಒಂದಕ್ಕೊಂದು ಹತ್ತಿದ, ಹತ್ತೆಯಾದ, ಗಿಜಿಬಿಜಿ, ಅಸ್ಪಷ್ಟ.

**गिजगिजा**–वि गीला और मुलायम जो अच्छा न लगे। ಒದ್ದೆ ಮತ್ತು ನುಣುವಾದ (ಒಳ್ಳೆಯದೆನಿಸದ), ಜಿಬಿಜಿಬಿ.

**गिज़ा**– स्त्री आहार,भोजन। ಆಹಾರ, ಭೋಜನ.

**गिटपिट**– स्त्री अर्थहीन शब्द। ಅರ್ಥಹೀನ ಶಬ್ದ.

**गिट्टक**– स्त्री **गिट्टा**– पु चिलम में तंबाकू के नीचे रखनेका कंकड। ಚಿಲುಮೆಯಲ್ಲಿ ತಂಬಾಕಿನ ಕೆಳಗೆ ಹಾಕುವ ಹರಳು.

**गिट्टी**– स्त्री पत्थरके छोटे टुकडे, मिट्टीके पात्रका टूटा हुआ छोटा टुकड़ा। ಕಲ್ಲಿನ ಚೂರು, ಹರಳು, ಹಂಚಿನ ಚೂರು,ಒಡೆದ ಮಡಿಕೆಯಚೂರು.

**गिड़गिड़ाना**– अकि विनती करना। ವಿನಂತಿ ಮಾಡು, ಅಂಗಲಾಚು.

**गिद्ध**– पु एक मांसाहारी पक्षी। ರಣಹದ್ದು.

**गिनती**– स्त्री गणना, संख्या। ಎಣಿಕೆ, ಸಂಖ್ಯೆ, ಗಣನೆ.

**—में आना** = कुछ महत्वका समझा जाना। ಪ್ರತಿಷ್ಠೆಸಿಗು, ಬೆಲೆಸಿಗು.

**—के** = थोडी संख्यामे। ಸ್ವಲ್ಪ

**गिनना**– सकि. गणना करना, प्रतिष्ठा करना। ಎಣಿಸು, ಆದರ ಮಾಡು.

**(दिन)गिनना** = किसी प्रकारसे समय विताना। ಹೇಗಾದರೂ ಕಾಲಕಳೆ, ಧೈರ್ಯದಿಂದ ದುಃಖದಲ್ಲಿ ಕಾಲ ಕಳೆ.

**गिनवाना, गिनाना**– सकि गिनने का काम दूसरेसे कराना। ಎಣಿಕೆ ಮಾಡಿಸು.

**गिनी, गिन्नी**– स्त्री चक्कर, सोनेका एक सिक्का। ಸುತ್ತಾಟ, ಭ್ರಮಣ, 'ಗಿನಿ' ನಾಣ್ಯ.

**गिय**– स्त्री. दे. 'गिउ'।

**गियान**– पु. दे. 'गिआन'।

**गिर**– पु पहाड। ಪರ್ವತ, ಗುಡ್ಡ.

**गिरगिट,गिरगिटान**-पु गिरदौना नामका जंतु। ಓತಿಕಾಟ, ಊಸರವಳ್ಳಿ? 

**—की तरह रंग बदलना** = अपने सिद्धातको वारवार वदलना। ತನ್ನ ಮತವನ್ನು ಮೇಲಿಂದ ಮೇಲೆ ಬದಲಿಸು.

**गिरगिरी**–स्त्री. वालकोका एक खिलौना। ಮಕ್ಕಳ ಆಟಿಗೆ, ಚಕ್ರ.

**गिरजा, गिरजाघर**– पु ईसाइयोका प्रार्थना गृह। ಚರ್ಚ್, ಕ್ರೈಸ್ತರ ದೇವಾಲಯ

**गिरदा**– पु. चक्कर, घेरा, तकिया,गोल थाल। ಸುತ್ತು, ವರ್ತುಲ, ತಕ್ಕೆ, ದುಂಡುದಿಂಬು,ಗುರಾಣಿ, ದುಂಡು

ತಟ್ಟಿ (ತಾಟು).

**गिरदान, गिरदौन**–पु.दे. 'गिरगिट'।

**गिरना**– अक्रि. ऊपरसे नीचे आना, मूल्य कम होना, जलाशयमें मिलना। ಜಾರಿ, ಬೀಳು, ಪತಿತನಾಗು, ಇಳಿ, ಬೆಲೆ ಕಡಿಮೆಯಾಗು, ನದಿ ಅಥವಾ ಸಮುದ್ರಕ್ಕೆ ಕೂಡು.

**गिरफ्त**– स्त्री. पकड, पकड़नेकी क्रिया। ಹಿಡಿತ, ಸೆರೆ, ಕೈದು, ವಶ.

**गिरफ़्तार**– वि. पकड़ा हुआ, ग्रस्त। ಸೆರೆ ಹಿಡಿಯಲ್ಪಟ್ಟ, ಬಂಧಿಸಲ್ಪಟ್ಟ, ಕೈದಾದ, ಗ್ರಸ್ತ.

**गिरफ़्तारी**– स्त्री. गिरफ्तार होनेका भाव या क्रिया। ಹಿಡಿತ, ಬಂಧನ, ಕೈದು, ದಸ್ತಗಿರಿ.

**गिरमिट**– पु. प्रतिज्ञा, प्रतिज्ञापत्र, छेद करनेका औजार। ಪ್ರತಿಜ್ಞೆ, ಕರಾರು, ಕರಾರುಪತ್ರ, ಬೈರಿಗೆ.

**गिरवान**– पु देवता, कालर, गला। ದೇವತೆ, ಕಾಲರು, ಕೊರಳು.

**गिरवाना**– सक्रि. दूसरेसे गिरानेका काम कराना। ಕೆಡಹಿಸು, ಬೀಳಿಸು.

**गिरवी, गिरो**– वि. वंधक। ಅಡವು ಇಟ್ಟ, ಒತ್ತೆ ಹಾಕಿದ.

**गिरवीदार**– पु. वह जिसके यहाँ कोई चीज गिरवी रखी हो। ಅಡವು ಅಥವಾ ಒತ್ತೆ ಇಟ್ಟುಕೊಂಡವ, ಅಡವು ಇಟ್ಟುಕೊಂಡು ಸಾಲ ಕೊಡುವವ.

**गिरह**– स्त्री गाँठ, जेब, नाप दो इंचका नाप, कलाबाजी। ಗಂಟು, ಸಂಧಿ, ಕೀಲು, ಜೇಬು, ಕಿಸೆ, ಎರಡೂ ಕಾಲು ಇಂಚಿನ ಅಳತೆ, ಲಾಗ, ಪಲ್ಟಿ.

**गिरहकट**–पु. जेबकट। ಕಿಸೆ ಕತ್ತರಿಸುವವ, ಕಳ್ಳ, ಗಂಟುಗೊಯ್ಕ.

**गिरहदार**– वि. गँठीला। ಗಂಟುಗಳುಳ್ಳ, ಗಂಟುಗಂಟಾದ.

**गिरहबाज़**– पु. कलैया खानेवाला कबूतर। ಹಾರುವಾಗ ಲಾಗಅಥವಾ ಗಿರಕಿ ಹೊಡೆಯುವ ಪಾರಿವಾಳ.

**गिरही**– पु. गृहस्थ। ಗೃಹಸ್ಥ.

**गिरां**– वि. महँगा, भारी। ತುಟ್ಟಿ, ಬೆಲೆಯುಳ್ಳ, ದೊಡ್ಡ, ಭಾರವಾದ.

**गिरा**– पु. वाणी, सरस्वती, कविता, जीभ। ವಾಣಿ, ಸರಸ್ವತಿ, ಕವಿತೆ, ನಾಲಿಗೆ.

**गिराना**– सक्रि. पतन करना, घटाना, टपकाना, मार डालना। ಕೆಡಹು, ಕೆಳಕ್ಕೆ ಹಾಕು, ಕಡಿಮೆ ಮಾಡು, ಜುಗ್ಗಿಸು, ಮೇಲಿನಿಂದ ಕೆಳಗೆಬಿಡು, ಬೀಳಿಸು, ಸುರಿಯು, ಕೊಂದು ಹಾಕು.

**गिरानी**– स्त्री. महँगी, अकाल, उदासी, भारीपन (पेटका)। ತುಟ್ಟಿಯಾದ, ಬರ, ಕ್ಷಾಮ, ಕೊರತೆ, ಉದಾಸೀನತೆ, ಹೊಟ್ಟೆ ಜಡವಾಗುವದು.

**गिरामी**– वि. पूज्य। ಪೂಜ್ಯರು, ಹಿರಿಯರು.

**गिरासना**–सक्रि जोरसे पकड़ना, सताना।

ಗಟ್ಟಿಯಾಗಿ ಹಿಡಿ, ತ್ರಾಸಕೊಡು.

**गिरिधारी**–पु श्रीकृष्ण। ಶ್ರೀಕೃಷ್ಣ.

**गिरी**–स्त्री. किसी बीजके भीतरका गूदा। ತಿರುಳು.

**गिरेवा**– पु छोटी पहाडी। ದಿನ್ನೆ, ಏರಿಕೆ, ಚಿಕ್ಕ ಗುಡ್ಡ.

**गिरैयाँ**– स्त्री गलेका छोटा रस्सा या बंधन। ಕಣ್ಣಿ, ಬಂಧನ. वि गिरने वाला। ಬೀಳುವವ.

**गिरो**– वि दे 'गिरवी'।

**गिर्द**– अव्य. आसपास, चारो तरफ। ಹತ್ತಿರದಲ್ಲಿ, ನಾಲ್ಕೂಕಡೆಗೆ. इर्द-गिर्द– चारो ओर। ನಾಲ್ಕೂಕಡೆಗೆ, ಸುತ್ತಲೂ, ನೆರೆಹೊರೆಯಲ್ಲಿ.

**गिर्दबाद**– पु बवंडर, वायुचक्र। ಬಿರುಗಾಳಿ, ಸುಂಟರಗಾಳಿ, ಚಕ್ರವಾತ.

**गिल**– स्त्री गारा, मिट्टी। ಗಚ್ಚು, ಜೇಡಿ ಮಣ್ಣು, ಮಣ್ಣು.

**गिलकार**– पु गारा या पलस्तर बनाने वाला। ಗಚ್ಚು, ಗಾರೆಯ ಕೆಲಸ ಮಾಡುವವ, ಗಿಲಾಯಿ ಮಾಡುವವ.

**गिलकारी**– स्त्री गारा लगानेका काम। ಗಚ್ಚು ಬಳೆಯುವ ಅಥವಾ ಗಿಲಾಯಿ ಕಲಸ.

**गिलगिला**– वि. पिलपिला। ಮಿದುವಾದ, ಜಿಗಟಾದ.

**गिलट**– पु. एक हलकी धातु, किसी धातुपर सोना चढानेका काम। 'ನಿಕೆಲ್' ಬಂಗಾರದ ನೀರು ಕೊಡುವ ಕೆಲಸ, ಚಿನ್ನದ ಮುಲಾಮು ಮಾಡುವಿಕೆ.

**गिलटी**–स्त्री बगल इत्यादिमें उठी गाँठ या ग्रंथि। ಕಂಕುಳು ಮುಂತಾದ ಸ್ಥಳದಲ್ಲಿ ಎದ್ದ ಗಂಟು, ಗ್ರಂಥಿ, ಬಾವು.

**गिलना**– सक्रि निगलना। ನುಂಗು.

**गिलबिलाना**– अक्रि साफ न बोलना। ಗುಣಗುಣಿಸು, ಅಸ್ಪಷ್ಟವಾಗಿ ಮಾತಾಡು.

**गिलम**– स्त्री ऊनका बना एक मुलायम कालीन। ಉಣ್ಣೆಯ ಮೆತ್ತಗಿನ ರತ್ನಗಂಬಳಿ. वि. नरम, कोमल। ಕೋಮಲ, ಮೃದು.

**गिलमिल**– पु. एक प्रकार का वस्त्र। ಒಂದು ತರದ ಬಟ್ಟೆ.

**गिलहरी**– स्त्री. चूहेकी भाँति का एक जंतु। ಇಣಚಿ, ಅಳಿಲು.

**गिला**–पु शिकायत, उलाहना। ನಿಂದೆ, ದೂರು, ಮೊರೆ, ಚಾಡಿ.

**गिलान**– स्त्री ग्लानि, घृणा। ದುಃಖ, ಗ್ಲಾನಿ, ತಿರಸ್ಕಾರ.

**ग़िलाफ़**– पु खोल, म्यान। ಆವರಣ, ಲೇಪ, ಒರೆ, ಖಡ್ಗಕೋಶ.

**गिलास**– पु. पानी पीनेका गोल लंबा पात्र। ಚೆಂಬು, ಗ್ಲಾಸು, ಬಟ್ಟಲು.

**गिलिम**– पु दे 'गिलम'।

**गिलोला**– पु गुलेलसे फेंकनेकी मिट्टीकी गोली। ಗುಲೇಲಿ (ರಬ್ಬರ ಕವಣೆ) ನಿಂದ ಒಗೆಯುವ ಮಣ್ಣಿನ ಗುಳಿಗೆ, ಕವಣೆ ಕಲ್ಲು.

गिलौरी– स्त्री. पानका बीड़ा। ವಾನ್ ಪಟ್ಟಿ, ವೀಳ್ಯ.

गिलौरी दान– पु. पानदान। ವೀಳ್ಯ ವಿಡುವ ಡಬ್ಬಿ.

गिल्यान– पु दे 'गिल्लान'।

गिल्ली– स्त्री. दे 'गुल्ली'।

गींजना– सक्रि किसी कोमल वस्तुको हाथसे मलकर खराब कर देना। ಕಿವುಚು, ಕೈಯಿಂದ ತಿಕ್ಕಿ ಸಿಂಗೆ ಸಿಂಗೆ ಮಾಡು.

गीव, गीउ= स्त्री गरदन। ಕುತ್ತಿಗೆ, ಕೊರಳು, ಗೋಣು.

गीड, गीदर–पु आँखका मैल। ಕಣ್ಣಿನ ಹೊಲಸು, ಪಿಚ್ಚು.

गीत– पु. गाना, यश, प्रशंसा। ಗೀತೆ, ಹಾಡು, ಯಶ, ಕೀರ್ತಿ, ಪ್ರಶಂಸೆ.

गीति–स्त्री गान, गीत। ಹಾಡು,ಗೀತೆ.

गीदड़, गीदर– पु, सियार। ನರಿ. वि. कायर। ಹೇಡಿ, ಅಂಜುಬುರುಕ.

—भबकी = झूठी धमकी। ಗೊಡ್ಡು ಬೆದರಿಕೆ, ಜೊಳ್ಳು ಬೆದರಿಕೆ.

गीदी– वि डरपोक। ಅಂಜುಬುರುಕ, ಪುಕ್ಕ, ಹೇಡಿ.

गीध– पु. गिद्ध। ರಣಹದ್ದು, ಗಿಡಗ.

गीधना– अक्रि. लुब्ध होना, परचना। ಹಂಬಲಿಸು, ಹಾತೊರೆ, ಲುಬ್ಧ ನಾಗು, ರುಚಿಹತ್ತು.

गीबत– स्त्री. गैरहाजिरी, चुगलखोरी। ಅನುಪಸ್ಥಿತಿ, ಗೈರುಹಾಜರಿ,ಚಾಡಿ, ದೂರು.

गीर– स्त्री. वाणी, गिरा। ಮಾತು.

गीर– वि. पकड़नेवाला, लेनेवाला। ಹಿಡಿಯುವವ, ಗೆಲ್ಲುವವ.

गीला– वि. आर्द्र, तर। ಆರ್ದ್ರ, ಹಸಿಯಾದ, ತೇವವೆಯಾದ.

गीव,गीवा– स्त्री. दे 'गीव'।

गुग, गुंगा– वि. दे. 'गूंगा'।

गुगी–स्त्री दो मुँहवाला सर्प। ದ್ವಿಮುಖ ಸರ್ಪ, ಇರ್ತಲೆ ಹಾವು.

गुँगुआना–अक्रि गूँगे की तरह बोलना, धुआँ देना। ಮೂಕನಂತೆ ಮಾತನಾಡು, ಹೊಗೆಯಾಗು.

गुंचा– पु. कली, आमोद-प्रमोद, विहार। ಮೊಗ್ಗೆ,ಮೋಜು,ಮನೋರಂಜನೆ, ವಿಹಾರ.

गुंजन– पु गूँजने या भनभनानेकी आवाज। ಗುಂಜಾರವ, ಝೇಂಕಾರ, ಗುಂಯಿಗುಟ್ಟುವಿಕೆ.

गुंजना– अक्रि गुनगुनाना,भनभनाना। ಗುಂಜಾರವ ಮಾಡು, ಝೇಂಕಾರ ಮಾಡು.

गुंजनिकेतन– पु. भौंरा। ಭ್ರಮರ.

गुंजाइश–स्त्री. अवकाश, समाई,सुभीता। ಎಡೆ, ಅವಕಾಶ, ಸೌಕರ್ಯ.

गुंजान– वि. सघन, गाढा। ದಟ್ಟ, ನಿಬಿಡವಾದ.

गुंजायमान– वि. गूँजता हुआ। ಗುಂಜಾರವಮಾಡುವ,ಝೇಂಕರಿಸುವ.

गुंजार– पु भौंरेका गूँजना। ಗುಂಜಾರವ, ಝೇಂಕಾರ.

गुंजारना– अक्रि. दे 'गूँजना'।

गुंठा–पु एक प्रकार का घोडा। ಒಂದು ಜಾತಿಯ ಕುದುರೆ, ಟಟ್ಟು. वि नाटा। ಗಿಡ್ಡ, ಕುಳ್ಳ.

गुडई– स्त्री गुंडापन। ನೀಚತನ, ದುಷ್ಟತನ, ಪುಂಡತನ.

गुंडली– स्त्री गेंडुरी। ಸಿಂಬಿ, ಸುರುಳಿ.

गुंडा–वि. बदमाश, दुराचारी। ನೀಚ, ದುಷ್ಟ, ಪುಂಡ, ಘಟಿಂಗ, ಪೋಕರಿ, ಪೋಲಿ.

गुंथना– अक्रि गूँथा जाना। ಹೆಣೆಯಲ್ಪಡು, ಪೋಣಿಸಲ್ಪಡು, ಸಿಕ್ಕು ಬೀಳು.

गुंधना– अक्रि साना जाना। ನಾದಲ್ಪಡು, ಕಿವುಚಲ್ಪಡು, ಕೂಡಿಸಲ್ಪಡು. सक्रि गूँथना। ಹೆಣೆ, ಪೋಣಿಸು.

गुंधवाना– सक्रि 'गूंधना'का प्रे रूप।

गुंधाई, गुंधावट– स्त्री गूँधने या गूँथने की क्रिया या मजदूरी। ನಾದುವ ಅಥವಾ ಹೆಣೆಯುವ ಕೆಲಸ ಅಥವಾ ಕೂಲಿ.

गुंफ– पु. गुच्छा, उलझन, गलमुच्छा। ಗೊಂಚಲು, ಗೊಂಡೆ, ಸಿಕ್ಕು, ತೊಡಕು, ಕಲ್ಲಿಮೀಸೆ, ಗಲ್ಲಮೀಸೆ

गुंफन– पु. गूंथना, उलझाव। ಹೆಣೆಯಲ್ಪಡುವದು, ಸಿಕ್ಕು, ತೊಡಕು.

गुंबज, गुंबद– पु. गोल ऊँची छत। ಶಿಖರ, ಗುಮ್ಮಟ, ಬುರುಜ.

गुंबा– पु. चोट लगनेपर सूजन आना। ಬಾಸುಂಡೆ, ಗಮುವು.

गुंभी– स्त्री. कोपल, अंकुर। ಅಂಕುರ, ಚಿಗುರು.

गुआ– पु. चिकनी सुपारी। ಚಿಕನಿ ಅಡಿಕೆ.

गुआर– पु. ग्वाला। ಗವಳಿಗ.

गुइयाँ– पु स्त्री सहचर या सहचरी। ಸಂಗಡಿಗ, ಗೆಳತಿ.

गुग्गुर, गुग्गुल– पु. एक प्रकार का सुगंधित पदार्थ। ಗುಗ್ಗುಳ.

गुच्ची– स्त्री. गुल्ली– डंडा खेलनेका बहुत छोटा गड्डा। ಚಿಣೀಫಣೀ ಆಟದ ಚಿಕ್ಕ ತಗ್ಗು.

गुच्छ, गुच्छक– पु. लडी, फुंदना, हार, मोरकी पूंछ, घासका मुट्ठा। ಸರ, ಗೊಂಚಲು, ತುರಾಯಿ, ಹಾರ, ಮಾಲೆ, ನವಿಲುಗರಿ, ಹುಲ್ಲಿನಹಿಡಿ.

गुच्छा– पु दे 'गुच्छ'।

गुच्छेदार– वि. गुच्छेवाला। ಗೊಂಚಲುಗಳುಳ್ಳ, ಕುಚ್ಚುಗಳುಳ್ಳ.

गुज़र– पु. निर्वाह, पहुंच, गति। ನಿರ್ವಾಹ, ಹೊಟ್ಟೆ ತುಂಬಿಕೊಳ್ಳುವದು, ಪ್ರವೇಶ, ಗತಿ, ಸಾಗುವಿಕೆ.
—जाना = मर जाना। ಸಾಯು.

गुज़रगाह–स्त्री रास्ता, किश्ती। ಹಾದಿ, ಮಾರ್ಗ, ದೋಣಿ.

गुज़रना– अक्रि बीतना, निबहना, कहींसे होकर जाना। ಕಳೆ, ಗತಿಸು, ಸಾಗು, ಹೋಗು, ಹಾಯು.

गुज़र-बसर, गुज़रान– पु. निर्वाह, कालक्षेप। ನಿರ್ವಾಹ, ಕಾಲಯಾಪನೆ

गुजरिया– ग्वालिन । ಗವಳಗಿತ್ತಿ.

गुजरेटी– स्त्री. ग्वालेकी बेटी । ಗವಳಿಗರ ಹುಡುಗಿ.

गुजश्ता– वि बीता हुआ । ಕಳೆದುಹೋದ, ಗತ, ಭೂತ (ಕಾಲ).

गुज़ारना– सक्रि बिताना, पेश करना । ಕಳೆ, ಕಾಲಯಾಪನೆ ಮಾಡು, ಒಪ್ಪಿಸು, ಸಮರ್ಪಿಸು.

गुजारा– पु निर्वाह, वृत्ति, महसूल लेनेका स्थान । ನಿರ್ವಾಹ, ಜೀವನವೃತ್ತಿ, ಆಹಾರ, ಜಕಾತಿ ತೆಗೆದುಕೊಳ್ಳುವ ಸ್ಥಳ, ಸುಂಕದ ಕಟ್ಟೆ.

गुजारिश– स्त्री. अर्ज, निवेदन । ಅರ್ಜಿ, ಅರಿಕೆ, ಪ್ರಾರ್ಥನೆ, ಬಿನ್ನಹ.

गुझरोट, गुझरौट, गुझौट– पु कपडेकी सिकन । ಮಡಿಕೆ, ನಿರಿಗೆ स्त्रियों के नाभी के पासका भाग । ಹೆಂಗಸರ ನಾಭಿಯ ಸಮೀಪದ ಭಾಗ.

गुझिया– स्त्री. एक पक्वान । ಕರ್ಜಿಕಾಯಿ.

गुटकना– सक्रि निगल जाना । ನುಂಗಿಬಿಡು. अक्रि गुटरगूँ करना । ಪಾರಿವಾಳದ ಹಾಗೆ ಧ್ವನಿಮಾಡು, ಕುಟ್ರುಹಾಕು.

गुटका– पु छोटी पुस्तक । ಸಣ್ಣ ಪುಸ್ತಕ, ಚಿಕ್ಕ ಪುಸ್ತಕ.

गुटकाना– सक्रि बजाना । ಬಾರಿಸು.

गुटरगूँ–स्त्री कबूतरोंका बोलना । ಪಾರಿವಾಳದ ಧ್ವನಿ, ಕುಟ್ರು.

गुटिका– स्त्री गोली । ಗುಳಿಗೆ, ಮಾತ್ರೆ.

गुट्ट– पु. समूह, दल । ಸಮೂಹ,ದಲ, ಗುಂಪು, ಮಂಡಲ, ಹಿಂಡು.

गुट्ठल– वि. गुठलीवाला, मूर्ख । ದೊಡ್ಡ ಗೊರಟೆಗಳುಳ್ಳ (ಬೀಜ), ಮೂರ್ಖ,ಹೆಡ್ಡ. पु.गाँठ । ಗಂಟು, ಗೆಡ್ಡೆ, ಬಾವು.

गुठली– स्त्री. फलका बडा बीज । ಗೊರಟೆ, ಬೀಜ, ವಾಟೆ.

गुडंबा– पु चीनी मे पकाया हुआ आमका गूदा । ಮಾವಿನ ಹಣ್ಣಿನ ಮುರಬ್ಬ, ಗುಳಂಬ.

गुड– पु. ऊखका जमाया हुआ रस । ಬೆಲ್ಲ.

गुडगुडाना– अक्रि गुडगुड़ करना । ಗುಡಗುಡ ಸಪ್ಪಳ ಮಾಡು. सक्रि हुक्का पीना । ಹುಕ್ಕಾ ಸೇದು.

गुडगुडी– स्त्री एक तरहका हुक्का । ಗುಡಗುಡಿ, ಹುಕ್ಕಾ

गुडधनिया, गुडधानी– स्त्री गेहूँ के लड्डू । ಗೋದಿಯ ಲಾಡು.

गुडाकू, गुडाखू– पु. वह तंबाकू जिसमें गुड मिलाया गया हो । ಬೆಲ್ಲ ಕಲಿಸಿದ ತಂಬಾಕು, ಬೆಲ್ಲ ಬೆರಿಸಿದ ಹೊಗೆಸೊಪ್ಪಿನ ಪುಡಿ.

गुडिया– स्त्री. कपडोंकी बनी पुतली । ಗೊಂಬೆ, ಬಟ್ಟೆಗಳಿಂದ ಮಾಡಿದ ಆಟದ ಬೊಂಬೆ.

गुडी– स्त्री. पतंग, गाँठ, द्वेष । ಪತಂಗ, ಗಂಟು, ದ್ವೇಷ.

गुड्डा– पु. कपडेका पुतला, बडी पतंग ।

ಬಟ್ಟೆಯ ದೊಡ್ಡ ಗೊಂಬೆ,ಪತಂಗ, ಗಾಳೀಪಟ.

**गुड्डी**– स्त्री. पतंग, घुटनेकी हड्डी, छोटा हुक्का । ಪತಂಗ, ಗಾಳೀಪಟ, ಮೊಣಕಾಲು ಚಿಪ್ಪು, ಚಿಕ್ಕ ಹುಕ್ಕಾ

**गुढना**– अक्रि छिपना । ಮುಚ್ಚು, ಮರೆಯಾಗು.

**गुण**– पु दे 'गुन'।

**गुणग्राहक**– वि गुणियो का आदर करनेवाला । ಗುಣಗ್ರಾಹಕ, ಒಳ್ಳೆಯ ಗುಣವುಳ್ಳವರನ್ನು ಆದರಿಸುವವ.

**गुणा**– स्त्री. गणितकी क्रिया विशेषण । ಗುಣಾಕಾರ, ಗುಣಿಸುವಿಕೆ,

**गुणाढ्य**– वि गुण पूर्ण । ಗುಣವುಳ್ಳ, ಬುದ್ಧಿವಂತ, ಜ್ಞಾನಿ.

**गुणानुवाद**–पु गुणवर्णन, प्रशंसा । ಗುಣ ವರ್ಣನೆ, ಸ್ತುತಿ.

**गुणी**– वि. गुणवान, निपुण, झाडफूंक करनेवाला । ಗುಣವಂತ, ನಿಪುಣ, ಬುದ್ಧಿವಂತ, ಮಂತ್ರವಾದಿ.

**गुत्थमगुत्था**– पु भिड़ंत, फॅसाव । ಗುದ್ದಾಟ, ಜಗಳ, ಹೊಡೆದಾಟ, ಸಿಕ್ಕು, ತೊಡಕು.

**गुत्थी**– स्त्री. उलझन, गॅाठ। ತೊಡಕು, ಗಂಟು.

**गुथना**–अक्रि एक गुच्छेमे पिरोये जाना, परस्पर लिपट जाना । ಹೆಣೆಯಲ್ಪಡು, ಕೂಡಿ ಬಿಡು, ಕುಸ್ತಿಯಲ್ಲಿ ಒಬ್ಬರನ್ನೊಬ್ಬರು ಗಟ್ಟಿಯಾಗಿ ಹಿಡಿ, ಸುತ್ತಿಕೊಳ್ಳು, ಅಪ್ಪಿಕೊಳ್ಳು.

**गुथवाना**– सक्रि गुथनेका काम दूसरेसे कराना । ಹೆಣೆಯಿಸು, ಪೋಣಿಸು, ಕೂಡಿಸು

**गुदकार, गुदकारा**– वि गुदार, मॅासल । ತಿರುಳುಳ್ಳ, ಮಾಂಸ ತುಂಬಿದ, ಮೃದುವಾದ, ಕೊಬ್ಬಿದ.

**गुदगुदा**– वि दे 'गुदकार'।

**गुदगुदाना**– अक्रि हॅसने के लिये काख आदिको सहलाना, उत्तेजित करना । ನಗಿಸು, ಚಕ್ಕುಲಗುಲಿಯಿಕ್ಕು, ಕಂಕುಳಲ್ಲಿ ಕೈಯಿಟ್ಟು ನಗಿಸು, ಹುರಿದುಂಬಿಸು, ಉಲ್ಲಾಸ ಪಡಿಸು.

**गुदगुदाहट, गुदगुदी**– स्त्री. अंगस्पर्श के कारण पैदा हुई सुरसुराहट, उमंग, उत्कट इच्छा । ಚಕ್ಕುಲಗುಳಿ, ಉತ್ಸಾಹ, ಆನಂದ, ಮೋಜು, ಅಭಿಲಾಷೆ, ಉತ್ಕಟ ಇಚ್ಛೆ.

**गुदड़िया**– पु गुदड़ी धारण करनेवाला, फटे पुराने वस्त्र वेचनेवाला । ಚಿಂದಿ ಬಟ್ಟೆ ತೊಡುವವ, ಹಳೆಯ ಅರಿವೆ ಮಾರುವವ.

**गुदड़ी**– स्त्री. फटे पुराने वस्त्रका बना बिछावन । ಚಿಂದಿ, ಚಿಂದಿಗಳಿಂದ ಮಾಡಿದ ಹಾಸಿಗೆ, ಹೊದಿಕೆ.

—**के लाल** = तुच्छ स्थान मे उच्च वस्तु, छिपा हुआ रत्न । ತುಚ್ಛ ಸ್ಥಾನದಲ್ಲಿದ್ದ ಉಚ್ಚ ವಸ್ತು, ಇದ್ದಲಿಯಲ್ಲಿ ಅಡಗಿದ ರತ್ನ, ತಿರುಕರಂತೆ ಕಾಣುವ ಮಹಾಜ್ಞಾನಿ.

गुदना– अक्रि. चुभना । ಚುಚ್ಚು, ಹೊಗು, ಇರಿಯಲ್ಪಡು.

गुदर– पु. राजदरबारकी हाजिरी । ರಾಜದರಬಾರದ ಹಾಜರಿ.

गुदरना– अक्रि. गुजरना, अलग रहना । ಕಳೆ, ದೂರ ನಿಲ್ಲು, ತ್ಯಜಿಸು. सक्रि सूचित करना । ಪ್ರಾರ್ಥಿಸು, ಸೂಚಿಸು, ಒಪ್ಪಿಸು.

गुदरी– स्त्री दे. 'गुदड़ी' ।

गुदरेन– स्त्री. परीक्षा, पढा हुआ पाठ भली भाँति सुनाना । ಪರೀಕ್ಷೆ, ಓದಿದ್ದನ್ನು ಚನ್ನಾಗಿ ಓದಿ ತೋರಿಸು.

गुदाना– सक्रि. चुभवाना । ಚುಚ್ಚಿಸು, ಹಚ್ಚೆ ಚುಚ್ಚಿಸು.

गुदाम– पु. अनेक पदार्थों के रखनेका स्थान । ಪಖಾರ, ಗೋಡೌನ, ಉಗ್ರಾಣ, ಕೋಠಿ.

गुदारना–सक्रि पढ़ना, सुनाना । ಓದು, ಕೇಳಿಸು, ಹೇಳು

गुदारा– पु. नदी पार करना । ನದಿಯನ್ನು ದಾಟುವದು वि गूदेदार । ದಪ್ಪ, ತಿರುಳು ಬಹಳವಾಗಿರುವ.

गुन–पु. विशेषता, धर्म, शील, प्रवीणता, धनुषकी प्रत्यंचा, प्रभाव, रस्सी, रीति, कला, बुद्धि । ವಿಶೇಷತೆ, ಧರ್ಮ, ಸದ್ವೃತ್ತಿ. ಶೀಲ, ಪ್ರಾವೀಣ್ಯ, ಹೆದೆ, ಬಿಲ್ಲಿನ ದಾರ, ಪ್ರಭಾವ, ಹಗ್ಗ, ರೀತಿ, ನೀತಿ, ಕಲೆ, ಬುದ್ಧಿ.

गुनगुनाना–अक्रि. गुनगुन करना, धीमे, अस्पष्ट स्वरमे बोलना । ಅಸ್ಪಷ್ಟವಾಗಿ ಮಾತನಾಡು, ಮೂಗಿನಲ್ಲಿ ಮಾತನಾಡು.

गुनगोरि–स्त्री. पतिव्रता स्त्री । ಪತಿವ್ರತೆ, ಒಳ್ಳೆಯ ಸ್ತ್ರೀ.

गुनचा– पु. कली । ಮೊಗ್ಗೆ.

गुनना– सक्रि विचार करना, सोचना, वर्णन करना, गिनना, गुणा करना, रटना । ವಿಚಾರ ಮಾಡು, ಮನನ ಮಾಡು, ವರ್ಣಿಸು, ಹಾಡು, ಹರಸು, ಎಣಿಸು, ಗುಣಿಸು, ಸಾರ ಮಾಡು.

गुनहगार, गुनही– पु. दोपी, पापी । ಅಪರಾಧಿ, ಅಪಾದಿತ, ಪಾಪಿಷ್ಠ.

गुना– पु गुणा करनेकी क्रिया, आवृत्ति, उतनी वार (जैसे दुगुना, तिगुना) । ಗುಣಾಕಾರ, ಪಟ್ಟು, ಮಡಿ.

गुनाह–पु अपराध, पाप । ಅಪರಾಧ, ತಪ್ಪು, ಪಾಪ.

गुनाहगार– पु. दे. 'गुनहगार' ।

गुनाही– वि. दे. 'गुनहगार' ।

गुनिया–वि. दे 'गुणी' । पु मेमारका दीवारकी सीधाई नापनेका यंत्र । ತಿಗಟಿ, ಮೂಲೆಮಟ್ಟ, ಉಪ್ಪಾರನ ಒಂದು ಉಪಕರಣ.

गुनी, गुनीला– वि. दे 'गुणी' ।

गुन्ना– पु. अनुस्वार । ಅನುಸ್ವಾರ.

गुपचुप– क्रिवि. चुपचाप । ಗೊತ್ತಾಗದಂತೆ, ಗೌಪ್ಯವಾಗಿ. पु एक मिठाई । ಒಂದು ಪಕ್ವಾನ್ನ.

गुपाल–पु. गोपाल। ಗವಳಿಗ, ಶ್ರೀಕೃಷ್ಣ

गुप्त– वि छिपा हुआ, गूढ, रक्षित। ಗುಪ್ತ, ಮುಚ್ಚಿದ, ಗೂಢ, ಕಠಿಣ, ರಕ್ಷಿತ.

गुप्तचर– पु जासूस। ಗುಪ್ತಚರ, ಸಿ. ಐಯ್. ಡಿ. ಬೇಹುಗಾರ.

गुफना– पु दे गोफन। ಕವಣಿ

गुफा– स्त्री कदरा, गुहा। ಕಂದರ, ಗುಹೆ.

गुफ्तगू, गुफ़्तार– स्त्री बातचीत। ಸಂಭಾಷಣೆ, ಮಾತುಕತೆ.

गुबरैला, गुबरौला– पु एक गोबरका कीडा। ಡೊಣ್ಣೆ ಹುಳು, ಸಗಣಿ ಹುಳು.

गुबार–पु. धूल, द्वेष। ಧೂಳು, ದ್ವೇಷ, ಸಿಟ್ಟು.

गुबारा, गुब्बाडा, गुब्बारा– पु कागज का बना थैला जो गरम हवा या भाप भरनेपर उडता है। ಆಕಾಶ ಬುಟ್ಟಿ, ಹೊಗೆಗುಮ್ಮಟ.

गुम– वि. गुप्त, गायब, खोया हुआ, मौन। ಗುಪ್ತ, ಬಚ್ಚಿಟ್ಟ, ಮಾಯ ವಾದ, ಕಳಕೊಂಡ, ಶಾಂತ.

गुमटा– पु. गोल सूजन जो मस्तक में चोट लगनेसे उत्पन्न होते हैं। ಬಾವು, ಬುಗುಟಿ, ಗದುವು.

गुमना– अक्रि लुप्त हो जाना। ಕಳೆ, ಮಾಯವಾಗು.

गुमनाम– वि. बगैर नामके, अप्रसिद्ध। ಹೆಸರಿಲ್ಲದ, ಅಜ್ಞಾತ, ಅಪ್ರಸಿದ್ಧ.

गुमर– पु घमंड, अभिमान, गुबार, कानाफूसी। ಗರ್ವ, ಅಭಿಮಾನ, ಕ್ರೋಧ, ದ್ವೇಷ, ಕಿವಿ ಮಾತು, ಗುಸುಗುಸು ಮಾತು.

गुमराह– वि भूला हुआ, खराब रास्ते पर जानेवाला। ಹಾದಿ ತಪ್ಪಿದ, ಪಥಭ್ರಷ್ಟ, ಕುಮಾರ್ಗಿ, ದುರಾ ಚಾರಿ.

गुमान–पु घमंड, अनुमान, लोकनिंदा। ಗರ್ವ, ಸೊಕ್ಕು, ಅಭಿಮಾನ, ಊಹೆ, ಅಂದಾಜು, ಜನರ ನಿಂದೆ, ತಪ್ಪು ತಿಳುವಳಿಕೆ.

गुमाश्ता– पु. मुनीम, एजंट। ಕಾರ-ಕೂನ, ಗುಮಾಸ್ತ, ಏಜಂಟ.

गुम्मट– पु गुम्वज। ಗೋಪುರ, ಗು-ಮ್ಮಟ

गुरंब, गुरबा– पु. दे 'गुडंबा'।

गुर– पु मूलमंत्र, भेद, युक्ति, गुड। ಮೂಲಮಂತ್ರ, ರಹಸ್ಯ, ಯುಕ್ತಿ, ಬೆಲ್ಲ.

गुरगा– पु शिष्य, चेला, अनुचर, नौकर, भेदिया। ಶಿಷ್ಯ, ಸೇವಕ, ಅನುಚರ, ಬೇಹುಗಾರ.

गुरज, गुरुज– पु गुर्ज, गदा। ಗದೆ.

गुरदा– पु कलेजे के पासका एक अंग, साहस। ಯಕೃತ್ತು, ಮೂತ್ರಾಶಯ, ಸಾಹಸ, ಧೈರ್ಯ.

गुरफ़ा– पु. छत के ऊपर का कमरा, खिडकी। ಮಹಡಿ, ಉಪ್ಪರಿಗೆ, ಜಾಳಾಂಧ್ರ, ಕಿಡಿಕಿ.

गुरबत– स्त्री. विदेश में रहना, सफर, नम्रता, पराधीनता। ಪರದೇಶದಲ್ಲಿ ರುವದು, ಪ್ರವಾಸ, ಪಾರತಂತ್ರ್ಯ.

गुरमुख– वि. दे. 'गुरुमुख'।

गुरम्मर– पु. मीठे आम का पेड़। ಸಿಹಿ ಮಾವಿನ ಗಿಡ.

गुरवी– वि. घमंडी। ಗರ್ವಿಷ್ಠ, ಅಭಿಮಾನಿ.

गुरसी– स्त्री. अँगीठी। ಅಗ್ಗಿಷ್ಟಿಕೆ.

गुराई– स्त्री. गौरवर्ण। ಗೌರವರ್ಣ, ಬಿಳೀವರ್ಣ.

गुरिया– स्त्री मनका, दाना, छोटा टुकडा। ಕಾಳು, ಚಕ್ಕೆ, ತುಂಡು.

गुरीरा– वि उत्तम, मीठा। ಉತ್ತಮ, ಸಿಹಿಯಾದ.

गुरु– वि भारी। ದೊಡ್ಡ, ಭಾರವಾದ. पु. शिक्षक, आचार्य, बृहस्पति। ಶಿಕ್ಷಕ, ಗುರು, ಆಚಾರ್ಯ, ಬೃಹಸ್ಪತಿ.

गुरुआई– स्त्री. गुरु का काम, धूर्तता। ಶಿಕ್ಷಕನ ಕೆಲಸ, ಗುರುವಿನ ಕೆಲಸ, ಧೂರ್ತತನ, ತಂತ್ರ, ಉಪಾಯ.

गुरुआनी, गुरुआइन, गुरुवाइन– स्त्री गुरुपत्नी, अध्यापिका। ಗುರುಪತ್ನಿ, ಶಿಕ್ಷಕಿ.

गुरुकुल– पु. विद्यापीठ। ವಿದ್ಯಾಪೀಠ.

गुरुजन– पु. पूज्यजन, बड़े लोग। ಪೂಜ್ಯರು, ಹಿರಿಯರು.

गुरुता, गुरुताई– स्त्री. भारीपन, गौरव, गुरुका काम। ಭಾರ, ಪಟ್ಟ, ಗೌರವ. ಮಹತ್ವ, ಗುರುವಿನ ಕೆಲಸ.

गुरुत्व– पु दे 'गुरुता'।

गुरुदार– स्त्री. गुरुपत्नी। ಗುರುಪತ್ನಿ.

गुरुद्वारा– पु. गुरुके रहनेका स्थान, सिक्खोंका मंदिर। ಅಧ್ಯಾಪಕನು ಇರುವ ಸ್ಥಳ, ಗುರುಗಳ ಮಠ, ಸೀಖರ ದೇವಾಲಯ.

गुरुविनी–वि.स्त्री. गर्भवती। ಗರ್ಭವತಿ.

गुरुभाई– वि. एक ही गुरु के चेले। ಒಂದೇ ಗುರುವಿನ ಶಿಷ್ಯರು, ಸಹಪಾಠಿಗರು.

गुरुमुख– वि. जिसने गुरुमंत्र लिया हो। ದೀಕ್ಷಿತ, ಗುರುಮಂತ್ರ ತಕ್ಕೊಂಡವ.

गुरुमुखी– स्त्री. एक पंजाबी लिपि। ಒಂದು ಪಂಜಾಬಿ ಲಿಪಿ.

गुरू– पु अध्यापक, पुरोहित। ಅಧ್ಯಾಪಕ, ಶಿಕ್ಷಕ, ಆಚಾರ್ಯ, ಪುರೋಹಿತ.

गुरूर– पु. दे 'गरूर'।

गुरेरना– सक्रि घूरना। ದುರುಗುಟ್ಟಿ ನೋಡು, ಸಿಟ್ಟಿನಿಂದ ನೋಡು.

गुरेरा– पु दे. 'गुलेला'।

गुर्गा– पु भेदिया, नौकर, शिष्य। ಗುಪ್ತಚಾರ, ನೌಕರ, ಶಿಷ್ಯ.

गुर्ज– पु. दे. 'गुरज'।

गुर्जर– पु. गुजराती। ಗುಜರಾತಿ ಮನುಷ್ಯ.

गुर्दा– पु दे 'गुरदा'।

गुर्राना– अक्रि. क्रोधसे बोलना। ಗುರು ಗುಟ್ಟು, ಸಿಟ್ಟಿನಿಂದ ಮಾತಾಡು.

**गुर्विणी**– वि. स्त्री. गर्भवती । ಗರ್ಭವತಿ.

**गुर्वी**– वि. स्त्री. श्रेष्ठ, विशाल, गर्भवती । ಶ್ರೇಷ್ಠ, ವಿಶಾಲ, ಗರ್ಭವತಿ.

**गुल**– पु. गुलाव पुष्प, फूल, तंवाकू या वत्तीका जला हुआ अंश, विंदी । ಗುಲಾಬಿ ಹೂ, ಪುಷ್ಪ, ಹೂವು, ತಂಬಾಕು ಅಥವಾ ಬತ್ತಿಯ ಸುಟ್ಟ ಭಾಗ, ದೀಪದ ಕುಡಿ, ಬೊಟ್ಟು, ಮುದ್ರೆ.

**गुल**– पु शोर । ಗದ್ದಲ, ಗಲಾಟೆ.

**गुल अब्बास**– पु. गुलबॅास । ಸಂಜೆ ಮಲ್ಲಿಗೆ.

**गुलकंद**–पु. चाशनी में मिले हुए गुलावके फूल । ಗುಲಕಂದ, ಗುಲಾಬಿ ಹೂವಿನ ಮುರಬ್ಬ.

**गुलकारी**– स्त्री बेलबूटे का काम । ಕಸೂತಿ ಕೆಲಸ, ಹೂ ಚಿತ್ರಿಸುವ ಕೆಲಸ.

**गुलगुल**– वि. नरम, मुलायम । ಕೋಮಲವಾದ, ಮೃದುವಾದ, ನುಣುಪಾದ.

**गुलगुला**– वि. नरम । ಕೋಮಲ, ಮೃದುವಾದ. पु एक पकवान, कनपटी । ಒಂದು ಪಕ್ವಾನ್ನ, ಗಂಡಸ್ಥಳ.

**गुलगुलाना**– सक्रि दे 'गुदगुदाना'। गुलगुला या मुलायम बनाना । ಮೆತ್ತಗೆ ಅಥವಾ ನುಣುಪುಮಾಡು, ಮೃದುಮಾಡು.

**गुलगोथना**–पु. गाल फूला हुआ मनुष्य । ಕೆನ್ನೆಗಳು ಉಬ್ಬಿದ ಮನುಷ್ಯ.

**गुलचा**–पु. गालपर अँगुलियों का हलका आघात । ಕೆನ್ನೆಯ ಮೇಲೆ ಪ್ರೇಮದಿಂದ ಸಾವಕಾಶವಾಗಿ ಹೊಡೆಯುವದು.

**गुलचाना, गुलचियाना**– सक्रि गुलचा मारना । ಪ್ರೇಮದಿಂದ ಕೆನ್ನೆಗೆ ಸಾವಕಾಶವಾಗಿ ಹೊಡೆ.

**गुलछर्रा**– पु अनुचित भोगविलास, मौज । ಅನುಚಿತ ಭೋಗವಿಲಾಸ, ಸುಖ, ಮಜಾ.

**—उडाना** = मौज करना । ಸುಖಪಡೆ, ಮೋಜು ಮಾಡು, ಆನಂದಿಸು, ವಿಲಾಸ ಮಾಡು.

**गुलज़ार**– वि. हराभरा, शोभा और आनंदयुक्त । ಹಸುರು ಮುರಿಯುವ, ಸುಂದರ, ಆನಂದಿತ, ರಮ್ಯ. पु. बाग । ತೋಟ, ಹೂದೋಟ.

**गुलझटी**– स्त्री. कठिण गॉठ, सिकुड़न । ಕಗ್ಗಂಟು, ನಿರಿಗೆ, ಸುಕ್ಕು.

**गुलदस्ता**– पु. फूलो और पत्तियोका गुच्छा । ಹೂವು ಹಾಗು ಎಲೆಗಳ ಗುಚ್ಛ, ಸ್ತಬಕ.

**गुलदान**– पु. गुलदस्ता रखनेका पात्र । ಹೂಗುತ್ತಿಯಿಡುವ ಪಾತ್ರೆ.

**गुलदुम**–पु. बुलबुल । ಬುಲಬುಲ ಪಕ್ಷಿ.

**गुलनार**– पु. अनारका फूल । ದಾಳಿಂಬರ ಹೂವು.

**गुलफ़ाम**– वि सुंदर । ಸುಂದರ.

**गुलबकावली**– स्त्री. एक प्रकारका सफेद

और सुगंधित फूल। ಒಂದು ತರದ ಹೂವು.

गुलबदन– पु. एक तरहका रेशमी कपड़ा। ಒಂದು ತರದ ರೇಶ್ಮೆ ಅರಿವೆ. वि. जिसका बदन गुलाबके फूलों के समान सुंदर और कोमल हो, परम सुंदर। ಗುಲಾಬಿ ಹೂವಿನ ಹಾಗೆ ಸುಂದರ ಹಾಗೂ ಕೋಮಲವಾದ ಶರೀರವುಳ್ಳ, ಪರಮ ಸುಂದರ.

गुलबर्ग– पु. गुलाबकी पत्ती। ಗುಲಾಬಿ ಹೂವಿನ ಎಸಳು, ಪಕಳಿ.

गुलमेंहदी– स्त्री. एक फूलोंवाला पौधा। ಒಂದು ಹೂವಿನ ಗಿಡ(ಗೋರಂಟಿ).

गुलरू– वि खूब सूरत। ಸುಂದರ.

गुलशन– पु उद्यान, वाटिका। ಉದ್ಯಾನ, ತೋಟ, ಪುಷ್ಪವಾಟಿಕೆ.

गुलशब्बो– स्त्री. रजनीगंधा फूल। ರಜನೀಗಂಧ.

गुलाब– पु. एक कँटीला पौधा तथा उसका फूल। ಗುಲಾಬೀ ಹೂವು ಅಥವಾ ಗುಲಾಬಿ ಗಿಡ.

गुलाबजामुन–पु.एक मिठाई। ಗುಲಾಬ ಜಾಮೂನ.

गुलाबपाश–पु. गुलाब छिड़कनेका पात्र। ಪನ್ನೀರುದಾನಿ, ಅತ್ತರುದಾನಿ.

गुलाबपाशी–स्त्री.गुलाब जल छिड़कना। ಪನ್ನೀರು ಸಿಂಪಡಿಸುವದು,ಅತ್ತರು ಚಿಮುಕಿಸುವದು.

गुलाबी– वि. गुलाब के रंगका, गुलाब जल से सुवासित। ಗುಲಾಬೀ ಬಣ್ಣದ, ಪನ್ನೀರಿನ ವಾಸನೆಯಿಂದ ಕೂಡಿದ.

गुलाम– पु. दास। ದಾಸ, ಸೇವಕ. ಗುಲಾಮ, ಆಳು.

गुलामी– स्त्री. दासता, पराधीनता। ಸೇವೆ, ಪಾರತಂತ್ರ್ಯ, ಗುಲಾಮಗಿರಿ, ದಾಸತ್ವ.

गुलाल– पु. एक लाल बुकनी। ಗುಲಾಲು, ಕಾಮನ ಹಬ್ಬದಲ್ಲಿ ಆಡುವ ಓಕಳಿಯ ಪುಡಿ.

गुलियाना– सक्रि. दवा इत्यादि बाँसके चोंगे में भरकर पिलाना। ಗೊಟ್ಟ ಹಾಕು,ದನಗಳಿಗೆ ಔಷಧ ಕುಡಿಸು.

गुलिस्ताँ– पु. बाग, फारसीका एक प्रसिद्ध ग्रंथ। ಹೂದೋಟ, ಉದ್ಯಾನ, ಫಾರಸಿ ಭಾಷೆಯ ಒಂದು ಪ್ರಸಿದ್ಧ ಗ್ರಂಥ.

गुलूबंद– पु. ठंडसे बचनेके लिये गलेमें या सिरपर बाँधनेकी ऊनी या सूती पट्टी। ಸ್ಕಾರ್ಫ, ಚಳಿಗಾಲದಲ್ಲಿ ಕೊರಳಿಗೆ ಅಥವಾ ತಲೆಗೆ ಸುತ್ತಿಕೊಳ್ಳುವ ಪಟ್ಟಿ, ಮಫ್ಲರ.

गुलेल– स्त्री. वह कमान जिससे मिट्टीकी गोलियाँ फेंकी जाती हैं। ರಬ್ಬರ ಕವಣೆ, ಗುಲೇಲ.

गुलेला, गुल्ला– पु. मिट्टी की गोलियाँ जो गुलेल से चलाई जाती है, गुल्ला। ಕವಣೆ ಕಲ್ಲು, ಗುಲೇಲಿನಲ್ಲಿ ಹಾಕಿ ಒಗೆಯುವ ಮಣ್ಣಿನ ಗುಳಿಗೆ, ಗು-

फಲಾಹಾರದ ಪದಾರ್ಥಗಳು.

चमना– अक्रि. कुचला या रौंदा जाना। ತುರಿಸಲ್ಪಡು, ಅಗಿಯಲ್ಪಡು.

चमाना– सक्रि. भोजन कराना। ತಿನ್ನಿಸು, ಊಟ ಮಾಡಿಸು.

चमोरना– सक्रि. भिगोना, डुबोना। ತೋಯಿಸು, ಅದ್ದು, ಮುಳುಗಿಸು.

चमक– स्त्री. कान्ति, प्रकाश, तड़क। ಮಿಂಚು, ಕಾಂತಿ, ಪ್ರಕಾಶ, ಹೊಳಪು, ಸೌಂದರ್ಯ, ಒಯ್ಯಾರ.

चमक-दमक– स्त्री. तड़कभड़क, ठाट, आभा। ಒಯ್ಯಾರ, ಸಿಂಗಾರ, ಥಳಕು, ಹೊಳಪು, ಕಾಂತಿ, ಪ್ರಭೆ.

चमकदार– वि. दे. 'चमकीला'।

चमकना– अक्रि. प्रकाशित होना, जगमगाना, प्रसिद्ध होना, समृद्ध होना, जल्दीसे निकल भागना। ಪ್ರಕಾಶಿಸು, ಹೊಳೆ, ಸುಂದರ ಕಾಣು, ಪ್ರಸಿದ್ಧವಾಗು, ಕೀರ್ತಿವಂತನಾಗು, ಸಮೃದ್ಧನಾಗು, ಬೇಗನೆ ಓಡಿ ಹೋಗು.

चमकाना– सक्रि. चमकीला करना, उज्वल करना, चिढ़ाना, भड़काना। ಬೆಳಗು, ತಿಕ್ಕು, ಪ್ರಕಾಶಿತಗೊಳಿಸು, ಸಿಟ್ಟಿಗೆಬ್ಬಿಸು, ತ್ರಾಸಕೊಡು, ಪ್ರೇರೇಪಿಸು, ಬೆದರಿಸು.

चमकारा– पु. तेज, प्रकाश। ತೇಜ, ಪ್ರಕಾಶ.

चमकीला–वि चमकनेवाला, भड़कदार। ಹೊಳಪುಳ್ಳ, ಕಾಂತಿಯುಕ್ತ.

चमकौवल– स्त्री. चमकानेकी क्रिया। ಬೆಳಗುವ ಕ್ರಿಯೆ, ಮಿರುಗು ಕೊಡುವಿಕೆ, ಒಯ್ಯಾರ, ಬೆಡಗು, ಸಿಂಗಾರ.

चमगादड़, चमगीदड़– पु. रातको उड़नेवाला एक जंतु। ಬಾವಲಿ, ತೊಗಲುಬಾವಲಿ.

चमचम– स्त्री. एक बंगाल मिठाई। ಒಂದು ಬಂಗಾಲಿ ಪಕ್ವಾನ್ನ. क्रिवि चमकके साथ। ಕಾಂತಿಯುಕ್ತವಾಗಿ ತೇಜಃಪುಂಜವಾಗಿ.

चमचमाना– अक्रि चमकना। ಹೊಳೆ, ಪ್ರಕಾಶಿಸು. सक्रि. चमकाना। ಬೆಳಗಿಸು.

चमचा– पु. बड़ा चम्मच। ದೊಡ್ಡ ಚಮಚೆ, ಹುಟ್ಟು, ಉದ್ಧರಣೆ.

चमझुई, चमजोई– स्त्री. एक छोटी किलनी। ತೊಣಚೆ, ಉಣ್ಣೆ.

चमटा– पु. दे. 'चिमटा'।

चमड़ा– पु. त्वचा, छाल। ಚರ್ಮ, ತೊಗಲು.

—उधेड़ना या खींचना = शरीर परसे चमड़ा अलगाना। ಚರ್ಮ ಸುಲಿ, ಬಹಳ ಬಡಿ.

चमड़ी– स्त्री. दे. 'चमड़ा'।

चमत्कृति– स्त्री. चमत्कार, अचंभा। ಆಶ್ಚರ್ಯ.

चमन– पु. वाटिका, रौनक की जगह। ತೋಟ, ಮನೋಹರ ಸ್ಥಳ, ಉದ್ಯಾನ.

**चमर**– पु. चॅवर । ಚಾಮರ. स्त्री. सुरा गाय । ಕಾಡಾಕಳು (ಯಾಕ).

**चमरख**–स्त्री. चरखेकी गुडियोमें लगानेकी चमडे या मूँजकी चकती। ರಾಟೆಯ ಕಮರಿನ ಕೆಳಗೆ ಹಚ್ಚುವ ತೊಗಲಿನ ಅಥವಾ ಹುಲ್ಲಿನ ತುಂಡು.

**चमरी**– स्त्री. सुरा गाय । ಕಾಡಾಕಳು, (ಯಾಕ ಪಶು) ಚಮರಿ ಮೃಗ.

**चमरौट**– पु. चमारको दिया जानेवाला फसलका हिस्सा । ಮೊಚ್ಚಿಗಾರನಿಗೆ ಕೊಡುವ ಬೆಳೆಯ ಭಾಗ.

**चमला**– पु. भिक्षापात्र । ಭಿಕ್ಷಾಪಾತ್ರೆ.

**चमाऊ**– पु. दे. 'चमर'।

**चमाचम**– क्रिवि. दे. 'चमचम'।

**चमार**– पु. चमडे का काम करनेवाली एक जाति । ಸಮಗಾರ, ಮೋಚಿ, ಚರ್ಮಕಾರ, ಮೊಚ್ಚಿಗಾರ.

**चमारिन**–स्त्री. चमारकी स्त्री । ಚಮ್ಮಾರ ಸ್ತ್ರೀ, ಮೊಚ್ಚಿಗಾರನ ಹೆಂಡತಿ.

**चमारी**– स्त्री. चमारका काम, चमारकी स्त्री । ಮೊಚ್ಚಿಗಾರನ ಕೆಲಸ, ಚಮ್ಮಾರನ ಹೆಂಡತಿ.

**चमू**– स्त्री. सेना । ಸೈನ್ಯ, ದಂಡು.

**चमेली**– स्त्री. एक लता तथा उसके फूल । ಮಲ್ಲಿಗೆ ಬಳ್ಳಿ ಹಾಗೂ ಹೂ.

**चमोटा**– पु. छुरा तेज करनेका चमडा। ಕತ್ತಿ ಮಸೆಯುವ ತೊಗಲು ಪಟ್ಟಿ.

**चमोटी**– स्त्री कोडा, चाबुक, बेंत । ಚಾಟಿ, ಬಾರಕೋಲು, ಬೆತ್ತ.

**चमौआ**– पु. चमरौधा । ಹರಕು ಮುರುಕು ಹೊಲಿದ ಜೋಡು, ಕೆರ, ಎಕ್ಕಡ.

**चम्मच**– पु छोटा चमचा । ಚಿಕ್ಕ ಚಮಚೆ, ಚಿಕ್ಕ ಸವುಟು.

**चयन**– पु. संचय, चुननेका कार्य । ಸಂಚಯ, ಸಂಗ್ರಹ, ಅನುಕ್ರಮವಾಗಿಡುವದು, ಆರಿಸುವದು.

**चयनशील**– पु. संग्रही । ಸಂಗ್ರಹ ಮಾಡುವವ, ಕೂಡಿಡುವವ.

**चरई**–स्त्री. पशुओको चारा पानी देने के लिये बनाया गया छोटा हौज । ಗೋದಲಿ, ಹಟ್ಟಿಹಣೆ.

**चरक**– पु. दूत, गुप्तचर, पथिक, भिक्षुक, आयुर्वेदके एक प्रधान आचार्य । ದೂತ, ಗುಪ್ತಚರ, ಹಾದಿಕಾರ, ಪಥಿಕ, ಭಿಕ್ಷುಕ, ಆಯುರ್ವೇದದ ಒಬ್ಬ ಪ್ರಸಿದ್ಧ ಪಂಡಿತ.

**चरकटा**– पु. चारा काटनेवाला, तुच्छ व्यक्ति । ಹುಲ್ಲು ಕೊಯ್ಯುವವ, ತುಚ್ಛ ವ್ಯಕ್ತಿ.

**चरकना**–अक्रि. फूटना, टूटना । ಒಡೆ, ಸೀಳು, ಹರಿ, ಮುರಿ.

**चरका**– पु. चकमा, धोखा, जख्म । ಮೋಸ, ಕಪಟ, ಗಾಯ.

**चरख**– पु. पहियेके आकारका गोल चक्कर, खराद, तोप रखनेकी गाडी, एक शिकारी पक्षी । ಗಾಲಿ, ಕಡೆಚಲು, ತೋಫು ಇಡುವ ಗಾಡಿ, ಒಂದು ಬೇಟೆ ಪಕ್ಷಿ.

**चरखा**– पु. चर्खा, रहँट, सूत निकाल-

**चरबा**– पु. नक़ल, खाका । ನಕಲು, ಪ್ರತಿಲಿಪಿ, ಕರಡು ಪ್ರತಿ.

**चरबी**– स्त्री. मेद, मज्जा । ನೆಣ, ಕೊಬ್ಬು, ಮೇದಸ್ಸು, ಚರಬಿ.

**चरम**– वि. अंतिम । ಅಂತಿಮ, ಕೊನೆಯ.

**चरवाई, चरवाही**– स्त्री. चरानेका काम या मजदूरी । ಮೇಯಿಸುವಿಕೆ,ಮೇಯಿಸುವ ಕೆಲಸ, ಮೇಯಿಸುವ ಕೂಲಿ.

**चरवाना**– सक्रि 'चराना' का प्रे. रूप ।

**चरवाहा**– पु पशु चरानेवाला । ದನ ಮೇಯಿಸುವವ,ದನ ಕಾಯುವವ.

**चरवाही**– स्त्री दे. 'चरवाई' ।

**चरवैया**– पु. चरने या चरानेवाला । ಮೇಯುವ ಪ್ರಾಣಿ, ಮೇಯಿಸುವವ.

**चरस**– पु. चमड़ेका बडा पात्र, मोट, एक मादक पदार्थ । ಚರ್ಮದ ಚೀಲ, ಯಾತ, ಮೊಟ್ಟೆ, ಒಂದು ಮಾದಕ ಪದಾರ್ಥ.

**चरसा**– पु. वैल इत्यादिका चमडा, मोट । ಎತ್ತು, ಎಮ್ಮೆ ಮುಂತಾದವುಗಳ ತೊಗಲು, ಯಾತ,ಮೊಟ್ಟೆ.

**चरसी**–पु चरसद्वारा खेत खीचनेवाला, चरस पीनेवाला । ಯಾತ ಹೊಡೆಯುವವ,ಮೊಟ್ಟೆ ಹೊಡೆಯುವವ, (ಚರಸ) ಮಾದಕ ಪದಾರ್ಥ ಸೇವಿಸುವವ.

**चरहा, चरागाह**– पु चरी । ಹುಲ್ಲು ಗದ್ದೆ, ಮೇಯುವ ಸ್ಥಳ.

**चराई**– स्त्री चरनेकी क्रिया, चरवाही । ಮೇಯುವಿಕೆ, ಮೇಯಿಸುವಿಕೆ, ಮೇಯಿಸುವ ಕೂಲಿ.

**चरान**– पु. चौपायो के चरनेका स्थान । ಹುಲ್ಲು ಗದ್ದೆ, ಪಶುಗಳು ಮೇಯುವ ಸ್ಥಳ.

**चराना**–सक्रि पशुओं को चरने के लिये मैदान मे छोडना, छलना । ಮೇಯಿಸು, ತಿನ್ನಿಸು, ಮರುಳುಗೊಳಿಸು, ಮೋಹಗೊಳಿಸು.

**चरावना**– सक्रि. दे. 'चराना'।

**चरिंदा**– पु. पशु । ಪಶು, ದನ.

**चरित, चरित्र**– पु. स्वभाव, आचरण, जीवनी, कार्य । ಸ್ವಭಾವ, ನಡೆವಳಿ, ಆಚರಣ, ಚರಿತ್ರೆ, ಕಾರ್ಯ.

**चरितार्थ**–वि कृतकार्य, ठीक ठीक उतरनेवाला । ಕೃತಕಾರ್ಯ, ಸರಿಯಾದ, ಇಚ್ಛಾ ಪೂರ್ಣವಾದ.

**चरित्तर**– पु. धूर्तता, बहाना, चरित्र । ಧೂರ್ತತನ, ಮೋಸ, ಸೋಗು, ಚರಿತ್ರೆ.

**चरित्र**– पु. स्वभाव, करनी, कार्य, जीवनी । ಸ್ವಭಾವ, ಆಚರಣೆ, ನಡೆವಳಿ, ಮಾಡಿದ್ದು, ಕಾರ್ಯ, ಚರಿತ್ರೆ, ಜೀವನ ಚರಿತ್ರೆ.

**चरी**– स्त्री. पशुओंके चरनेकी भूमि । ಪಶುಗಳು ಮೇಯುವ ಭೂಮಿ, ಹುಲ್ಲು ಗದ್ದೆ.

**चरु,चरू**– पु. हविष्यान्न । ನೈವೇದ್ಯ,

ಚರು, ಹವಿಷ್ಯಾನ್ನ, ಹವ್ಯ, ನೈವೇ ದ್ಯದ ಅನ್ನ ಕುದಿಸಿದ ಪಾತ್ರೆ. ದೆ. 'चरी'।

चरेरा– वि. कर्कश, रूखा । ಕರ್ಕಶ, ಬಿರುಸಾದ, ಒಣ, ಹುರಬುರಕ.

चरेरू– पु पक्षी । ಪಕ್ಷಿ, ಹಕ್ಕಿ.

चरैया– पु दे 'चरवैया'।

चर्ख– स्त्री. दे 'चरख'।

चर्खा– पु. दे. 'चरखा'।

चर्खी– स्त्री दे. 'चरखी'।

चर्चा– स्त्री. दे 'चरचा'।

चर्मकार– पु. दे 'चमार'।

चर्मदंड– पु. चाबुक । ಚಾಟಿ, ಬಾರ ಕೋಲು, ಚಬಕ

चर्या– स्त्री. आचरण, वृत्ति, व्यवसाय, सेवा, जीविका । ಆಚರಣೆ, ನಡತೆ, ಕೆಲಸ, ವೃತ್ತಿ, ವ್ಯವಸಾಯ, ಸೇವೆ, ಜೀವಿಕೆ.

चर्राना– अक्रि. चरचर शब्द करना, हल्की पीडा होना, इच्छादिका प्रवल होना । 'ಚರ್ ಚರ್' ಶಬ್ದವಾಗು, ನೋವಾಗು, ತೀಟೆಯಾಗು, ಇಚ್ಛಾದಿಗಳು ಪ್ರಬಲವಾಗು.

चर्वित– वि चवाया हुआ । ನುರಿಸಿದ, ಅಗಿದ.

चल– वि अस्थिर, चंचल । ಅಸ್ಥಿರ, ಚಂಚಲ. पु. कंपन, पारा, छल, दोप । ಕಂಪನ, ಪಾದರಸ, ಪಾರ ಜ, ಮೋಸ, ಕಪಟ, ದೋಷ.

चलकना– अक्रि दे 'चमकना'।

चलचूक– स्त्री. छल, धोखा । ಕಪಟ, ಮೋಸ.

चलता– वि चालाक, प्रचलित, काम करने योग्य । ಚತುರ, ಜಾಣ, ಪ್ರಚಲಿತ, ಚಾಲ್ತಿ, ಕೆಲಸದಲ್ಲಿ ನಿಪುಣ, ಯೋಗ್ಯ.

—पुरजा = व्यवहार पटु। ವ್ಯವಹಾರ ದಲ್ಲಿ ಕುಶಲ, ಕಾರ್ಯದಕ್ಷ.

चलती– स्त्री. मानमर्यादा, अधिकार । ಮಾನಮರ್ಯಾದೆ, ಅಧಿಕಾರ.

चलतू– वि. प्रचलित, आवाद । ಪ್ರಚ ಲಿತ, ವ್ಯವಹಾರದಲ್ಲಿದ್ದ, ಚಾಲ್ತಿ, ನೆಲಸಿದ.

चलन– पु. प्रचार, रिवाज, चाल । ಪ್ರಚಾರ, ವ್ಯವಹಾರದಲ್ಲಿದ್ದ ವಸ್ತು, ಪದ್ಧತಿ, ರೀತಿ, ರೂಢಿ, ವ್ಯವಹಾರ, ಗತಿ, ನಡತೆ, ಸಂಚಾರ.

चलनसार–वि. चालू, अधिक दिनोंतक चलनेवाला । ಚಾಲ್ತಿ, ಪ್ರಚಲಿತ, ಬಾಳಿಕೆ ಬರುವ.

चलना– अक्रि. गमन करना, जाना, वहना, टिकना, व्यवहारमें आना, निर्वाह होना, वढ़ना, आरंभ होना । ನಡೆ, ಹೋಗು, ಹರಿ, ಬಹಳದಿನ ಬಾಳು, ವ್ಯವಹಾರದಲ್ಲಿ ಬರು, ಪ್ರಚಲಿತವಾಗು, ಉಪಯೋಗ ವಾಗು, ನಿರ್ವಾಹವಾಗು, ಬೆಳೆ, ಸಫಲನಾಗು, ಉನ್ನತಿ ಹೊಂದು, ಮುಂದಾಗು, ಆರಂಭವಾಗು. पु. वडी चलनी । ಜರಡಿ, ಜಲ್ಲಡಿ,

ದೊಡ್ಡ ಸಾಣಿಗೆ.

**चल बसना** = मृत्यु होना । ಸಾಯು.

**चल निकलना** = उन्नति करना । ಉನ್ನತಿಯಾಗು, ಮುಂದಾಗು.

**(अपने) चलते** = यथा शक्ति । ತನ್ನ ಶಕ್ತಿಗನುಸಾರವಾಗಿ.

**चलनि**– स्त्री दे 'चलन'।

**चलनी**– स्त्री. छलनी । ಜರಡಿ, ಜಲ್ಲಡೆ, ಸಾಣಿಗೆ.

**चलवाना**–सक्रि 'चलाना' का प्रे रूप।

**चलविचल**–वि.स्थानच्युत,अव्यवस्थित। ಸ್ಥಾನಚ್ಯುತ, ಅವ್ಯವಸ್ಥಿತ, ಕ್ರಮ ತಪ್ಪಿದ. स्त्री. व्यतिक्रम। ಅವ್ಯವಸ್ಥೆ, ವ್ಯತಿಕ್ರಮ.

**चलवैया**– पु चलनेवाला । ನಡೆಯುವವ, ಹೋಗುವವ.

**चलाऊ**–वि. टिकाऊ, वहुत घूमनेवाला। ಬಹುದಿನ ಬಾಳುವ, ಬಳಿಕೆಯ, ನಡೆಯುವ, ಸಾಗುವ.

**चलॅाक**– वि. दक्ष, पटु । ಜಾಣ, ದಕ್ಷ.

**चलॅाका**– स्त्री. विजली। ಮಿಂಚು, ವಿದ್ಯುತ್ತು.

**चलाचल**– वि. चंचल । ಚಂಚಲ,ಚಪಲ. स्त्री.चाल । ಗತಿ,ಚಲನೆ,ನಡತೆ.

**चलाचली**– स्त्री. तैयारी, चलनेका धूमधाम, हलचल । ಸಿದ್ಧತೆ, ಹೋಗುವ ತ್ವರೆ, ಹೋಗುವ ಅವಸರ, ಹೋಗುವ ವೇಳೆ. वि जो चलनेको तैयार हो । ಹೊರಡಲು ಸಿದ್ಧವಾದ.

**चलान**– पु. भेजने की क्रिया, न्यायालय में भेजा जाना, एक स्थानसे दूसरे स्थानको भेजी गयी सामग्री, मालकी सूचीका कागज, रवन्ना । ಕಳಿಸುವ ಕೆಲಸ, ಕೈದು ಮಾಡಿ ನ್ಯಾಯಾಲಯಕ್ಕೆ ಕಳಿಸುವದು, ಸಾಮಾನು ಕಳಿಸುವದು, ಕಳಿಸಿದ ವಸ್ತು, ಕಳಿಸಿದ ಸಾಮಗ್ರಿಯ ವಿವರಣೆ ಪತ್ರ, ರಸೀದಿ, ರವಾನಗಿ.

**चलाना**– सक्रि. चलने के लिये प्रेरित करना, गति देना, आरंभ करना, प्रचलित करना, तीर या गोली छोड़ना । ನಡೆಯಿಸು, ಅಲುಗಾಡಿಸು, ನಡೆಯಲು ಪ್ರೇರೇಪಿಸು, ಗತಿಕೊಡು, ಮುಂದೆ ಸಾಗಿಸು, ಆರಂಭಿಸು, ನಿರ್ವಹಿಸು, ಪ್ರಚಾರಮಾಡು, ವ್ಯವಹಾರದಲ್ಲಿ ತರು, ಬಾಣ ಅಥವಾ ಗುಂಡು ಹೊಡೆ.

**चलायमान**– वि. चंचल, चलनेवाला । ಚಂಚಲ, ಚಪಲ, ಅಗಳಾಡುವ, ನಡೆದಾಡುವ.

**चलाव**– पु. यात्रा, रिवाज । ಯಾತ್ರೆ, ಪ್ರಯಾಣ. ರೀತಿ, ಪದ್ಧತಿ.

**चलावा**– पु. गौना, रिवाज । ದ್ವಿರಾಗಮನ, ಮೊದಲುಬಾರಿ ವಧುವನ್ನು ಗಂಡನಮನೆಗೆ ಕರೆದೊಯ್ಯುವದು, ಪದ್ಧತಿ, ರೀತಿ, ವಾಡಿಕೆ.

**चवन्नी**– स्त्री. चार आनेके मूल्यका सिक्का। ನಾಲ್ಕಾಣೆ ನಾಣ್ಯ,ಪಾವಲಿ.

**चवाई**– पु. चुगलखोर, निंदक । ಚಾಡಿ ಹೇಳುವವ, ನಿಂದೆ ಮಾಡುವವ.

चवाउ, चवाव– पु. निंदा, चुगली। ನಿಂದೆ, ಚಾಡಿ.

चवालीस– वि. ४४। ನಲವತ್ತು ನಾಲ್ಕು.

चशम, चश्म– स्त्री. आँख। ಕಣ್ಣು.

चशमा, चश्मा– पु. ऐनक, सोता। ಕನ್ನಡಕ, ನೀರಿನ ಬುಗ್ಗೆ, ಸ್ರೋತ.

चश्मदीद– वि. आँखोंसे देखा हुआ। ಪ್ರತ್ಯಕ್ಷ ಕಂಡ, ಕಣ್ಣಾರೆ ಕಂಡ, ಸತ್ಯ.

चश्मनुमाई– स्त्री घुड़की। ಬೆದರಿಕೆ, ಗದರಿಕೆ.

चश्मपोशी– स्त्री. दोषों की ओर ध्यान न देना। ಎರಡನೆಯವರ ದೋಷ ಗಳ ಕಡೆಗೆ ಲಕ್ಷ್ಯ ಕೊಡದಿರುವದು.

चश्मा– पु दे. ' चशमा '।

चष– पु नेत्र। ಕಣ್ಣು, ನೇತ್ರ.

चषक– पु. मद्य पीनेका पात्र, मधु। ನೆರೆ ಕುಡಿಯುವ ಪಾತ್ರೆ, ಜೇನು ತುಪ್ಪ.

चसक– पु. दे. ' चपक '। स्त्री. हलकी पीड़ा। ನೋವು, ಪೀಡೆ.

चसकना– अक्रि. कसकना, टीसना। ನೋವಾಗು, ನಿಂತುನಿಂತು ನೋ- ವಾಗು.

चसका– पु लत, दुर्व्यसन। ಚಟ, ದು- ರ್ವ್ಯಸನ, ಚಾಳಿ, ರುಚಿ.

चसना– अक्रि. चिपकना, मरना। ಅಂಟಿಕೊಳ್ಳು, ಕೂಡಿಕೊಳ್ಳು, ಸಾಯು.

चह– स्त्री गड्ढा। ಗುಣಿ, ತಗ್ಗು. पु. लकड़ी का चबूतरा। ಕಟ್ಟಿಗೆಯ ವೇದಿಕೆ, ಕಟ್ಟೆ.

चहक– स्त्री. पक्षियोंका कलरव। ಪಕ್ಷಿ ಗಳ ಕಲರವ, ಪಕ್ಷಿಗಳ ಚಿಲಿಪಿಲಿ.

चहकना– अक्रि. कलरव करना, जलना। ಚಿಲಿಪಿಲಿ ಗುಟ್ಟು, ಕಲರವ ಮಾ- ಡು, ಉಲಿ, ಕೆಲೆ, ಸುಡು.

चहका–पु. कीचड़, जलती हुई लकड़ी, ईंटोंका फर्श। ಕೆಸರು, ಸುಡುವ ಕಟ್ಟಿಗೆ, ಇಟ್ಟಂಗಿಯ ನೆಲಗಟ್ಟು.

चहकारना– अक्रि दे. ' चहकना '।

चहकारा– वि. मधुर ध्वनि करनेवाला। ಚಿಲಿಪಿಲಿಗುಟ್ಟುವ, ಇನಿದನಿಗು ಡುವ.

चहचहा– पु. पक्षियोंका कलरव, हँसी दिल्लगी। ಚಿಲಿಪಿಲಿ, ಉಲಿತ, ಮೋ- ಜು, ಆನಂದ. वि. अनंद उत्पन्न करनेवाला। ಆನಂದ ಗೊಳಿಸುವ, ಇಂಪಾದ, ಮನೋಹರ, ರಮ್ಯ.

चहचहाना– अक्रि. दे ' चहकना '।

चहनि– स्त्री चाह, इच्छा। ಇಚ್ಛೆ, ಅಭಿಲಾಷೆ.

चहबच्चा– पु हौज, तहखाना। ನೀರಿನ ಹೌದು, ನೆಲಮನೆ.

चहर– स्त्री. आनंदोत्सव, उपद्रव, शोर- गुल। ಆನಂದೋತ್ಸವ, ಉಪದ್ರವ, ಗಲಭೆ, ಗದ್ದಲ. वि. उत्तम, तेज। ಉತ್ತಮ, ಚಪಲ, ತೀಕ್ಷ್ಣ.

चहरना– अक्रि. आनंदित होना।

ಆನಂದಿತನಾಗು.

**चहर-पहर**– स्त्री. दे. 'चहल-पहल'।

**चहल**– स्त्री कीचड, आनंदोत्सव। ಕೆಸರು, ಆನಂದೋತ್ಸವ, ಉಲ್ಲಾಸ.

**चहल क़दमी**– स्त्री. धीरे धीरे चलना। ಸಾವಕಾಶವಾಗಿ ನಡೆಯುವದು, ತಿರುಗಾಟ.

**चहल-पहल**– स्त्री. उत्सव, धूमधाम। ಆನಂದ, ಉತ್ಸವ, ಉಲ್ಲಾಸ, ನಡಗರ, ಸಂದಣಿ, ಕೋಲಾಹಲ.

**चहला**– पु. कीचड़। ಕೆಸರು, ಕೊಚ್ಚೆ.

**चहार**– वि. चार। ನಾಲ್ಕು.

**चहारदीवारी**–स्त्री. किसी स्थानके चारो ओर वनी हुई दीवार। ಸುತ್ತು-ಗೋಡೆ, ಆವಾರದ ಗೋಡೆ, ಪ್ರಾ-ಕಾರ, ಪವುಳಿ.

**चहारुम**– वि. चौथा, चौथाई। ನಾಲ್ಕ-ನೆಯ, ನಾಲ್ಕನೆಯ ಪಾಲು.

**चहुँ, चहूँ**– वि चार। ನಾಲ್ಕು.

**चहेटना**– सक्रि. निचोडना। ಹಿಂಡು, ರಸ ತೆಗೆ, ಸತ್ವ ಹೀರು, ಕಿವುಚು.

**चहेता**– वि. प्यारा। ಪ್ರಿಯ, ಪ್ರೀ-ತಿಯ.

**चहोड़ना, चहोरना**– सक्रि. आरोपित करना, लगाना, संभालना। ಕಿತ್ತಿ ಹಚ್ಚು, ಕಿತ್ತಿ ನೆಡು, ಕಾಳಜಿ ತೆಗೆ ದುಕೊಳ್ಳು, ನಿರ್ವಹಿಸು.

**चाइयां,चाईं**– वि चालाक, धूर्त,छली। ಧೂರ್ತ, ಠಕ್ಕ, ಮೋಸಗಾರ.

**चाकना**– सक्रि. सीमा वाधने के लिये चिह्नित करना। ಚಿಹ್ನೆ ಮಾಡು, ಸೀಮೆ ಕಟ್ಟುವದರಸಲುವಾಗಿ ಗೆರೆ ಕೊರೆ, ಕಣದಲ್ಲಿಯ ಕಾಳಿನ ರಾಶಿಯ ಮೇಲೆ ಗುರ್ತಿಗಾಗಿ ಗೆರೆ ಹಾ-ಕು, ಮೇರೆ ಕಟ್ಟು.

**चांगला**– वि स्वस्थ, हृष्टपुष्ट, चतुर। ಸ್ವಸ್ಥ, ಕೊಬ್ಬಿದ, ಗಟ್ಟಿಮುಟ್ಟ, ಚತುರ.

**चाचर, चाँचरि**– स्त्री. होली आदि के गीत। ಕಾಮನ ಹಬ್ಬದಲ್ಲಿ ಹಾಗೂ ವಸಂತ ಕಾಲದಲ್ಲಿ ಹಾಡುವ ಗೀ-ತೆಗಳು.

**चॉंचु**– पु. चोच। ಚುಂಚು.

**चाँटा**– पु. थप्पड, तमाचा, चिउँटा। ಕೆನ್ನೆ ಹೊಡೆತ, ತಪರಾಕು, ಹೊ-ಡೆತ, ಇರುವೆ, ಕಟ್ಟಿರುವೆ.

**चांटी**– स्त्री. चिउँटी। ಇರುವೆ.

**चांड**–स्त्री बडी लालसा, आधार,दवाव, संकट, अधिकता। ತೀವ್ರ ಇಚ್ಛೆ, ಆಧಾರ, ಆನಿಕೆ, ಒತ್ತರಿಕೆ, ಭಾರ, ಸಂಕಟ, ಆಧಿಕ್ಯ. वि वलवान, प्रवल, तृप्त। ಬಲವುಳ್ಳ, ಉಗ್ರ, ಪ್ರಬಲ, ಶ್ರೇಷ್ಠ, ತೃಪ್ತ.

**चाँडना**– सक्रि खोदकर गिराना, नष्ट करना। ಕಿತ್ತೊಗೆ, ಹಾಳುಮಾಡು, ನಾಶಮಾಡು.

**चाँडाल**– पु. डोम, दुष्ट, पतित मनुष्य। ಹೊಲೆಯ, ಚಾಂಡಾಲ, ದುಷ್ಟ, ನೀಚ, ಪಾಪಿಷ್ಟ.

**चांडाली**– स्त्री चाडाल की स्त्री। ಹೊ-

ಲಿಯುನ ಹೆಂಡತಿ, ಹೊಲತಿ.

चाँडिला– वि. प्रचंड, प्रबल, उद्धत, वहुत, अधिक। ಪ್ರಚಂಡ,ಪ್ರಬಲ, ದಿಟ್ಟ, ತುಂಟ, ಅತ್ಯಧಿಕ.

चाँद–पु. चंद्रमा, निगानेका लक्ष्य, एक गहना। ಚಂದ್ರ, ಗುರಿ, ಲಕ್ಷ್ಯ, ಒಂದು ಆಭರಣ. स्त्री. खोपड़ी। ತಲೆ ಬುರುಡೆ, ಕಪಾಲ.

—का टुकडा = अति सुंदर मनुष्य। ಅತ್ಯಂತ ಸುಂದರ ಮನುಷ್ಯ.

—पर थूकना = किसी महात्मा को कलंकित करना। ಅತಿ ದೊಡ್ಡ ಮನುಷ್ಯನನ್ನು ನಿಂದಿಸುವದು.

चाँदना–पु. प्रकाग, चाँदनी। ಪ್ರಕಾಶ, ಬೆಳದಿಂಗಳು.

चाँदनी–स्त्री. ज्योत्स्ना। ಬೆಳದಿಂಗಳು.

चाँदबाला– पु. कानका एक गहना। ಚಂದ್ರ ಮುರು.

चाँदमारी– स्त्री. निगाना लगानेका अभ्यास। ಗುರಿ ಹೊಡೆಯುವ ಅಭ್ಯಾಸ.

चाँदी– स्त्री. रजत, रौप्य, खोपड़ी का मध्यभाग। ಬೆಳ್ಳಿ, ರೌಪ್ಯ, ತಲೆಯ ಮಧ್ಯ ಭಾಗ.

—का जूता = घूस। ಲಂಚ.

चाँप–स्त्री. दबाव, धक्का,बंदूकका घोड़ा। ಒತ್ತರಿಕೆ, ಒತ್ತುವದು, ನುಗ್ಗಾಟ, ನೂಕುವಿಕೆ, ಬಂದೂಕಿನ ಕುದುರೆ. पु धनुप, चंपाका फूल। ಬಿಲ್ಲು, ಧನಸ್ಸು, ಸಂಪಿಗೆ ಹೂ.

चाँपना– सक्रि. दबाना। ಒತ್ತು, ಹತ್ತಿಕ್ಕು, ಒತ್ತಾಯ ಮಾಡು.

चाँवर, चावल– पु. एक अन्न। ಅಕ್ಕಿ.

चाउ– पु. चाव, प्रेम, उत्साह। ರುಚಿ, ಪ್ರೇಮ, ಉತ್ಸಾಹ.

चाउर– पु दे 'चाँवर'।

चाक– पु. पहिया, घिरनी, चरखी। ಗಾಲಿ, ರಾಟೆ, ಗಡಗಡೆ, ಕಪಿಲೆ.

चाक़– वि. दृढ, पुष्ट, स्वस्थ, सुंदर। ದೃಢ, ಪುಷ್ಟ, ಸ್ವಸ್ಥ, ಸುಂದರ.

चाक़चक–वि. सुदृढ, चारों ओर रक्षित। ಸುದೃಢ, ಸ್ವಸ್ಥ,ಸುರಕ್ಷಿತ.

चाकना– सक्रि. दे. 'चॉकना'।

चाकर– पु. नौकर। ಆಳು, ಸೇವಕ, ನೌಕರ.

चाकरी– स्त्री. नौकरी। ನೌಕರಿ,ಸೇವೆ, ದಾಸ್ಯ, ಊಳಿಗ.

चाकी– स्त्री. वज्र, चक्की। ಮಿಂಚು,ಸಿಡಿಲು, ಬೀಸುವ ಕಲ್ಲು.

चाक़ू– पु फल इत्यादि काटनेकी छुरी। ಚಾಕು, ಚೂರಿ.

चाखना– सक्रि दे. 'चखना'।

चाचर, चाचरि– स्त्री. होली के गीत, होली के खेल और स्वाग। ಕಾಮನ ಹಬ್ಬದ ಹಾಡು, ಕಾಮನ ಹಬ್ಬದ ಆಟ, ತಮಾಷೆ, ಮೋಜು.

चाचरी– स्त्री. एक योगमुद्रा। ಒಂದು ಯೋಗ ಮುದ್ರೆ.

चाचा– पु. पिताका भाइ। ತಂದೆಯ ಸಹೋದರ ಚಿಕ್ಕಪ್ಪ ಅಥವಾ

ದೊಡ್ಡಮ್ಮ, ಕಕ್ಕ.

**चाची**– स्त्री. चाचाकी स्त्री । ಚಿಗವ್ವ, ಮೊಡ್ಡವ್ವ, ತಂದೆಯ ಸೋದರನ ಹೆಂಡತಿ.

**चाट**–स्त्री लालसा, लत, चटपटी वस्तु । ಇಚ್ಛೆ, ಚಟ, ರುಚಿ, ಮಸಾಲೆ ಹಾಕಿ ಮಾಡಿದ ವಸ್ತು. पु. धूर्त । ಧೂರ್ತ, ಮೋಸಗಾರ.

**चाटना**– सक्रि जीभसे चखना । ಆಸ್ವಾದಿಸು, ನೆಕ್ಕು.

**चाटु**– पु खुशामद । ಮುಖಸ್ತುತಿ, ಸುಳ್ಳುಸ್ತುತಿ.

**चाटुकार**– पु. झूठी प्रशंसा करनेवाला । ಮುಖಸ್ತುತಿ ಮಾಡುವವ, ಸುಳ್ಳುಸ್ತುತಿ ಮಾಡುವವ.

**चाटुकारी**– स्त्री. दे 'चाटु' ।

**चाड**– स्त्री. तीव्र अभिलाषा, प्रेम । ಪ್ರಬಲ ಇಚ್ಛೆ, ಪ್ರೇಮ.

**चाड़ा**– पु प्यारा, प्रेमी । ಪ್ರಿಯಕರ, ಪ್ರೇಮಿ. वि. आसक्त । ಆಸಕ್ತ, ಮೋಹಿತ.

**चातुरई, चातुरी**– स्त्री. दे 'चतुरई' ।

**चादर**– स्त्री. पीतल इत्यादिका लंबा चौडा टुकड़ा, ओढने तथा बिछानेका बड़ा कपड़ा । ಪಾತ್ರವಿನ ಹರವಾದ ಹಾಗು ದಪ್ಪವಾದ ತಗಡು, ಹೊದಿಕೆ, ಹಾಸಿಗೆ, ಚಾದರ, ಮುಪ್ಪಟಿ, ಹಚ್ಚಡ.

**चाप**– स्त्री दवाव, पैर की आहट । ಒತ್ತರಿಕೆ, ದಬಾವು, ನಡಿಗೆಯ ಸಪ್ಪಳ. पु धनुष । ಬಿಲ್ಲು,ಧನುಷ್ಯ.

**चापना**– सक्रि दबाना । ಒತ್ತು, ಅಮುಕು, ಭಾರ ಹಾಕು, ಬಗ್ಗಿಸು.

**चापलूस**–वि. चाटुकार । ಮುಖಸ್ತುತಿ ಮಾಡುವವ.

**चापलूसी**– स्त्री. दे 'चाटुकारी' ।

**चाबना**–सक्रि दाँतोसे कुचलकर खाना । ಸುರಿಸಿ ತಿನ್ನು, ಅಗಿದು ತಿನ್ನು, ಅಗಿ, ಮೆಲ್ಲು.

**चाबी,चाभी**– स्त्री. कुंजी । ಬೀಗದ ಕೈ, ಕೀಲಿ ಕೈ.

**चाबुक**– पु. कोडा । ಬಾರಕೋಲು, ಚಬುಕ, ಚಾವಟಿ, ಕೋರಡಾ.

**चाभना**– सक्रि. चबाना, खाना । ಸುರಿಸು, ಅಗಿ, ತಿನ್ನು.

**चाभी**– स्त्री दे. 'चाबी' ।

**चाम**– पु. चमड़ा । ಚರ್ಮ,ತೊಗಲು.

**चामरी**– स्त्री. सुरा गाय । ಕಾಡಾಕಳು, ಯಾಕ ಮೃಗ, ಚಮರೀ ಮೃಗ.

**चामीकर**– पु सुवर्ण । ಬಂಗಾರ, ಚಿನ್ನ

**चाय**–स्त्री.एक पौधा तथा उसकी पत्ती । ಚಹದ ಗಿಡ, ಚಹ. पु दे 'चाव' ।

—**पानी** = जलपान । ಫಲಹಾರ,ಉಪಹಾರ.

**चार**– वि. पाँचसे एक कम, कुछ । ನಾಲ್ಕು, ಕೆಲವು, ಸ್ವಲ್ಪ. पु. बंधन, दूत, गति, रीति । ಬಂಧನ,ದೂತ, ಗುಪ್ತಚರ, ಗತಿ, ರೀತಿ, ಪದ್ಧತಿ.

—**आँखे होना**=दृष्टि मिलना। ದೃಷ್ಟಿ ದೃಷ್ಟಿಯಾಗು, ಭೆಟ್ಟಿಯಾಗು.

—की कही = पचोंका मत। ಪಂಚರ ಮತ.

—दिनकी चाँदनी= थोड़े दिनका भोग-विलास या सुख। ತಾತ್ಕಾಲಿಕ ಸುಖ.

—पाँच=हीला हवाली। ನೆವ, ಒಬ್ಬರ ಮೇಲೊಬ್ಬರು ಹಾಕುವದು, ತಕರಾರು.

—दिन = थोड़े दिन। ಕೆಲವು ದಿನ

चारख़ाना– पु. एक प्रकार का धारीदार कपड़ा। ಚೌಕುಳಿ ಬಟ್ಟೆ, ಅಡ್ಡ, ಉದ್ದ ಗೆರೆಗಳುಳ್ಳ ಬಟ್ಟೆ.

चारजामा– पु. जीन। ಜೀನು, ತಡಿ, ಸಬರ.

चारण,चारन– पु. भाट। ವಂಧಿ ಮಾಗಧ, ಹೊಗಳು ಭಟ್ಟ.

चारणी–स्त्री 'चारण' का स्त्री. रूप।

चारदीवारी– स्त्री. परकोटा, घेरा। ಕೋಟೆಯ ಸುತ್ತು ಗೋಡೆ, ಆವಾರದ ಗೋಡೆ, ಪ್ರಾಕಾರ.

चारना– सक्रि. चराना। ಮೇಯಿಸು.

चारनाचार–क्रिवि. विवश होकर। ವಿವಶನಾಗಿ, ಅಸಹಾಯನಾಗಿ.

चारपाई– स्त्री. खटिया। ಹೊರಸು, ಮಂಚ, ಪಲಂಗ.

चारपाया– पु. पशु, चौपाया। ಚತುಷ್ಪದಿ, ಪಶು, ದನ.

चारबाग़– पु. चौकोना बगीचा। ಚೌಕೋನಾಕಾರದ ತೋಟ.

चारयारी–स्त्री. मित्रमंडली। ಗೆಳೆಯರ ಗುಂಪು.

चारा– पु. पशुओंका खाना। ಮೇವು

चारा– पु. उपाय, वश। ಯತ್ನ, ಉಪಾಯ, ಶಕ್ತಿ, ಅಳವು.

चाराजोई– स्त्री. नालिश, निवेदन। ಫಿರ್ಯಾದು, ಅರ್ಜಿ, ದಾವೆ.

चारु– वि. सुंदर। ಸುಂದರ.

चाल– स्त्री. गति, चलन, व्यवहार, चालाकी, रस्म रिवाज, हलचल। ಗತಿ, ನಡಿಗೆ, ಚಲನೆ, ವ್ಯವಹಾರ, ಉಪಾಯ, ಯತ್ನ, ಧೂರ್ತತನ, ಮೋಸ, ರೀತಿ, ಪದ್ಧತಿ, ಆಚಾರ, ನಡೆವಳಿಕೆ, ಗದ್ದಲ, ತಂತ್ರ.

—चलना = धूर्तता करना। ಮೋಸ ಮಾಡು, ಜಾಲ ಹರವು.

चालक–पु संचालक, छलिया। ಸಂಚಾಲಕ, ಆಡಳತಿಗಾರ, ಮೋಸಗಾರ.

चालचलन– पु. आचरण। ನಡೆನುಡಿ, ಆಚರಣೆ, ಶೀಲ.

चालढाल–पु. आचरण, व्यवहार, ढंग। ಆಚರಣೆ,ನಡತೆ,ವ್ಯವಹಾರ, ರೀತಿ, ಆಕೃತಿ.

चालन– पु. संचालन, गति.। ಸಂಚಾಲನೆ, ನಡಿಸುವದು, ಗತಿ, ಗಮನ.

चालना–सक्रि संचालन करना, हिलाना, छानना। ಸಂಚಾಲನೆ ಮಾಡು, ನಡಿಸು, ಅಲುಗಿಸು, ತೂರು, ಸಾಣಿಸು. अक्रि. चलना। ನಡೆ.

चालनी– स्त्री. दे. 'छलनी'।

चालबाज़–वि. चालाक, ठग। ಧೂರ್ತ,

ಮೋಸಗಾರ, ರಕ್ತ.

चाला– पु प्रस्तान । ಪ್ರಸ್ಥಾನ,ಹೋಗುವಿಕೆ, ಪ್ರಯಾಣ, ನಿರ್ಗಮನ.

चालाक– वि चतुर, धूर्त । ಚತುರ, ಜಾಣ, ಧೂರ್ತ, ಮೋಸಗಾರ.

चालाकी– स्त्री. चतुराई, धूर्तता । ಚತುರತೆ, ಧೂರ್ತತನ, ಮೋಸ, ಯುಕ್ತಿ, ಚಾತುರ್ಯ.

चालान– पु. दे. ' चलान ' ।

चालिया– वि. दे. ' चालवाज ' ।

चाली– वि दे. 'चालाक' । स्त्री. चाल । ತಂತ್ರ, ಮೋಸ, ನಡತೆ, ಗತಿ.

चालीस– वि. तीस और दस । ನಲವತ್ತು.

चालीसा–पु चालीस वस्तुओंका समूह, चालीस पद्योंकी कविता। ನಲವತ್ತು ವಸ್ತುಗಳ ಗುಂಪು, ನಲವತ್ತು ಪದ್ಯಗಳ ಕವಿತೆ.

चालू करना–सक्रि शुरू करना, व्यवहार में लाना । ಆರಂಭ ಮಾಡು, ಗತಿ ಕೊಡು, ಬಳಕೆಯಲ್ಲಿ ತರು.

चाव– पु. लालसा, शौक, उत्साह । ಬಯಕೆ, ಅಭಿಲಾಷೆ, ಅನುರಾಗ, ಪ್ರೀತಿ, ಅಭಿರುಚಿ, ಆಕ್ಕರೆ,ಆಸಕ್ತಿ, ಉತ್ಸಾಹ.

चावना– सक्रि दे. ' चाहना ' ।

चावर,चावल– पु. तंडुल । ಅಕ್ಕಿ,ಅನ್ನ

चाशनी, चासनी– स्त्री. मिश्री, चीनी या गुड़का अग्निपर पकाकर गाढा किया हुआ रस, चसका, चाट । ಸಕ್ಕರೆ ಅಥವಾ ಬೆಲ್ಲದ ಪಾಕ, ರುಚಿ, ಸ್ವಾದ, ಅಭಿರುಚಿ.

चास– पु. खेती, जोताई । ಬೇಸಾಯ, ಹರಗುವದು.

चासना– सक्रि. जोतना । ಹರಗು, ನೇಗಿಲ ಹೊಡೆ.

चासा– पु. किसान, हलवाहा । ಒಕ್ಕಲಿಗ, ಉಳುವವ, ಆರಂಬಗಾರ.

चाह, चाहत– स्त्री इच्छा, प्रेम, आवश्यकता, मर्म । ಇಚ್ಛೆ, ಅಭಿಲಾಷೆ, ಬಯಕೆ, ಪ್ರೇಮ, ಪ್ರೀತಿ, ಆದರ, ಅವಶ್ಯಕತೆ, ಗುಟ್ಟು, ಮರ್ಮ.

चाहक– पु. चाहनेवाला, प्रेमी । ಇಚ್ಛಕ, ಪ್ರೀತಿಸುವವ.

चाहना– सक्रि इच्छा करना, प्यार करना, प्रयत्न करना, निहारना, खोजना । ಇಚ್ಛಿಸು, ಬಯಸು, ಕೋರು, ಅಪೇಕ್ಷಿಸು, ಬೇಡು, ಪ್ರೀತಿಸು, ಪ್ರಯತ್ನ ಮಾಡು,ಪ್ರೇಮದಿಂದ ನೋಡು, ಹುಡುಕು. स्त्री. चाह,प्रेम,आवश्यकता । ಪ್ರೀತಿ, ಪ್ರೇಮ, ಅಭಿಲಾಷೆ, ಆದರ, ಅವಶ್ಯಕತೆ.

चाहि– अव्य. की अपेक्षा । ಕಿಂತ, ಗಿಂತ.

चाहिये– अव्य. उचित है । ಯೋಗ್ಯವದೆ, ತಕ್ಕುದು, ಬೇಕು.

चाही–वि. स्त्री. चाही हुई, कुएंके पानीसे सींची जानेवाली । ಇಚ್ಛಿತ, ಅಭಿಲಾಷಿಸಿದ, ಪ್ರಿಯಕರ, ಬಾವಿಯ

ನೀರಿನಿಂದ ನೀರುಣ್ಣುವ (ಪ್ರೋಕ್ಷಿ ಸಲ್ಪಡುವ).

चाहे–अव्य. इच्छा हो तो, मनमें आवे। ಬೇಕಾದರೆ, ಇಷ್ಟೈಯಿದ್ದರೆ,ಇಲ್ಲವೆ.

चिंआ, चियाँ– पु. इमलीका वीज। ಹುಣಸೆಯ ಬೀಜ.

चिउँटा–पु. एक कीड़ा। ದೊಡ್ಡ ಇರುವೆ.

चिउँटी– स्त्री. चींटी। ಸಣ್ಣ ಇರುವೆ.

चिंगारी– स्त्री. दे 'चिनगारी'।

चिघाड–स्त्री. चिल्लाहट, हाथीका शब्द। ಗರ್ಜನೆ, ಘೀಂಕಾರ.

चिंघाडना– अक्रि. चीखना, हाथीका चिल्लाना। ಒದರು, ಗರ್ಜಿಸು, ಘೀಳಿಸು, ಘೀಂಕರಿಸು.

चिंचिनी– स्त्री इमली, इमलीका वीज। ಹುಣಸೆ, ಹುಣಸೆಯ ಬೀಜ.

चिजा– पु. पुत्र, लडका। ಮಗ,ಪುತ್ರ.

चित, चिता– स्त्री. फिक्र, ध्यान, सोच। ಚಿಂತೆ,ಧ್ಯಾನ, ವಿಚಾರ,ಸಂದೇಹ.

चिंतना– सक्रि चिंतन करना,सोचना। ಮನನ ಮಾಡು,ಚಿಂತನೆ ಮಾಡು, ಚಿಂತಿಸು, ವಿಚಾರ ಮಾಡು,ಸ್ಮರಣೆ ಮಾಡು. स्त्री चिंता, ध्यान। ಚಿಂತೆ, ಚಿಂತನೆ, ಮನನ, ಧ್ಯಾನ.

चिंतनीय– वि. विचारणीय, शोचनीय। ವಿಚಾರಣೀಯ, ದುಃಖದಾಯಕ, ಸಂದೇಹಾಸ್ಪದ.

चिंदी– स्त्री. टुकड़ा, खंड। ತುಂಡು, ಚೂರು.

चिउडा,चिउरा–पु. हरे धानको उवालकर तथा कूटकर वनाया हुआ चिपटा चावल। ಅವಲಕ್ಕಿ.

चिक– स्त्री. तीलियोंका परदा, कसाई। ಬಿದಿರನ್ನು ತೆಳುವಾಗಿ ಸೀಳಿ ಮಾಡಿದ ತಟ್ಟಿ, ತಡಿಕೆ, ಪರದೆ, ಕಟುಕರವ.

चिकट– वि. गंदा, चिपचिपा। ಹೊಲಸಾದ, ಎಣ್ಣೆಗಮಟಾದ, ಜಿಗುಟಾದ. पु. एक रेशमी कपड़ा। ಒಂದು ತರದ ರೇಶ್ಮೆ ವಸ್ತ್ರ.

चिकटना– अक्रि. मैलसे चिपचिपा होना। ಹೊಲಸಿನಿಂದ ಜಿಬಿಜಿಬಿಯಾದ.

चिकन–पु कसीदा काढ़ा हुआ महीनवस्त्र। ಕಸೂತಿ ತೆಗೆದ ಮಲಮಲು ವಸ್ತ್ರ.

चिकना– वि. साफ और वरावर, स्निग्ध, प्रेमी। ನುಣುವಾದ,ಸ್ನಿಗ್ಧ, ಚೊಕ್ಕಟ,ಚಂದ, ಅನುರಾಗವುಳ್ಳ, ಆಸಕ್ತ.

चिकनाई– स्त्री चिकनाहट, स्निग्धता, सुंदरता। ನುಣುವು, ಸ್ನಿಗ್ಧತೆ, ಅಂದ, ಜೆಡಗು, ಶೃಂಗಾರ.

चिकनाना– सक्रि चिकना करना। ನುಣ್ಣಗೆ ಮಾಡು, ನುಣುವು ಮಾಡು, ಸ್ನಿಗ್ಧ ಮಾಡು, ಸ್ವಚ್ಛ ಮಾಡು. अक्रि चिकना होना, अनुरक्त होना। ನುಣ್ಣಗಾಗು, ಸ್ನಿಗ್ಧವಾಗು, ಅನುರಕ್ತನಾಗು.

चिकनापन- पु. चिकनाहट–स्त्री. दे.'चिकनाई'।

चिकनियाँ–वि.बना ठना, सुंदर, छैला। ಚಲುವ, ಸೊಗಸುಗಾರ, ಮೋಜು ಗಾರ, ಬೆಡಗುಗಾರ.

चिक्कार– पु. चीत्कार। ಚೀತ್ಕಾರ, ಗರ್ಜನೆ.

चिक्कारना– अक्रि चीत्कार करना, गरजना। ಒದರು, ಗರ್ಜಿಸು, ಚೀರು.

चिकित्सक–पु. वैद्य। ವೈದ್ಯ,ಹಕೀಮ.

चिकित्सा– स्त्री इलाज, दवा। ಚಿಕಿತ್ಸೆ, ಇಲಾಜು, ಔಷಧ.

चिकुटी– स्त्री दे. 'चिकोटी'।

चिकुर, चिकूर– पु. केश, साँप आदि सरीसृप, पहाड़, छछूंदर, गिलहरी। ತಲೆಯ ಕೂದಲು, ಹಾವಿನಂಥ ಹರಿದಾಡುವ ಪ್ರಾಣಿಗಳು, ಪರ್ವತ, ಸೊಂಡಿಲಿ, ಇಣಚಿ, ಅಳಿಲು.

चिकोटी– स्त्री. चिमटी। ಚಿಟಿಕೆ.

चिक्कट– वि. जिसमें मैल खूब चिपट गया हो, गंदा। ಹೊಲಸಿನಿಂದ ಜಿಗುಟಾದ, ಹೊಲಸು. पु जमी हुई मैल। ಹೊಲಸು, ಯಾವ ದೊಂದು ಪದಾರ್ಥದ ಮೇಲೆ ಕೂಡಿದ ಧೂಳು.

चिक्कन– वि. 'चिकना'।

चिखुरना– सक्रि. जोते हुए खेतमेंसे घासपात हटाना। ಕಳೆ ತೆಗೆ, ಕಸ-ಕಡ್ಡಿ ತೆಗೆದೊಗೆ.

चिखुरी– स्त्री. गिलहरी। ಅಳಿಲು, ಇಣಚಿ.

चिचान– पु बाज। ಗಿಡುಗ.

चिचाना, चिचावना, चिचियाना–अक्रि चिल्लाना। ಅರಚು,ಚೀರು,ಕೂಗು, ಒದರು.

चिजारा–पु कारीगर। ಶಿಲ್ಪಿ,ಉಪ್ಪಾರ.

चिट– स्त्री. रुक्का, पुरजा। ಕಾಗದದ ಚೂರು, ಚೀಟಿ, ಭಾಗ, ಬಿಲ್ಲು.

चिटकना– अक्रि. फटना, दरकना, खीजना। ಒಡೆ, ಸೀಳು, ಬಿರಿ, ಸಿಟ್ಟಾಗು, ತ್ರಾಸಗೊಳ್ಳು.

चिटकाना– सक्रि चिढाना, किसी सूखे पदार्थको तोडना। ಸಿಟ್ಟಿಗೆಬ್ಬಿಸು, ತ್ರಾಸ ಕೊಡು, ಬಿರುಸು ಪದಾರ್ಥ ವನ್ನು ಮುರಿ.

चिटनवीस– पु. लेखक। ಬರೆಯುವವ, ಕಾರಕೂನ, ಗುಮಾಸ್ತ.

चिट्टा– वि. सफेद। ಬಿಳಿಯ, ಶುಭ್ರ. पु. हानिकारक, काम करने के लिये दी गयी उत्तेजना। ಹಾನಿಕಾರಕ ಕೆಲಸ ಮಾಡಲು ಕೊಡುವ ಉತ್ತೇಜನೆ, ದುಷ್ಪ್ರೇರಣೆ.

चिट्ठा–पु खाता, सूची, वेतन। ಖಾತೆ-ಕೀರ್ದಿ, ಜಮಾ-ಖರ್ಚಿನ ಪುಸ್ತಕ, ವಿವರಣೆ, ಪಗಾರ, ವೇತನ. कच्चा चिट्ठा = विस्तार पूर्वक वर्णन जिसमे कोई बात छिपाई न गयी हो। ಏನನ್ನೂ 'ಮುಚ್ಚಿಡದ ಸವಿಸ್ತರ ವರ್ಣನೆ.

चिट्ठी– स्त्री. पत्री, पुरजा। ಪತ್ರ, ಕಾಗದ, ಓಲೆ, ಚೀಟಿ, ದಸ್ತೈವಜು.

चिट्ठीपत्री– स्त्री. पत्रव्यवहार, पत्र।

ಪತ್ರವ್ಯವಹಾರ, ಪತ್ರ.

चिट्ठीरसा–पु. डाकिया। ಪತ್ರವಾಹಕ, ಅಂಚೆಯಾಳು, ಓಲೆಕಾರ.

चिड़चिड़ा– वि. तनिकसे चिढ़नेवाला, क्रोधी। ಬೇಗನೆ ಸಿಟ್ಟುಗೇಳುವವ, ಸಿಡುಕ, ಕ್ರೋಧಿ.

चिड़चिड़ाना–अक्रि 'चिड़चिड़'करना, सूखकर फट जाना, चिढ़ना। ಹಸಿ ಕಟ್ಟಿಗೆ ಸುಡುವಾಗ 'ಚಿಟ್ ಚಿಟ್' ಎಂದು ಸಪ್ಪಳವಾಗು,ಒಣಗಿ ಬಿರಿ, ಒಡೆ, ಸಿಟ್ಟಾಗು, ರೇಗು.

चिड़चिड़ाहट– स्त्री चिढ़ने की क्रिया या भाव। ಸಿಟ್ಟು, ಸಿಡುಕು.

चिड़ा– पु. चिड़िया (नर)। ಗಂಡು ಗುಬ್ಬಿ.

चिड़िया– स्त्री पक्षी। ಪಕ್ಷಿ, ಹಕ್ಕಿ, ಗುಬ್ಬಿ, ಗುಬ್ಬಚ್ಚಿ.

चिड़ियाख़ाना– पु वह स्थान जहाँ भाँति भाँतिके पशु-पक्षी रखे जाते हैं। ಪಕ್ಷಿ ಶಾಲೆ, ಪ್ರಾಣಿ ಸಂಗ್ರಹಾಲಯ.

चिड़िहार, चिड़ीमार– पु. बहेलिया। ಪಕ್ಷಿಗಳ ಬೇಟೆಗಾರ, ವ್ಯಾಧ.

चिढ़– स्त्री. कुढ़न, तिरस्कार। ಸಿಟ್ಟು, ತಿರಸ್ಕಾರ, ಅಸಹ್ಯ.

चिढ़ना– अक्रि नाराज होना, झल्लाना। ರೇಗು, ಕೋಪಿಸು, ಸಿಟ್ಟಾಗು.

चिढ़वाना–सक्रि. 'चिढ़ाना'का प्रे. रूप।

चिढ़ाना– सक्रि खिजाना,मुँह बनाना। ಸಿಟ್ಟಿಗೆಬ್ಬಿಸು, ಅಣಕಿಸು.

चित– पु. चित्त, नजर। ಚಿತ್ತ, ಮನಸ್ಸು, ದೃಷ್ಟಿ. वि. इकट्ठा या ढेर किया हुआ, पीठके बल पड़ा हुआ। ಕೂಡಿಸಿದ, ಗುಂಪು ಮಾಡಿದ, ಅಂಗಾತ, ಬೆನ್ನ ಮೇಲೆ ಬಿದ್ದ.

चितकबरा– वि. रंगबिरंगा। ವಿವಿಧ ಬಣ್ಣದ, ಬಣ್ಣಬಣ್ಣದ.

चितचोर–वि. मोहक। ಮನಮೋಹಕ, ಪ್ರಿಯ ವ್ಯಕ್ತಿ.

चितरना– सक्रि. चित्र बनाना। ಚಿತ್ರಿಸು, ಚಿತ್ರ ತೆಗೆ.

चितला– वि. दे. 'चितकबरा'।

चितवन– पु. दृष्टि, कटाक्ष। ದೃಷ್ಟಿ, ಕಟಾಕ್ಷ, ನೋಟ.

चितवना– सक्रि. देखना। ನೋಡು, ದೃಷ್ಟಿಸು, ಅವಲೋಕಿಸು.

चितवाना–सक्रि. दिखाना। ತೋರಿಸು, ಲಕ್ಷ್ಯ ಎಳೆ.

चिता– स्त्री. लकड़ीका ढेर जिसपर शव जलाया जाता है, स्मशान। ಚಿತೆ, ಹೆಣಗಳನ್ನು ಸುಡುವ ಜಾಗ, ಸ್ಮಶಾನ.

चिताना– सक्रि. सचेत करना, याद दिलाना, जलाना। ಎಚ್ಚರಿಕೆ ಕೊಡು, ನೆನಪಿಗೆ ತಂದು ಕೊಡು, ಸೂಚಿಸು, ಸುಡು, ಹೊತ್ತಿಸು.

चितावनी–स्त्री.सावधान करनेकी क्रिया। ಎಚ್ಚರಿಕೆ.

चिति– स्त्री. चिता, राशि, चुनाई। ಚಿತೆ, ರಾಶಿ, ಗುಂಪು,ಆರಿಸುವದು.

**चितेर, चितेरा**– पु चित्रकार । ಚಿತ್ರಗಾರ, ಶಿಲ್ಪಿ.

**चितैना, चितौना**–सक्रि. दे. 'चितवना'।

**चितौन**– स्त्री. दे. 'चितवन'।

**चित्रकार**– पु. दे. 'चितेरा'।

**चित्रकारी**– स्त्री. चित्रकला । ಚಿತ್ರಕಲೆ, ಶಿಲ್ಪ.

**चित्रसारी**– स्त्री. सजा हुआ कमरा। ಶೃಂಗಾರ ಮಹಲು, ರಂಗ ಮಹಲು, ಚಿತ್ರಶಾಲೆ.

**चिथडा**– पु. फटा पुराना कपडा । ಚಿಂದಿ, ಹರಿದ ಅರಿವೆಯ ತುಂಡು.

**चिथाडना**– सक्रि फाडना, टुकडे टुकडे करना, लज्जित करना । ಹರಿ, ತುಂಡು ತುಂಡು ಮಾಡು, ಅಪಮಾನ ಮಾಡು.

**चिनक,चिनग**– स्त्री. जलन । ಚಳಕು, ವೇದನೆ, ನವೆ, ಉರಿ.

**चिनगारी, चिनगी**– स्त्री अग्निकण । ಕಿಡಿ, ಅಗ್ನಿಕಣ.

**चिनिया**– वि चीन देशका, श्वेत । ಚೀನ ದೇಶದ, ಬಿಳಿಯ, ಶ್ವೇತ.

**चिनिया बादाम**–पु. मूँगफली । ಶೇಂಗಾ, ನೆಲಗಡಲೆ,

**चिन्हारि, चिन्हारी**– स्त्री परिचय । ಪರಿಚಯ, ಗುರ್ತು.

**चिपकना**– अक्रि. दो पदार्थोंका परस्पर जुटना । ಅಂಟಿಕೊಳ್ಳು, ಮೆತ್ತಿಕೊಳ್ಳು.

**चिपकाना**–सक्रि. दो वस्तुओंको परस्पर जोडना । ಅಂಟಿಸು, ಹಚ್ಚಿಸು,

**चिपचिपा**– वि लसदार । ಜಿಗುಟಾದ, ಅಂಟಿನ, ಹಸಿಯಾದ.

**चिपटना**– अक्रि दे 'चिपकना'।

**चिपटा**– वि दवा हुआ, चिपका हुआ, चपटा । ಒತ್ತಲ್ಪಟ್ಟ,ಅಂಟಿಸಲ್ಪಟ್ಟ, ಚಪ್ಪಟೆಯಾದ, ಸಮತಲ.

**चिपडी, चिपरी**– स्त्री. उपली । ಕುಳ್ಳು, ಬೆರಣಿ.

**चिप्पड**– पु. किसी पदार्थका छोटा चिपटा टुकडा, पपडी । ಯಾವುದೊಂದು ಪದಾರ್ಥದ ಚಪ್ಪಟೆಯಾದ ಚಿಕ್ಕ ತುಂಡು, ಹಕ್ಕಳೆ.

**चिप्पी**– स्त्री. दे. 'चिपडी'। छोटा चिप्पड । ಕಾಗದದ ತುಂಡು, ಹಕ್ಕಳೆ, ಲೇಬಲ್.

**चिबु, चिबुक**–पु. ठोडी । ಗದ್ದ, ಕದಪು.

**चिमटना**– अक्रि. चिपकना, लिपटना. पीछे पडना, गुथना । ಗಟ್ಟಿಯಾಗಿ ಅಂಟಿಕೊಳ್ಳು, ಆಲಿಂಗಿಸು, ಬೆನ್ನು ಹತ್ತು, ಬಿಡದಿರು, ಹೆಣೆಯಲ್ಪಡು.

**चिमटा**– पु. वस्तुऐं पकडनेके लिये लोहे इत्यादिका वना एक अस्त्र । ಇಕ್ಕಳ, ಚಿಮುಟಿಗೆ.

**चिमटाना**– सक्रि चिपकाना, आलिंगन करना । ಅಂಟಿಸು, ಹತ್ತೆಯಾಗಿಸು, ಆಲಿಂಗಿಸು.

**चिमटी**– स्त्री. छोटा चिमटा । ಚಿಕ್ಕ ಇಕ್ಕಳ, ಚಿಮುಟಿಗೆ.

**चिरंतन**– वि. पुरातन, पुराना । ಪುರಾ

ತನ, ಹಳೆಯ, ಪ್ರಾಚೀನ.

**चिर**– क्रिवि. अधिक समय तक । ಬಹಳ ದಿನಗಳವರೆಗೆ, वि. दीर्घायु । ದೀರ್ಘಾಯು, ಚಿರಾಯು.

**चिरकना**–अक्रि थोडा थोडा मल बाहर निकलना । ಸ್ವಲ್ಪಸ್ವಲ್ಪವಾಗಿ ವಾಯು ಖಾನೆ ಮಾಡು.

**चिरकुट**– पु. गूदड़ । ಚಿಂದಿ, ಹರಕು ಬಟ್ಟೆ.

**चिरचना**– अक्रि. क्रुद्ध होना । ಸಿಟ್ಟಾಗು, ಕೋಪಿಸು.

**चिरचिरा**– वि दे. ' चिडचिडा ' ।

**चिरना**– अक्रि. फटना, लकीर की तरह फटना । ಹರಿ, ಬಿರಿ, ಸರಳವಾಗಿ ಹರಿ, ಸೀಳು.

**चिरसि, चिरमिटी**– स्त्री घुँघची,गुंजा । ಗುಲಗಂಜಿ.

**चिरवाई, चिराई**– स्त्री चिरवाने की क्रिया या मजदूरी । ಹರಿಯುವ, ಸೀಳುವ ಅಥವಾ ಕೊಯ್ಯುವ ಕೆಲಸ, ಆ ಕೆಲಸದ ಕೂಲಿ.

**चिरवाना**–सक्रि.' चीरना ' का प्रे. रूप ।

**चिरस्थायी**– वि बहुत दिनो तक रहनेवाला । ಬಹಳ ದಿನ ಬಾಳುವ.

**चिरहँटा**– पु. बहेलिया । ಬೇಟೆಗಾರ, ಪಕ್ಷಿಗಳನ್ನು ಹಿಡಿಯುವವ.

**चिराक, चिराग**– पु. दीपक । ದೀಪ, ಸೊಡರು.

**चिराना**–सक्रि. चीरने का काम कराना। ಹರಿಯಿಸು, ಸೀಳಿಸು, ಕೊಯಿಸು

अक्रि.दे. ' चिरना ' । वि. पुरातन। ಹಳೆಯ, ಪುರಾತನ.

**चिरायँध**– पु, चमड़े बाल आदि के जलने से उत्पन्न दुर्गंध । ಚರ್ಮ ಕೂದಲು ಮುಂತಾದವುಗಳನ್ನು ಸುಡುವದರಿಂದಾಗುವ ದುರ್ಗಂಧ.

**चिरिया**– स्त्री दे. ' चिड़िया ' ।

**चिरिहार**– पु दे. ' चिडीमार ' ।

**चिरैया**– स्त्री. दे. ' चिडिया ' ।

**चिरौरी**– स्त्री प्रार्थना । ಪ್ರಾರ್ಥನೆ, ವಿನಯ, ದೈನ್ಯದಿಂದ ಬೇಡಿಕೊಳ್ಳುವದು.

**चिलक**– स्त्री. चमक, टीस । ಕಾಂತಿ, ಹೊಳಪು, ನಿಂತು ನಿಂತು ಆಗುವ ವೇದನೆ (ನೋವು), ಚುಳುಕು.

**चिलकना**– अक्रि चमकना, रह रह कर पीडा उठना । ಹೊಳೆ, ಪ್ರಕಾಶಿಸು, ನಿಂತು ನಿಂತು ನೋವಾಗು, ನೋಯು.

**चिलगोज़ा**– पु. एक मेवा । ಒಂದು ತರದ ಹಣ್ಣು.

**चिलचिलाना**–अक्रि. चमकना। ಹೊಳೆ, ಪ್ರಕಾಶಿಸು. **चिलचिलाती धूप**= तेज धूप । ಪ್ರಖರವಾದ ಬಿಸಿಲು.

**चिलबिला**– वि. चंचल, नटखट । ಚಂಚಲ, ಚಪಲ, ತಿರುಕ, ಸ್ವೈರ ವೃತ್ತಿಯ.

**चिलम**– स्त्री तम्बाखू पीने का पात्र । ಚಿಲುಮೆ.

**चिलमची**– स्त्री. हाथ मुँह धोने का

पात्र । ಕೈಬಾಯಿ ತೊಳೆದುಕೊಳ್ಳುವ ಪಾತ್ರೆ, ಡಬರಿ.

**चिलमन**– स्त्री. चिक, परदा । ತಟ್ಟೆಯ ಪರದೆ, ಬಿದಿರಿನ ತಟ್ಟಿ, ತೆರೆ.

**चिलड़**– पु. जूकी तरह का एक सफेद कीडा । ಹೇನಿನಂಥ ಒಂದು ಬಿಳಿಯ ಹುಳು.

**चिल्ल पों**– स्त्री. चिल्लाहट, शोरगुल । ಕೂಗಾಟ, ಗದ್ದಲ.

**चिल्ला**– पु. प्रत्यंचा, एक पेड़, चालीस दिनोंका समय, वकना । ಹೆದೆ, ಬಿಲ್ಲಿನ ಹಗ್ಗ, ಒಂದು ಕಾಡು ಗಿಡ, ನಾಲ್ವತ್ತು ದಿನಗಳ ಸಮಯ, ಬಡಬಡಿಸುವಿಕೆ.

**चिल्लाना**– अक्रि. उच्च स्वरसे बोलना । ಚೀರು, ಅರಚು, ಒದರು.

**चिल्लाहट**– स्त्री. कोलाहल, हल्ला । ಕೂಗಾಟ, ಬೊಬ್ಬೆ, ಅರಚುವಿಕೆ.

**चिहुँकना**– अक्रि. दे. 'चौंकना' ।

**चिहुँटना**– अक्रि. चिमटना, चुटकी काटना । ಚಿವುಟು, ಚಿಟಿಕೆ ಮುರಿ.

**चिहुंटी**– स्त्री. चिकोटी, चिमटी । ಚಿಟಕೆ, ಇಕ್ಕಳ, ಚಿಮುಟಿಗೆ.

**चिहुर**– पु. केश, वाल। ಕೇಶ,ತಲೆಯ ಕೂದಲು.

**चीचपड**– स्त्री. प्रतिकार या विरोधका प्रदर्शन । ಪ್ರತ್ಯುತ್ತರ, ವಿರೋಧ, ಆಕ್ಷೇಪಣೆ.

**चींचीं**– स्त्री. पक्षियों या वच्चों का मधुर धीमें शब्दसे वोलना । ಪಕ್ಷಿಗಳ ಅಥವಾ ಮಕ್ಕಳ ಮಧುರ ಮಾತು.

**चींटा**– पु. चिउंटा । ದೊಡ್ಡ ಇರುವೆ.

**चींटी**– स्त्री. दे. चिऊंटी । ಸಣ್ಣ ಇರುವೆ.

**चींतना**– सक्रि. चित्रित करना । ಚಿತ್ರಿಸು, ಚಿತ್ರ ಬರೆ.

**चीक**– स्त्री. चीखने की आवाज । ಕೂಗು, ಅರಚುವಿಕೆ, ಬೊಬ್ಬೆ.

**चीकना**– अक्रि. चीखना । ಅರಚು, ಕೂಗು, ಒದರು.

**चीख**– स्त्री. चीखने की आवाज । ಕೂಗು, ಅರಚುವಿಕೆ, ಬೊಬ್ಬೆ.

**चीखना**– अक्रि. चिल्लाना । ಒದರು, ಅರಚು, ಕೂಗು. सक्रि. चखना । ರುಚಿ ನೋಡು, ಸವಿ ನೋಡು.

**चीखर, चीखल**– पु. कीचड । ಕೆಸರು, ಕೊಚ್ಚೆ.

**चीज़**– स्त्री. वस्तु, आभूषण, गीत, महत्वकी वस्तु । ವಸ್ತು, ಒಡವೆ, ಪದಾರ್ಥ, ಆಭೂಷಣ, ಆಭರಣ, ಹಾಡುವ ಪದ, ಮಹತ್ವದ ವಸ್ತು.

**चीठ**– स्त्री. मैल, कीचड़ । ಹೊಲಸು, ಕೆಸರು.

**चीठा**– पु. चिट्ठा, सूची । ಜಮಾಖರ್ಚಿನ ಪುಸ್ತಕ, ಖಾತೆ-ಕೀರ್ದಿ, ವಿವರಣೆ.

**चीठी**– स्त्री दे 'चिट्ठी' ।

**चीत**– पु. चित्त, मन, चित्रा नक्षत्र । ಚಿತ್ತ, ಮನಸ್ಸು, ಚಿತ್ರಾ ನಕ್ಷತ್ರ.

**चीता**–पु. चित्त, मन, एक हिंसक पशु ।

ಚಿತ್ತ, ಮನಸ್ಸು, ಲಕ್ಷ್ಯ, ಚಿಚ್ಚರ, ಕಿರಬ. स्त्री. चिता । ಚಿಂತೆ. वि. विचारा हुआ । ವಿಚಾರ ಮಾಡಿದ.

**चीथड़ा,चीथरा–** पु. दे. ‘ चिथड़ा ’।

**चीथना–** सक्रि. टुकडे टुकड़े करना, नोचना । ಹರಿ, ತುಂಡು ತುಂಡು ಮಾಡು, ಉಗುರಿನಿಂದ ಚಿವುಟು, ಸೀಳು, ಕೆರೆ.

**चीन–** पु. सूत, ध्वजा, एक प्रकारका अन्न, एक देश । ನೂಲು, ಧ್ವಜ, ಬಾವುಟ, ಒಂದು ಕೀಳು ತರಗತಿಯ ಧಾನ್ಯ, ಚೀನ ದೇಶ.

**चीनना–** सक्रि. दे ‘ चीन्हना ’।

**चीनाबादाम–** पु. मूँगफली । ಶೇಂಗಾ, ನೆಲಗಡಲೆ.

**चीनी–** स्त्री. शक्कर । ಸಕ್ಕರೆ. वि. चीन देशका । ಚೀನ ದೇಶದ.

**चीन्हना–** सक्रि. पहचानना । ಗುರುತಿಸು.

**चीन्हा–**पु. चिह्न, निशानी । ಗುರುತು, ಚಿಹ್ನೆ.

**चीपड–** पु. आँखकी कीचड़ । ಕಣ್ಣು ಪಿಚ್ಚು, ಕಣ್ಣಿನ ಗೀಜು.

**चीमड, चीवर–** वि. जो खींचतानसे न फटे, लचीला । ಸ್ಥಿತಿಸ್ಥಾಪಕ, ಜಗ್ಗಿದರೆ ಮುರಿಯದ.

**चीर–** पु. वस्त्र, चिथड़ा, गायका थन, चार लड़ियोंकी माला, वृक्षकी छाल, दरार, घाव । ಅರಿವೆ, ವಸ್ತ್ರ, ಚಿಂದಿ, ಹಸುವಿನ ಮೊಲೆ, ಕೆಚ್ಚಲು, ನಾಲ್ಕು ಎಳೆಗಳುಳ್ಳ ಮಾಲೆ, ಗಿಡದ ತೊಗಟೆ, ಬಿರುಕಲು, ಗಾಯ.

**चीरना–** सक्रि. फाड़ना । ಸೀಳು, ಹರಿ, ಕೊಯ್ಯು, ಕೊರೆ, ಸಿಗಿ.

**चीरफाड–** स्त्री. चीरने फाड़नेका काम । ಹರಿಯುವ, ಕೊಯ್ಯುವ ಕೆಲಸ, ಸೀಳುವಿಕೆ, ಶಸ್ತ್ರ ಚಿಕಿತ್ಸೆ.

**चीरा–** पु. पगड़ी बनानेका एक तरहका कपड़ा, चीरकर बनाया हुआ घाव, गाँवकी सीमापर गाड़ा हुआ पत्थर । ಪಗಡಿ (ರುಮಾಲ) ತಯಾರಿಸುವ ಒಂದು ತರದ ಬಣ್ಣದ ಅರಿವೆ, ಸೀಳಿ ಅಥವಾ ಕೊಯ್ದು ಆದ ಗಾಯ, ಕಚ್ಚು, ಸೀಮೆಯ ಕಲ್ಲು, ಮೇರೆಗಲ್ಲು.

**चील्ह, चील–** स्त्री. बाज के जातिकी एक चिड़िया । ಹದ್ದು, ಗರುಡ, ಗಿಡುಗ.

**चीलड़, चीलर–** पु. दे. ‘ चिल्लड ’।

**चीला–** पु. एक पकवान । ದೋಸೆ.

**चीवर–**पु. (बौद्ध)भिक्षुओंका पहनावा । ಬೌದ್ಧ ಭಿಕ್ಷುಗಳ ಬಟ್ಟೆ.

**चुंगल–**पु. पक्षियों या पशुओंका पंजा । ನಖ, ಪಂಜ, ಮೃಗ ಪಕ್ಷಿಗಳ ಕೊಂಕುಗುರು.

—**में फंसना** = वशमें आना । ಅಳವಿನಲ್ಲಿ ಸಿಗು, ಮೋಸ ಹೋಗು.

**चुंगी–** स्त्री बाहरसे आनेवाले माल पर लगनेवाला महसूल, चुटकीभर वस्तु । ಸುಂಕ, ಶೆಂಗೆ, ಮುಷ್ಟಿ, ಮುಷ್ಟಿಗೆ,

ಹಿಡಿ.
चुंधाना– सक्रि. चुसाना । ಎರಡನೆಯವರಿಂದ ಹೀರುವ ಅಥವಾ ಸೀವುವ ಕೆಲಸ ಮಾಡಿಸು.
चुंडा– पु कुआँ । ಬಾವಿ.
चुंडित–वि चोटीवाला । ಚೆಂಡಿಕೆಯುಳ್ಳ
चुंडी– स्त्री चोटी । ಚೆಂಡಿಕೆ, ಜುಟ್ಟು.
चुंदी– स्त्री दे. 'चुंडी'। कुटनी । ಕುಂಟನಗಿತ್ತಿ.
चुँधलाना, चुंधिआना– अक्रि दे 'चं.धियाना'।
चुंधा– वि छोटी आँखोंवाला । ಚಿಕ್ಕ ಕಣ್ಣುಗಳುಳ್ಳವ, ಮಂದದೃಷ್ಟಿಯ.
चुबक–पु कामुक, एक धातु जो लोहेको खीचनी है । ಕಾಮುಕ, ಸೂಜಿಗಲ್ಲು, ಲೋಹಚುಂಬಕ.
चुबन–पु चूमना । ಮುತ್ತು, ಚುಂಬನ, ಅಧರಪಾನ.
चुंबना– अक्रि चूमना, स्पर्श करना । ಚುಂಬಿಸು, ಮುದ್ದಿಡು, ಮುಟ್ಟು.
चुंभना– अक्रि दे 'चुभना'।
चुअना– अक्रि टपकना । ಹಣಿಹಣಿಯಾಗಿ ಬೀಳು, ಸೋರು.
चुआई– स्त्री. चुआने या टपकाने का काम, चुआनेका शुल्क । ಹನಿ ಹನಿಯಾಗಿ ಉದುರಿಸುವದು, ಗಾಳಿಸುವದು, ಈ ಕೆಲಸದ ಕೂಲಿ.
चुआन– स्त्री नहर, खाई । ಕಾಲುವೆ, ಪ್ರವಾಹ, ಹೊಂಡ, ಕಂದಕ.
चुआना– सक्रि. टपकाना, बूंदबूंद करके गिराना । ಹನಿಹನಿಯಾಗಿ ಬೀಳಿಸು, ತೊಟ್ಟಿಕ್ಕಿಸು, ಸೋಸು, ಗಾಳಿಸು.
चुकंदर–पु एक तरकारी । ಬೀಟಗಡ್ಡೆ, ಗಾಜಿನಗಡ್ಡೆ.
चुकचुकाना– अक्रि पसीजना, कणों के रूपमें निकलना । ಸ್ರವಿಸು, ಒಸರು, ಬಸಿ, ಸೋರು.
चुकता–वि बेबाक । ಕಳೆದ, ಸಲ್ಲಿಸಿದ, ತಿರುಗಿಕೊಟ್ಟ, ಋಣಮುಕ್ತನಾದ.
चुकना– अक्रि समाप्त होना, निबट जाना, भूलचूक करना, निष्फल होना । ತೀರು, ಸಮಾಪ್ತವಾಗು, ಪೂರೈಸು, ನಿಶ್ಚಯವಾಗು, ತಪ್ಪು ಮಾಡು, ತಪ್ಪು, ವ್ಯರ್ಥವಾಗು.
चुकाई– स्त्री चुकता होने का भाव । ತೀರಿಸುವಿಕೆ, ಸಂದಾಯ, ಪೂರೈಸುವಿಕೆ
चुकाना–सक्रि अदा करना, तय करना । ತೀರಿಸು, ಋಣಮುಕ್ತನಾಗು, ಪೂರೈಸು, ನಿಶ್ಚಯಿಸು.
चुकौता– पु ऋण परिशोध । ಸಾಲ ತೀರಿಸುವದು
चुक्कड़–पु मिट्टीका छोटा पात्र । ಮಣ್ಣಿನ ಚಿಕ್ಕ ಪಾತ್ರೆ, ಬಟ್ಟಲು.
चुक्कार– पु गरज । ಗರ್ಜನೆ, ಸಿಂಹದ ಗರ್ಜನೆ.
चुक्की– स्त्री छल, कपट । ಕಪಟ, ಮೋಸ.
चुरवाना– सक्रि गाय दुहने के पहले बछड़े को पिलाना । ಹಾಲು ಹಿಂಡುವ

ಮೊದಲು ಕರುವಿಗೆ ಕುಡಿಸು.

चुग़द– पु उल्लू। ಗೂಗೆ. वि मूर्ख। ಮೂರ್ಖ, ದಡ್ಡ.

चुगना– सक्रि चोचसे उठाकर खाना। ಚುಂಚುವಿನಿಂದ ಆರಿಸಿ ತಿನ್ನು.

चुग़ल, चुग़लखोर–वि पीठ पीछे निंदा करनेवाला। ಪರೋಕ್ಷದಲ್ಲಿ ನಿಂದೆ ಮಾಡುವವ, ಚಾಡಿಖೋರ.

चुग़लखोरी–स्त्री. पीठ पीछे निंदा करना। ಚಾಡಿ ಹೇಳುವಿಕೆ, ಪರೋಕ್ಷದಲ್ಲಿ ನಿಂದಿಸುವದು.

चुग़ली–स्त्री. पीठ पीछे की निंदा, झूटी शिकायत। ಪರೋಕ್ಷದಲ್ಲಿ ಮಾಡುವ ನಿಂದೆ, ಚಾಡಿ, ದೂರು, ದೂಷಣೆ.

चुगाई– स्त्री चोचसे उठाकर खाने या खिलाने की क्रिया। ಚುಂಚುವಿನಿಂದ ತಿನ್ನುವಿಕೆ ಅಥವಾ ತಿನ್ನಿಸುವಿಕೆ.

चुगाना– सक्रि चिड़ियों को दाना खिलाना। ಹಕ್ಕಿಗಳಿಗೆ ಕಾಳು ತಿನ್ನಿಸು, ಗುಟುಕು ಕೊಡು.

चुग़ुल, चुग़ुलखोर– वि दे 'चुगल', 'चुगलखोर'।

चुचकारना, चुचुकारना– सक्रि चुमकारना, दुलारना, फुसलाना। ಪ್ರೇಮಿಸು, ಲಲ್ಲೆ ಮಾಡು, ಮುಂಡಾಡು, ಪುಸಲಾಯಿಸು, ಉಬ್ಬಿಸು.

चुचकारी– स्त्री. चुमकारने की क्रिया या भाव। ಲಲ್ಲೆ, ಮುದ್ದಾಟ.

चुचाना, चुचुआना–अक्रि दे 'चुआना'।

चुचुकना– अक्रि सूखकर सिकुड़ जाना। ಒಣಗಿ ಮುದುಡಿಯಾಗು.

चुटकना–सक्रि कोड़ा मारना, चुटकीसे तोड़ना। ಬಾರಕೋಲಿನಿಂದ ಹೊಡೆ, ಚಿವುಟು, ಉಗುರಿನಿಂದ ಕತ್ತರಿಸು.

चुटकी– स्त्री. अँगूठे और बीचकी अँगुली के मिलने की स्थिति, थोड़ासा। ಚಿಟಿಕೆ, ಅಲ್ಪಸ್ವಲ್ಪ.

—बजाते बजाते=बहुत थोड़े समय में। ಅತ್ಯಲ್ಪ ವೇಳೆಯಲ್ಲಿ.

—लेना = हँसी उड़ाना। ಹಾಸ್ಯ ಮಾಡು, ಚುಚ್ಚು ಮಾತನಾಡು.

चुटकियों पर उड़ाना= तुच्छ समझना। ಅತ್ಯಂತ ತುಚ್ಛವೆಂದು ತಿಳಿ.

चुटकियों में = बहुत जल्द। ಕೂಡಲೆ.

चुटकुला–पु अनोखी बात, विनोदपूर्ण बात। ವಿಲಕ್ಷಣ ಮಾತು, ವಿನೋದಪೂರ್ಣ ಮಾತು.

चुटिया–स्त्री बालोंकी चोटी। ಜೆಂಡಿಗೆ, ಜುಟ್ಟು, ಶಿಖೆ.

चुटियाना, चुटीलना– सक्रि जख़मी करना। ಗಾಯ ಮಾಡು, ಕಡಿ, ಕಚ್ಚು.

चुटीला– वि चोट खाया हुआ, सबसे उत्तम। ಗಾಯವಾದ, ಪೆಟ್ಟುತಿಂದ, ಒಳ್ಳೆಯ, ಬಹಳ ಉತ್ತಮ. पु. पतली छोटी चोटी। ಚಿಕ್ಕ ಜೆಂಡಿಗೆ, ಸಣ್ಣ ಜುಟ್ಟು.

चुड़िहारा– पु. चूड़ी बेचनेवाला। ಬಳೆಗಾರ, ಬಳೆ ಮಾರುವವ.

चुड़िहारिन– स्त्री चुडिहारकी स्त्री । ಬಳೆಗಾರತಿ, ಬಳೆ ಮಾರುವವಳು.

चुडैल– स्त्री डायन, कर्कशा स्त्री । ಪಿಶಾಚಿನಿ, ಕರ್ಕಶ ಸ್ತ್ರೀ.

चुन– पु आटा, चूर्ण । ಹಿಟ್ಟು, ಚೂರ್ಣ, ಪುಡಿ.

चुनचुना–वि जिसके स्पर्शसे चुनचुनाहट उत्पन्न हो । ತುರಿಸುವ, ನವೆಯಾಗುವ. पु सफेद महीन कीडे जो बच्चोंके पेटमें पड़ जाते है । ಮಕ್ಕಳ ಹೊಟ್ಟೆಯಲ್ಲಿ ಹುಟ್ಟುವ ಚಿಕ್ಕ ಬಿಳಿಯ ಕ್ರಿಮಿಗಳು.

चुनचुनाना– अक्रि जलन पैदा करना, चुभना । ತೀಟೆಯಾಗು. ನವೆಯಾಗು

चुनट, चुनन– स्त्री. शिकन, परत । ನಿರಿಗೆ, ಮಡಿಕೆ, ಸುಕ್ಕು, ಗಳಿಗೆ, ಗೆರೆ.

चुनना– सक्रि बीनना, जोडाई करना, कपड़ेमें सिकुडन डालना । ಆರಿಸು, ಆಯು, ಚುನಾಯಿಸು, ಕೂಡಿಸು. ಕ್ರಮವಾಗಿರಿಸು, ಮಡಿಕೆ ಹಾಕು, ನಿರಿಗೆ ಮಾಡು.

चुनरी– स्त्री रँगीन बुँदकीदार साड़ी । ಬಿಳಿಯ ದುಂಡು ಕಲೆಗಳುಳ್ಳ ಬಣ್ಣದ ಸೀರೆ.

चुनवाना– सक्रि दे 'चुनाना'।

चुनांचे,चुनानचे–क्रिवि अत , इसलिये। ಅಂತೆ, ಹಾಗೆಯೆ, ಆದ್ದರಿಂದ.

चुनाई– स्त्री चुननेकी क्रिया या उसकी मजदूरी, दीवारकी जोडाई । ಆರಿಸುವ, ಮಡಿಕೆ ಹಾಕುವ ಅಥವಾ ಅದರ ಕೂಲಿ, ಗೋಡೆಕಟ್ಟುವದು.

चुनाना– सक्रि 'चुनना' का प्रे रूप ।

चुनाव– पु निर्वाचन । ಆರಿಸುವದು, ಚುನಾವಣೆ, ಆಯ್ಕೆ.

चुनिंदा–वि चुना हुआ । ಆರಿಸಲ್ಪಟ್ಟ, ಉತ್ತಮ, ಉತ್ಕೃಷ್ಟ.

चुनियाँ, चुनी– स्त्री दे 'चुन्नी'।

चुनौटी–स्त्री चूनादानी । ಸುಣ್ಣದಡಬ್ಬಿ, ಸುಣ್ಣದಕಾಯಿ.

चुनौती– स्त्री ललकार, उत्तेजना । ಲಲಕಾರ, ಆಹ್ವಾನ, ಉತ್ತೇಜನೆ, ಯುದ್ಧಕ್ಕೆ ಕರೆಯುವದು.

चुन्नी– स्त्री. माणिक आदिका छोटा टुकडा । ಮಾಣಿಕ ಅಥವಾ ರತ್ನದ ಸಣ್ಣ ಚೂರು.

चुप– वि मौन । ಸದ್ದಿಲ್ಲದ, ಮೌನ, ಸುಮ್ಮಗಿರುವ. स्त्री. खामोशी । ಮೌನ, ಶಾಂತತೆ, ನಿಶ್ಶಬ್ದತೆ.

चुपका– वि मौन । ಮೌನವಾದ, ಭಾವನೆಗಳನ್ನು ಮೇಲೆ ತೋರಿಸದವ, ಗುಮ್ಮನಾದವ.

चुपकी,चुप्पी–स्त्री खामोशी । ಮೌನ, ಶಾಂತತೆ, ನಿಸ್ತಬ್ಧತೆ, ನಿಶ್ಶಬ್ದತೆ.

चुपचाप– क्रिवि बिना कुछ बोले, गुप्तरूपसे । ಮೌನವಾಗಿ, ಗುಪ್ತರೂಪದಿಂದ, ಗುಟ್ಟಾಗಿ.

चुपडना, चुपरना– सक्रि पोतना, छिपाना, खुशामद करना । ಸಾರಿಸು,

ರೇಪಿಸು, ಬಳಿ, ಹಚ್ಚು, ಮುಚ್ಚು, ಅಡಗಿಸು, ಮುಖಸ್ತುತಿಮಾಡು.

चुपड़ा- वि. जिसकी आँख कीचड़से भरी हो। ಕಣ್ಣಲ್ಲಿ ಪಿಚ್ಚು ತುಂಬಿದ, ಗೀಜು ತುಂಬಿದ.

चुपाना- अक्रि चुप होना। ಸುಮ್ಮನಾಗು, ಶಾಂತನಾಗು.

चुप्पा- वि कम बोलनेवाला। ಕಡಿಮೆ ಮಾತನಾಡುವವ, ಗುಮ್ಮನಗುಸಕ, ಮೌನಿ.

चुप्पी- स्त्री दे. 'चुप्की'।

चुबलाना, चुभलाना- सक्रि मुँहमे रखकर स्वाद लेना। ಬಾಯಲ್ಲಿಟ್ಟು ಅತ್ತಿತ್ತ ಅಲ್ಲಾಡಿಸು, ರುಚಿನೋಡು, ಲೊಚಗುಟ್ಟು, ಚಪ್ಪರಿಸು, ಚೀಪು.

चुभकना- अक्रि. पानीमें डूबना। ನೀರಿನಲ್ಲಿ ಮುಳುಗು.

चुभकाना- सक्रि पानीमें बारबार डुबाना। ನೀರಿನಲ್ಲಿ ತಿರುತಿರುಗಿ ಮುಳುಗಿಸು.

चुभकी- स्त्री. गोता, डुबकी। ಮುಳುಕ, ಗೋತ.

चुभना- अक्रि गड़ना, धँसना, मनमें खटकना। ಚುಚ್ಚು, ಮನಸ್ಸಿಗೆ ಹತ್ತು, ನೋಗು, ತಾಗು, ಪೀಡೆಯಕ್ಕೆ ಚುಚ್ಚು.

चुभलाना- सक्रि दे 'चुबलाना'।

चुभाना, चुभोना- सक्रि गड़ाना, धँसाना। ಚುಚ್ಚು. ಇರಿ, ತಿವಿ.

ನೋಯಿಸು.

चुमकार, चुमकारी- स्त्री. पुचकार। ಮುದ್ದಾಟ, ಲಲ್ಲೆ, ತುಟಿ ಚಪ್ಪರಿಸುವುದು.

चुमकारना-सक्रि. पुचकारना, दुलारना। ಮುದ್ದಿಸು, ಪ್ರೀತಿಸು, ಲಲ್ಲೆಮಾಡು

चुम्मक- पु दे. 'चुंबक'।

चुम्मा-पु. चुंबन। ಚುಂಬನ, ಮುತ್ತು.

चुर- पु बैठक, माँद। ಕೂಡುವ ಸ್ಥಳ, ಕ್ರೂರ ಪಶುಗಳ ಗುಹೆ. त्रि अधिक, बहुत। ಅಧಿಕ, ಬಹಳ, ಹೆಚ್ಚು.

चुरकना, चुरगना- अक्रि चहकना, टूटना, फटना। ಚಿಲಿಪಿಲಿ ಗುಟ್ಟು, ತೊದಲು, ಮುರಿ, ಬಿರಿ, ಒಡೆ, ಪುಡಿಪುಡಿಯಾಗು.

चुरकुट, चुरकुस- क्रिवि चकनाचूर। ಚೂರು ಚೂರಾದ, ಪುಡಿಪುಡಿಯಾದ, ಹಿಟ್ಟಾದ.

चुरना-अक्रि. पकना, उबलना। ಕುದಿ, ಉಕ್ಕು, ಗುಟ್ಟಾಗಿ ತಂತ್ರ ನಡೆ.

चुरमुरना- अक्रि 'चुरमुर' शब्दके साथ टूटना। 'ಚುರ್‌ಮುರ್' ಶಬ್ದ ಮಾಡಿ ಮುರಿ. सक्रि. चुरमुर शब्द करके तोड़ना। 'ಚುರ್‌ಮುರ್' ಶಬ್ದ ಮಾಡುತ್ತ ಮುರಿ.

चुरवाना- सक्रि. पकानेका काम दूसरेसे कराना, चोरवाना। ಕುದಿಸು, ಅಡಿಗೆ ಮಾಡಿಸು, ಕಳವು ಮಾಡಿಸು.

चुरस- स्त्री. वस्त्रादि का सिकुड़ना। ಮುದುಕೆ, ನಿರಿಗೆ.

चुरा– पु चूर्ण, बुरादा । ಚೂರ್ಣ, ಹಿಟ್ಟು, ಕಟ್ಟಿಗೆಯ ಹೊಟ್ಟು

चुराना– सक्रि चोरी करना, छिपाना, पकाना । ಕದಿ, ತುಡುಗುಮಾಡು, ಕಳವು ಮಾಡು, ಅಪಹರಿಸು, ತಪ್ಪಿಸು, ಅಡಗಿಸು, ಕುದಿಸು,ಅಡಿಗೆ ಮಾಡು.

चुरी– स्त्री दे 'चूडी'।

चुरु– पु. दे 'चुल्लू'।

चुरैल– वि 'चुड़ैल'।

चुल–स्त्री खुजलाहट, कामोद्वेग । ನವೆ, ತುರಿ, ತೀಟೆ, ಕಾಮೋದ್ರೇಕ

चुलचुलाना– अक्रि खुजलाहट होना । ನವೆಯಾಗು, ತುರಿಸು, ತೀಟೆಹತ್ತು

चुलचुली– स्त्री. खुजलाहट । ನವೆ, ತೀಟೆ, ತುರಿ.

चुलबुला, चुलबुलिया– वि चंचल, शरारती । ಚಂಚಲ, ಚಪಲ, ದುಷ್ಟ.

चुलबुलाना–अक्रि चंचल होना, हिलना डोलना । ಚಂಚಲವಾಗು, ಚಡಪಡಿಸು, ಅಧೀರನಾಗು.

चुलबुलापन– पु. चुलबुलाहट– स्त्री चंचलता, चपलता । ಚಂಚಲತೆ, ಚಪಲತನ, ದುಷ್ಟತನ.

चुलाना– सक्रि दे 'चुआना'।

चुल्लक– पु दे. 'चुल्लू'।

चुल्ला– वि दुष्ट, नटखट । ದುಷ್ಟ, ತುಂಟ

चुल्लू–पु अँगुलियो और हथेलिसे बना गड्ढा । ಅಂಗೈ, ಅಂಗೈ ತಗ್ಗು.

**—भर पानीमें डूब मरना** = लज्जाके मारे किसी को अपना मुँह न दिखाना । ಬಹಳ ಲಜ್ಜಿತನಾಗು. ನಾಚಿಕೆಯಿಂದ ಮುಖ ತೋರಿಸದಂತಾಗು.

चुवना– अक्रि दे 'चुअना'। सक्रि दे 'चुगना'।

चुवाना– सक्रि दे 'चुआना'।

चुसकी– स्त्री घूँट, मद्य पीनेका पात्र । ಗುಟುಕು, ಮದ್ಯ ಕುಡಿಯುವ ಪಾತ್ರೆ.

चुसना– अक्रि चूसा जाना । ಹೀರಲ್ಪಡು, ಹಿಂಡಲ್ಪಡು, ನಿಸ್ಸಾರವಾಗು, ಶಕ್ತಿಹೀನವಾಗು.

चुसनी– स्त्री एक खिलौना, दूध पिलानेकी शीशी । । ಒಂದು ಆಟಿಗೆ, ಮಕ್ಕಳಿಗೆ ಹಾಲು ಕುಡಿಸುವ ಬಾಟ್ಲಿ

चुसाना–सक्रि चूसने देना । ಹೀರಿಸು, ಕುಡಿಸು, ಹಿಂಡಿಸು.

चुस्त– वि कसा हुआ, गठीला । ಬಿಗಿಯಲ್ಪಟ್ಟ, ಬಿಗಿಯಾದ, ಗಟ್ಟಿಯಾದ, ದೃಢ, ಚಪಲ.

चुस्ती–स्त्री चपलता, दृढता। ಚಪಲತೆ, ದೃಢತೆ, ಗಟ್ಟಿತನ, ಬಿಗುವು.

चुहचुहा, चुहचुहाता– वि चुहचुहाना हुआ, तेज रंगका, मधुर । ಚಿಲಿಪಿಲಿಗುಟ್ಟುವ, ಹೊಳೆಯುವ, ಎದ್ದು ಕಾಣುವ ಬಣ್ಣದ, ಸುಮಧುರ. ರಸ

ಯುಕ್ತ, ರಸಭರಿತ, ಸರಸ.

चुहचुहाना– अक्रि कलरव करना, रस चुअना । ಚಿಲಿಪಿಲಿಗುಟ್ಟು, ಅಂದ ವಾಗಿ ಕಾಣು, ರಸ ಸುರಿಯು, ರಸ ಸೋರು, ರಸ ಒಸರು.

चुहटना– सक्रि. कुचलना, रौंदना । ತುಳಿ, ಮೆಟ್ಟು.

चुहल– स्त्री हँसी, विनोद । ಹಾಸ್ಯ, ವಿನೋದ, ಮನೋರಂಜನೆ.

चुहलबाज़–वि. मजाकिया । ವಿನೋದಿ, ಹಾಸ್ಯಗಾರ.

चुहिया– स्त्री. छोटा चूहा । ಸಣ್ಣ ಇಲಿ, ಹೆಣ್ಣಿಲಿ.

चुहुटना– सक्रि दे 'चिमटना'

चूँ–पु. छोटी चिड़ियाका बोलनेका शब्द। ಚಿಕ್ಕ ಹಕ್ಕಿಯ ಧ್ವನಿ, ಉಲಿತ.

—करना = विरोध करना । ವಿರೋಧ ಮಾಡು, ಪ್ರತಿವಾದ ಹಾಕು.

चूँकि– क्रिवि क्योंकि । ಏಕೆಂದರೆ, ಈ ಕಾರಣದಿಂದ.

चूँदरी– स्त्री दे. 'चुनरी'।

चूक– स्त्री भूल, दरार, छल, एक खट्टा पदार्थ । ತಪ್ಪು, ದೋಷ, ಹರಕು, ಕಪಟ, ಮೋಸ, ಒಂದು ಹುಳಿ ಪದಾರ್ಥ. वि बहुत खट्टा । ಬಹಳ ಹುಳಿಯಾದ.

चूकना– अक्रि भूल करना, अवसर खोना । ತಪ್ಪು ಮಾಡು, ದೋಷ ಮಾಡು, ಕೈತಪ್ಪಿಹೋಗು, ಸಂಧಿ ಕಳೆಕೊಳ್ಳು.

चूची–स्त्री. स्तन,स्तनका अगला हिस्सा। ಮೊಲೆ, ಮೊಲೆಯ ತುದಿ.

चूचुक– पु स्तनका अग्रभाग । ಮೊಲೆಯ ತುದಿ.

चूज़ा– पु मुर्गीका बच्चा, नवयुवक। ಕೋಳಿಯ ಮರಿ, ತರುಣ.

चूडांत– वि पराकाष्ठापर पहुंचा हुआ, संपूर्ण । ಪರಾಕಾಷ್ಠೆಯ,ಕೊನೆಯ, ಸಂಪೂರ್ಣ.

चूडा– पु चोटी, शिखा, कडा, मुखिया माथा । ಚಂಡಿಕೆ, ಹೆಳಲು,ಜುಟ್ಟು, ತುರಾಯಿ, ಶಿಖೆ, ಕಡಗ, ಬಳೆ, ಅಧಿನಾಯಕ, ಹಣೆ.

चूड़ी–स्त्री स्त्रियोंका कलाईपर पहननेका एक मंडलाकार गहना । ಬಳೆ, ಕಡಗ, ವಲಯ.

चूडीदार– वि चूडी या घेरेदार । ವಲಯಗಳುಳ್ಳ, ದುಂಡನ್ನ ಗೆರೆಗಳುಳ್ಳ.

चूत– पु. आम्रवृक्ष । ಮಾವಿನ ಗಿಡ स्त्री. योनि । ಯೋನಿ, ಭಗ.

चूतक– पु आम्रवृक्ष । ಮಾವಿನ ಗಿಡ.

चूतड– पु. नितंब । ಪೃಷ್ಟ, ನಿತಂಬ, ಕುಂಡೆ.

चूतिया– पु. बेसमझ । ಮೂರ್ಖ, ತಿಳುವಳಿಕೆಯಿಲ್ಲದವ.

चून– पु. चूर्ण । ಹಿಟ್ಟು, ಚೂರ್ಣ, ಪುಡಿ.

चूना– पु कंकडकी भस्म । ಸುಣ್ಣ. अक्रि. टपकना । ಹನಿಹನಿಯಾಗಿ ಬೀಳು, ಸ್ರವಿಸು,ಸೋರು, ಒಸರು,

ಉದುರು, ಬಸಿ.

चूनादानी– स्त्री चुनौटी। ಸುಣ್ಣದ ಡಬ್ಬಿ, ಸುಣ್ಣದಕಾಯಿ.

चूनी–स्त्री अन्नका कण, चुन्नी। ಧಾನ್ಯದ ಕಣ, ರತ್ನದ ಚೂರು, ನುಚ್ಚು, ರವೆ.

चूमना–सक्रि. बोसा लेना। ಮುದ್ದಿಡು, ಚುಂಬಿಸು.

चूमा–पु. चुंबन। ಚುಂಬನ, ಮುತ್ತು, ಮುದ್ದಾಟ.

चूर– पु बुकनी। ಚೂರ್ಣ, ಹಿಟ್ಟು. वि तल्लीन। ಮಗ್ನ, ಮುಣುಗಿದ, ತನ್ಮಯನಾದ.

चूरन– पु चूर्ण। ಚೂರ್ಣ, ಪುಡಿ, ಹಿಟ್ಟು.

चूरना– सक्रि. चूर्ण करना। ತುಂಡು ತುಂಡು ಮಾಡು, ಪುಡಿ ಪುಡಿ ಮಾಡು.

चूरमा– पु. शक्कर मिला हुआ पूरीका चूर। ಪೂರಿಯ ಚೂರು,ಮಾಲೀದಿ.

चूरा– पु. चूर्ण। ಚೂರ್ಣ, ಪುಡಿ.

चूल– स्त्री. लकड़ीका वह पतला हिस्सा जो जोड़ने के लिये किसी दूसरे लकडीमें ठोका जाता है। ಕೂಲು, ಕೂರು, ಅಚ್ಚು. पु. चोटी। ಜೆಂಡಿಕೆ, ಜುಟ್ಟು, ಶಿಖೆ.

चूल्हा– पु भोजन बनाने की भट्टी। ಒಲೆ.

चूसना– सक्रि. ओठ और जीभ को मिलाकर किसी पदार्थ का रस खींचना। ಹೀರು, ಚೀಪು, ಎಳೆದು ಕೊಳ್ಳು.

चूहडा, चूहरा– पु. चांडाल, भंगी। ಚಾಂಡಾಲ, ಭಂಗಿ, ಝಾಡ-ಮಾಲಿ.

चूहा– पु मूसा। ಇಲಿ.

चूहादान– पु चूहेदानी– स्त्री. चूहा फँसानेका पिंजडा। ಇಲಿಯ ಬಲೆ.

चूही– स्त्री छोटा चूहा। ಚಿಕ್ಕ ಇಲಿ, ಹೆಣ್ಣಿಲಿ.

चें, चेंचें– स्त्री. चिड़ियोंकी आवाज, व्यर्थकी बकवाद। ಪಕ್ಷಿಗಳ ಧ್ವನಿ, ಉಲಿ, ವ್ಯರ್ಥವಾದ ಮಾತು, ಬಡಬಡಿಕೆ, ಗೊಡ್ಡು ಹರಟೆ.

चेटुआ–पु चिड़ियाका बच्चा। ಹಕ್ಕಿಯ ಮರಿ.

चेचक– स्त्री. शीतला रोग। ಸೈಲೀ ಬೇನೆ, ಸಿಡುಬು.

चेजा– पु छिद्र। ಛಿದ್ರ, ತೂತು.

चेट– पु दास, पति, मसखरा। ದಾಸ, ಸೇವಕ, ಪತಿ, ವಿನೋದಿ.

चेटक–पु नौकर, दूत, उपपति, विदूषक इंद्रजाल, तमाशा। ಆಳು, ದಾಸ, ದೂತ, ಉಪಪತಿ, ವಿದೂಷಕ, ವಿನೋದಿ, ಇಂದ್ರಜಾಲ, ಜಾದು, ವಿನೋದ.

चेटकी– पु जादूगर। ಜಾದುಗಾರ, ಮಂತ್ರವಾದಿ.

चेटिका, चेटिकी, चेटी– स्त्री दासी। ದಾಸಿ, ತೊತ್ತು

चेत–पु. होश, ज्ञान । ಎಚ್ಚರ, ಸ್ಮೃತಿ, ನೆನಪು, ಜ್ಞಾನ, ಪ್ರಜ್ಞೆ.

चेतन– पु जीवधारी, आत्मा, मनुष्य, ईश्वर । ಪ್ರಾಣಿ, ಜೀವಿ, ಆತ್ಮ, ಮನುಷ್ಯ, ದೇವರು.

चेतना– अक्रि होशमें आना । ಎಚ್ಚರ ಹೊಂದು, ತಿಳಿ, ಜ್ಞಾನವಾಗು. स्त्री बुद्धि, होश, स्मृति । ಬುದ್ಧಿ, ಎಚ್ಚರ, ನೆನಪು, ಸ್ಮೃತಿ.

चेतावनी–स्त्री. सावधान होनेकी सूचना। ಎಚ್ಚರಿಕೆ, ಜೋಕೆ.

चेनिका– स्त्री. चेटका । ಚಿತೆ.

चेत– अव्य. अगर । ಒಂದುವೇಳೆ, ರೆ.

चेपना– सक्रि चिपकाना । ಅಂಟಿಸು

चेर, चेरा– पु नौकर, शिष्य । ದಾಸ, ಆಳು, ನೌಕರ, ಶಿಷ್ಯ, ವಿದ್ಯಾರ್ಥಿ.

चेराई– स्त्री सेवा, शिष्यता । ಸೇವೆ, ದಾಸ್ಯ, ಶಿಷ್ಯತ್ವ.

चेरि,चेरी–स्त्री. दासी । ದಾಸಿ, ಸೇವಕಿ.

चेल– पु वस्त्र । ಅರಿವೆ, ವಸ್ತ್ರ, ಬಟ್ಟೆ.

चेला– पु शिष्य । ಶಿಷ್ಯ, ವಿದ್ಯಾರ್ಥಿ.

चेलिन, चेली– स्त्री शिष्या, स्त्रीछात्र । ವಿದ್ಯಾರ್ಥಿನಿ, ಶಿಷ್ಯೆ.

चेष्टा– स्त्री. प्रयत्न, परिश्रम, इच्छा । ಪ್ರಯತ್ನ ,ಪರಿಶ್ರಮ,ಅಂಗಚೇಷ್ಟೆ, ಇಚ್ಛೆ, ಅಭಿಲಾಷೆ.

चेहरा– पु. मुखड़ा । ಮುಖಮುದ್ರೆ, ಮುಖಭಂಗಿ, ಮೋರೆ, ಮೂತಿ.

चैत– पु चैत्र मास । ಚೈತ್ರಮಾಸ.

चैती– स्त्री. चैतमें कटनेवाली एक अन्न, एक प्रकारका गाना । ಚೈತ್ರಮಾಸದಲ್ಲಿ ಕೊಯ್ಯಲ್ಪಡುವ ಬೆಳೆ, ಚೈತ್ರ ಮಾಸದಲ್ಲಿ ಹಾಡುವ ಹಾಡು. वि चैत्रमास संबंधी । ಚೈತ್ರಮಾಸಕ್ಕೆ ಸಂಬಂಧಿಸಿದ.

चैन–पु. आराम, सुख । ಸುಖ,ಆನಂದ, ಶಾಂತಿ, ನೆಮ್ಮದಿ, ಸೌಖ್ಯ.

चैल– पु. वस्त्र । ವಸ್ತ್ರ, ಅರಿವೆ.

चैला– पु. चैली– स्त्री. कुल्हाडी से चीरी हुई लकडी का टुकड़ा । ಕಟ್ಟಿಗೆಯ ಸೀಳಿದ ತುಂಡು, ಸೌದೆ, ಒಡೆದ ಉರುವಲು, ಚಕ್ಕೆ.

चैली– स्त्री छोटा चैला । ಕಟ್ಟಿಗೆಯ ಸೀಳಿದ ಚಿಕ್ಕ ತುಂಡು.

चोक– स्त्री चुंबनका चिह्न । ಮುದ್ದಿಟ್ಟ ಚಿಹ್ನೆ.

चोंगा– पु कागज़ टीन आदि की नली। ನಳಿಗೆ, ಕೊಳವೆ, ಗೊಟ್ಟ, ಗೌಸ ಣಿಗೆ.

चोंघना– सक्रि. दे ' चुगना ' ।

चोंच– स्त्री. चंचु । ಚುಂಚು, ಕೊಕ್ಕು.

चोंडा– पु स्त्रियोंके सिरके बाल, कच्चा छोटा कुआँ, सिर । ಹೆಂಗಸರ ತಲೆಯ ಕೂದಲು, ತುರುಬು, ಕೇಶಪಾಶ, ಚಿಕ್ಕ ಬಾವಿ, ತಲೆ.

चोंथना– सक्रि नोचना, बकोटना । ಕೆರೆ, ಹರಿ, ಕೆದರು, ಕಿತ್ತುಕೊಳ್ಳು.

चोंधर– वि. मूर्ख, छोटी आँखोंवाला । ಮೂರ್ಖ, ದಡ್ಡ, ಸಣ್ಣ ಕಣ್ಣಿನವ, ಕಿರುಗಣ್ಣಿನ.

चोआ– पु चोवा । ಒಂದು ಸುಗಂಧಿತ ದ್ರವ್ಯ.

चोकर– पु. भूसी, आटे इत्यादिका चालन । ಹೊಟ್ಟು, ನುಚ್ಚು, ತವುಡು.

चोख– स्त्री. वेग, फुरती । ವೇಗ, ಚವಲತೆ. वि दे 'चोखा'।

चोखना– सक्रि चूसकर पीना । ಸೀಪು, ಮೊಲೆ ಕುಡಿ, ಹೀರು.

चोखा– वि शुद्ध, उत्तम, सच्चा, श्रेष्ठ पैनीं धारका, चतुर । ಶುದ್ಧ, ಅಪ್ಪಟ, ಉತ್ತಮ, ಒಳ್ಳೆಯ, ನಿಜ, ಶ್ರೇಷ್ಠ, ತೀಕ್ಷ್ಣ, ಹರಿತವಾದ, ಚತುರ. पु भुरता । ಭರತ, ಉಪ್ಪು-ಕಾರ ಹಚ್ಚಿದ ಸುಟ್ಟ ಬದನೇಕಾಯಿ.

चोग़ा–पु. लंबा अंगरखा । ನಿಲುವಂಗಿ.

चोचला– पु नखरा, हावभाव । ಒಯ್ಯಾರ, ಬೆಡಗು, ಮುರುಕು, ಹಾವಭಾವ, ಧಳಕು.

चोज– पु. चमत्कारिक उक्ति, व्यंग्यपूर्ण उपहास । ಚಮತ್ಕಾರಿಕ ಉಕ್ತಿ, ಉಪಹಾಸ, ನಕಲಿ, ಗರ್ಭಿತವಿನೋದ, ಸುಭಾಷಿತ.

चोट– स्त्री. आघात, जख्म, सदमा । ಧಕ್ಕೆ, ಆಘಾತ, ಢಿಕ್ಕಿ, ಗಾಯ, ಪೆಟ್ಟು, ಶೋಕ, ದುಃಖ.

चोटार– वि चोट खाया हुआ, चोट पहुंचानेवाला । ಗಾಯಗೊಂಡವ, ಪೆಟ್ಟು ತಿಂದವ, ಹೊಡೆಯುವವ, ಗಾಯಗೊಳಿಸುವವ.

चोटारना–सक्रि चोट करना । ಹೊಡೆ, ಗಾಯಗೊಳಿಸು.

चोटी– स्त्री शिखर, शिखा, जूड़ा, चुंदी, एक गहना । ಶಿಖರ, ತುದಿ, ಹೆರಳು, ಜಡೆ, ತುರುಬು, ಜುಟ್ಟು, ಜೆಂಡಿಕೆ, ಒಂದು ಆಭರಣ, ಜಡೆಬಿಲ್ಲೆ.

चोट्टा– पु चोर । ಕಳ್ಳ, ತುಡುಗ.

चोदना– स्त्री. विधि, वाक्य, प्रेरणा । ವಿಧಿ, ವಾಕ್ಯ, ಪ್ರೇರಣೆ. सक्रि स्त्री प्रसंग करना । ಸಂಭೋಗ ಮಾಡು, ಮೈಥುನ ಮಾಡು

चोप–पु उमग, रुचि, चाव । ಉತ್ಸಾಹ, ರುಚಿ, ಇಚ್ಛೆ, ಅಭಿರುಚಿ, ಚಟ.

चोपना– सक्रि मुग्ध होना । ಮುಗ್ಧನಾಗು, ಆಸಕ್ತನಾಗು.

चोपी– वि उत्साही, इच्छुक । ಇಚ್ಛೆಯುಳ್ಳವ, ಉತ್ಸಾಹಿ, ಆಸಕ್ತ.

चोब– स्त्री नगाडा बजानेका डंडा, चांदी या सोनेसे मढा डंडा, शामियानेका खंभा । ನಗಾರಿ ಬಾರಿಸುವ ಕೋಲು, ಬಂಗಾರ ಅಥವಾ ಬೆಳ್ಳಿಯ ತಗಡು ಹೊದಿಸಿದ ಕೋಲು, ಡೇರೆಯ ಕಂಬ, ದಂಡ, ರಾಜದಂಡ, ಕಂಬ, ಸ್ತಂಬ

चोबदार– पु द्वारपालक । ದ್ವಾರಪಾಲಕ, ವೇತ್ರಧಾರಿ.

चोर– पु चोरी करनेवाला । ತುಡುಗ, ಕಳ್ಳ.

चोरटी–स्त्री. स्त्री चोर । ಕಳವು ಮಾಡುವವಳು.

चोरदरवाज़ा, चोरद्वार– पु गुप्तद्वार। ಗುಪ್ತದ್ವಾರ, ಕಳ್ಳಕಿಂಡಿ, ದಿಡ್ಡೀ ಬಾಗಿಲು.

चोरमिहीचनी– स्त्री आँखमिचौनी का खेल। ಕಣ್ಣುಮುಚ್ಚಾಲೆಯ ಆಟ.

चोराचोरी– क्रिवि चोरीसे। ಗುಪ್ತ ರೀತಿಯಿಂದ, ಗೊತ್ತಾಗದಂತೆ.

चोराना– सक्रि. दे 'चुराना'।

चोरी– स्त्री चुरानेका काम। ಕಳವು, ಕಳ್ಳತನ, ತುಡುಗು.

चोल– स्त्री. दे. 'चोली'। पु एक प्राचीन देशका नाम, इस देशका निवासी। ಚೋಳದೇಶ, ಚೋಳ ದೇಶದವರು.

चोलना– पु. पु दे. 'चोला'।

चोला– पु. साधुका पहिननेका ढीला लंबा कुरता, शरीर। ಸಾಧುಗಳ ಉದ್ದ ಅಂಗಿ, ಶರೀರ, ಮೈ.

चोली–स्त्री अँगिया, काँचली। ಕುಪ್ಪಸ, ರವಿಕೆ.

—दामन का साथ = न टूटनेवाला संबंध। ಪರಮ ಮೈತ್ರಿ.

चोवा– पु दे 'चोआ'।

चोपना– सक्रि दे 'चोखना'।

चौंक– स्त्री. आश्चर्य, पीड़ा या भयके कारण शरीर का झटकेसे हिल उठना, झिझक। ನಡುಕ, ಅಂಜಿಕೆ, ಗಾಬರಿ, ದಿಗಿಲು, ಬೆಚ್ಚಿಬೀಳುವಿಕೆ.

चौंकना– अक्रि चकित होना, भड़कना, झिझकना। ಗಾಬರಿಯಾಗು, ಚಕಿತನಾಗು, ದಿಗಿಲುಗೊಳ್ಳು, ಬೆಚ್ಚಿ ಬೀಳು, ಬೆದರು, ಬೆಕ್ಕಸ ಬೆರಗಾಗು, ಅಡಬಡಿಸು.

चौंकाना– सक्रि भड़काना, विस्मित करना, सतर्क करना। ಅಂಜಿಸು, ಗಾಬರಿಗೊಳಿಸು, ದಿಗಿಲುಗೊಳಿಸು, ಬೆದರಿಸು, ಆಶ್ಚರ್ಯಗೊಳಿಸು, ಎಚ್ಚರಗೊಳಿಸು.

चौंतरा– पु. दे 'चबूतरा'।

चौंतीस–वि. ३४। ಮೂವತ್ತನಾಲ್ಕು.

चौंध–स्त्री तिलमिलाहट, तेज रोशनी के सामने नजरका न ठहरना। ಕಣ್ಣು ಕುಕ್ಕುವದು, ಮಿರಗುಟ್ಟುವದು.

चौंधियाना– अक्रि. चकाचौंध होना। ಕಣ್ಣು ಕುಕ್ಕು, ಮಿರಗುಟ್ಟು.

चौंधी– स्त्री. दे. 'चौंध'।

चौंर– पु दे 'चँवर'।

चौंरी– स्त्री. वेणी बाधने की डोरी, घोडे के बालोंका गुच्छा, सफेद पूँछ की गाय। ಹೆಳಲು ಕಟ್ಟುವ ದಾರ, ಕುದುರೆಯ ಕೂದಲಿನ ಗೊಂಡೆ, ಚವುರಿ, ಬಿಳಿಯ ಬಾಲದ ಆಕಳು.

चौ– वि. चार। ನಾಲ್ಕು. पु. मोती तौलनेका एक परिमाण। ಮುತ್ತು ತೂಗುವ ಒಂದು ತೂಕ.

चौआ– पु. चौपाया, चार अंगुलकी माप। ಚತುಷ್ಪಾದಗಳು, ಪ್ರಾಣಿಗಳು, ನಾಲ್ಕು ಅಂಗುಲದ ಅಳತೆ

चौआना– अक्रि. चकित होना। ಚಕಿತನಾಗು, ಗಾಬರಿಯಾಗು, ದಿಗಿಲು

ಗೊಳ್ಳು.

चौक–पु. चौकोर जगह, ऑगन, चौराहा, मंगल अवसरपर अवीर, आटे आदिसे वनाया हुआ चौखूंटा चित्र, सामनेके चार दॉत, चौसर खेलनेका कपडा। ಚಚ್ಚೌಕು ಸ್ಥಳ, ಅಂಗಳ, ವೇದಿಕೆ, ಚೌಕ, ನಾಲ್ಕು ಬೀದಿಗಳು ಕೂಡುವ ಸ್ಥಳ, ಪೇಟೆ, ಮಂಗಳ ಸಮಯದಲ್ಲಿ ಕುಂಕುಮ, ರಂಗವಲ್ಲಿಗಳಿಂದ ತೆಗೆದ ಚಚ್ಚೌಕು ಚಿತ್ರ, ಹನೆ, ಮುಂದಿನ ನಾಲ್ಕು ಹಲ್ಲುಗಳು, ಪಗಡಿಪಟ್ಟ, ಪಗಡೆಯಾಟದ ಹಲಿಗೆ.

चौकडी, चौकरी– स्त्री. छलॉग, कुलॉच, चारका समूह, चार घोडोकी गाडी। ನೆಗೆತ, ಜಿಗಿತ, ನಾಲ್ಕು ಕಾಲುಗಳನ್ನು ಎತ್ತಿ ಚಿಗರೆಯಂತೆ ಹಾರುವದು, ನಾಲ್ಕರ ಸಮೂಹ, ನಾಲ್ಕು ಕುದುರೆಯ ಗಾಡಿ, ಸಾರೋಟು.

चौकन्ना– वि सावधान, सतर्क। ಜಾಗೃತ, ಜಾಗರೂಕ.

चौकस– वि. सावधान, ठीक। ಜಾಗರೂಕ, ಭದ್ರ, ಸರಿಯಾದ, ಪೂರ್ಣ.

चौकसाई, चौकसी– स्त्री. सावधानी। ಎಚ್ಚರ, ಜಾಗರೂಕತೆ, ಜೋಕೆ.

चौका–पु सामनेके चार दॉतोंकी पंक्ति. लिपा हुआ स्थान, रसोईघर, आटेकी लकीरोंसे वनाया हुआ चौखूंटा चित्र, चार विंदियोवाला ताशका पत्ता, सीसफूल, रोटी वेलनेका काठ या पत्थरका टुकड़ा, जंगली वकरा। ಮುಂದಿನ ನಾಲ್ಕು ಹಲ್ಲು, ಸಾರಿಸಿದ ಸ್ಥಳ, ಅಡಿಗೆಯ ಮನೆ, ಊಟದ ಮನೆ, ಹಿಟ್ಟು, ರಂಗವಲ್ಲಿ ಮುಂತಾದವುಗಳಿಂದ ಚಿತ್ರಿಸಿದ ಚಚ್ಚೌಕು ಚಿತ್ರ, ಇಸ್ಪೇಟಿನ ನಾಲ್ಕರ ಬಂದು, ತಲೆಯಲ್ಲಿ ತೊಡುವ ಒಂದು ಆಭರಣ, ಲಟ್ಟಣಿ ಮಣೆ, ಕಾಡು ಹೋತ.

चौकी– स्त्री पायदार चौकोर आसन, पहरा, पुलिसका छोटा थाना, रोटी वेलनेका चकला, भेडोंका रातमें किसी खेतमें रखना, जादू, तावीज। ಕೂಡ್ರುವ ಮಣೆ, ಕುರ್ಚಿ, ಚಿಕ್ಕ ಠಾಣೆ, ಲಟ್ಟಣಿ ಮಣೆ, ಹೊಲದಲ್ಲಿ ಕುರಿ ಕೂಡ್ರಿಸುವದು, ಜಾದು, ಇಂದ್ರಜಾಲ, ತಾಯಿತ.

—देना = पहरा देना, वैठने के लिये कुरसी देना। ಪಹರೆ ಮಾಡು, ಎರಡನೆಯವರಿಗೆ ಕೂಡ್ರಲು ಕುರ್ಚಿ ಕೊಡು.

चौकीदार– पु पहरेदार। ಕಾವಲುಗಾರ, ಪಹರೆಯವ, ಚೌಕೀದಾರ.

चौकोन, चौकोना– वि चौखूंटा, चार कोनेवाला। ಚಚ್ಚೌಕು, ನಾಲ್ಕು ಮೂಲೆಗಳುಳ್ಳ, ಚತುಷ್ಕೋಣ.

चौकोर– वि दे. 'चौकोन'।

चौखट– स्त्री द्वारमें लगी चार लकडियोंका ढाचा, देहरी। ಬಾಗಿಲ ಚೌಕಟ್ಟು, ಹೊಸ್ತಿಲು.

चौखटा– पु तस्वीर आदिका ढाँचा। ತಸವೀರು, ಕನ್ನಡಿ ಮುಂತಾದವು ಗಳ ಚೌಕಟ್ಟು

चौखूट– क्रिवि चारों ओर। ನಾಲ್ಕು ಕಡೆಗೆ, ಸುತ್ತಲೂ. पु. चारों दिशा, भूमंडल। ನಾಲ್ಕು ದಿಕ್ಕುಗಳು, ಭೂಮಂಡಲ.

चौखूटा– वि चौकोना। ಚಚ್ಚೌಕಾದ, ಚೌರಸ, ನಾಲ್ಕು ಮೂಲೆಗಳುಳ್ಳ

चौगान– पु. एक तरहका गेंदका खेल। ಒಂದು ತರದ ಚೆಂಡಿನಾಟ, ಪೋಲೋ.

चौगिर्द– क्रिवि. चारों तरफ। ನಾಲ್ಕು ಕಡೆಗೆ, ಸುತ್ತಲೂ.

चौगुन, चौगुना, चौगून– वि चतुर्गुण। ನಾಲ್ಕುಪಟ್ಟು, ನಾಲ್ಮಡಿ

चौगोडिया– स्त्री. एक प्रकार की चार पाँवकी ऊंची चौकी। ಸ್ಟೂಲು, ಕಾಲುಮಣೆ.

चौगोशिया– वि चार कोनेवाला। ನಾಲ್ಕು ಮೂಲೆಗಳುಳ್ಳ, स्त्री एक तरहकी टोपी। ಒಂದು ತರದ ಟೊಪ್ಪಿಗೆ.

चौघट– पु. दाढका वह चौडा दाँत जो चिपटा होता है और जिससे आहारको चबाने और कूचने का काम लिया जाता है। ದವಡೆಯ ಹಲ್ಲು.

चौघडा–पु एक प्रकार का चार खानेका डिब्बा जिसमें मसाला आदि रखा जाता है, पान दान। ನಾಲ್ಕು ಚಿಕ್ಕ ಚಿಕ್ಕ ಭಾಗಗಳುಳ್ಳ ಮಸಾಲೆಯ ಜೀನಸುಗಳನ್ನಿಡುವ ಡಬ್ಬಿ, ನಗಾರಿ, ನೌಬತ್ತು.

चौचंद– पु निंदा, हल्लागुल्ला। ನಿಂದೆ, ಗದ್ದಲ, ಜಗಳ.

चौचंदहाई– स्त्री अपवाद फैलानेवाली। ನಿಂದೆ ಮಾಡುವವಳು, ಸುಳ್ಳುಸುದ್ದಿ ಹಬ್ಬಿಸುವವಳು.

चौडा– वि फैला हुआ। ಅಗಲವಾದ, ವಿಸ್ತಾರವಾದ.

चौडाई, चौडान– स्त्री. लंबाई से भिन्न दिशाका फैलाव। ಅಗಲಳತೆ, ಅಗಲ, ವಿಸ್ತಾರ.

चौतनिया, चौतनी–स्त्री बच्चोंकी टोपी। ಮಕ್ಕಳ ಟೊಪ್ಪಿಗೆ.

चौतरा– पु दे. 'चबूतरा'।

चौथ–स्त्री चतुर्थी तिथि, मराठोंका एक कर, चौथाई भाग। ಚತುರ್ಥಿ. ಚೌತಿ, ಮರಾಠರ 'ಚೌಥಾಯಿ' ಕರ, ನಾಲ್ಕನೆಯ ಭಾಗ. वि. चतुर्थ। ನಾಲ್ಕನೆಯ.

चौथपन, चौथापन– पु. बुढापा। ಮುಪ್ಪು, ವೃದ್ಧಾಪ್ಯ.

चौथा– वि चतुर्थ। ನಾಲ್ಕನೆಯ.

चौथाई– स्त्री. चतुर्थांश। ನಾಲ್ಕನೆಯ ಭಾಗ, ಚತುರ್ಥಾಂಶ.

चौथी– स्त्री. विवाहके बाद चौथे दिन होनेवाली एक रीति। ಮದುವೆ ಯಾದ ನಾಲ್ಕನೆಯ ದಿನದ ಒಂದು ಸಂಸ್ಕಾರ.

चौदस– स्त्री. चतुर्दशी । ಚತುರ್ದಶಿ

चौदह– वि. १४ । ಹದಿನಾಲ್ಕು.

चौधरी– पु. प्रधान, मुखिया । ನಾಯಕ, ಗೌಡ, ಮುಖ್ಯಸ್ಥ.

चौप– पु. दे 'चोप'।

चौपट– वि नष्टभ्रष्ट, विध्वंस, चारो ओरसे खुला हुआ । ಹಾಳಾದ, ವಿಧ್ವಸ್ತ, ಬೈಲಾದ, ತೆರೆದ.

चौपटहा, चौपटा– वि. सर्वनाशी । ಹಾಳು ಮಾಡುವವ, ಸರ್ವನಾಶ ಮಾಡುವವ.

चौपड– स्त्री चौसर । ಪಗಡೆಯ ಆಟ

चौपथ– पु दे 'चौराहा'।

चौपद– पु. दे 'चौपाया'।

चौपहल, चौपहला, चौपहलू– वि चार भुजाओंवाला । ಚೌಕೋನ,ನಾಲ್ಕು ಭುಜಗಳುಳ್ಳ.

चौपाई–स्त्री १६ मात्राओंका एक छंद । ಪ್ರತಿ ಸಾಲಿನಲ್ಲಿ ೧೬ ಮಾತ್ರೆಗಳುಳ್ಳ ಒಂದು ಕವಿತೆ.

चौपाया–पु चार पैरवाला पशु। ನಾಲ್ಕು ಕಾಲಿನ ಪ್ರಾಣಿಗಳು, ಪಶುಗಳು, ದನಕರು.

चौपार, चौपाल– पु बैठक, दालान । ಕೂಡ್ರುವ ಸ್ಥಳ, ಪಡಸಾಲೆ, ಅಂಗಳ

चौफेर– क्रिवि चारो तरफ । ನಾಲ್ಕೂ ಕಡೆಗೆ.

चौबाइन– स्त्री 'चौबे' का स्त्री रूप ।

चौबाई– स्त्री चारो ओर बहनेवाली हवा, उडती खबर । ನಾಲ್ಕೂ ಕಡೆಗೆ ಬೀಸುವ ಗಾಳಿ, ಸುಳ್ಳುಸುದ್ದಿ, ಗಾಳಿ ಸುದ್ದಿ, ಲೋಕವಾರ್ತೆ.

चौबारा– पु घरके ऊपरकी वह कोठरी जिसमें चारो ओर खिडकियाँ लगी हों । ನಾಲ್ಕೂ ಕಡೆಗೆ ಕಿಡಕಿಗಳುಳ್ಳ ಅಟ್ಟದ ಮೇಲಿನ ಕೋಣೆ, ಕೂಡ್ರುವ ಕೋಣೆ. क्रिवि चौथी बार । ನಾಲ್ಕನೆಯ ಸಾರೆ, ನಾಲ್ಕನೆಯ ಬಾರಿ.

चौबे– पु चतुर्वेदी । ಚತುರ್ವೇದಿ, ಬ್ರಾಹ್ಮಣರ ಒಂದು ಜಾತಿ.

चौभड, चौभर– पु दे 'चौघड'।

चौमंजिला, चौमहला– वि. चार खंडवाला मकान । ನಾಲ್ಕು ಅಂತಸ್ತಿನ ಮನೆ

चौमासा– पु वर्षा के चार मास । ಚಾತುರ್ಮಾಸ, ಮಳೆಗಾಲದ ನಾಲ್ಕು ತಿಂಗಳು.

चौमुख– क्रिवि चारो ओर । ನಾಲ್ಕೂ ಕಡೆಗೆ.

चौमुखा, चौमुखी– वि चारो ओर मुखवाला । ನಾಲ್ಕೂ ಕಡೆಗೆ ಮುಖವುಳ್ಳ.

—दिया जलाना= दीवाला निकालना । ದಿವಾಳಿ ತೆಗೆ.

चौमुहानी– स्त्री दे 'चौराहा'।

चौरंग– पु तलवार चलानेका एक ढंग । ಕತ್ತಿಯಿಂದ ಇರಿಯುವ ಒಂದು ರೀತಿ. वि तलवारके आघातसे

खंडित। ಚಕ್ಕಿಯ ಹೊಡೆತದಿಂದ ತುಂಡಾದ.
चौरंगा– वि. चार रंगका। ನಾಲ್ಕು ಬಣ್ಣದ.
चौर– पु. दे. 'चोर'। एक गंध द्रव्य। ಒಂದು ಸುಗಂಧಯುಕ್ತ ಪದಾರ್ಥ.
चौरस– वि. समतल। ಸಮತಲ, ಸರಿಯಾದ, ಸಪಾಟಾದ.
चौरसाना– सक्रि. बराबर करना। ಸರಿ ಮಾಡು, ಸಮತಲ ಮಾಡು.
चौरा– पु चबूतरा, चौपाल। ಕಟ್ಟೆ, ಜಗುಲಿ, ಅಂಗಳ, ಸಮಾಧಿ.
चौरासी– वि. ८४। ಎಂಭತ್ತುನಾಲ್ಕು. पु. एक प्रकार का घुंघरू। ಒಂದು ಪ್ರಕಾರದ ಗೆಜ್ಜೆ.
चौराहा– पु. चौमार्ग। ಚೌಕ, ನಾಲ್ಕು ಬೀದಿಗಳು ಕೂಡುವ ಸ್ಥಳ.
चौरी– स्त्री. छोटा चौरा। ಚಿಕ್ಕ ಕಟ್ಟೆ, ಚಿಕ್ಕ ವೇದಿಕೆ, ಜಗುಲಿ.
चौरेठा–पु. भिगोकर पीसा हुआ चावल। ತೋಯಿಸಿ ಬೀಸಿದ ಅಕ್ಕಿ ಹಿಟ್ಟು.
चौलकर्म– पु. मुंडन। ಮುಂಡನ, ಚೂಡಾಕರ್ಮ.
चौवा– पु चार अंगुलियोंका समूह, चार अंगुलकी माप, चार अंगुलियोंमें लपेटा हुआ तागा, चार बूटियोंवाला पत्ता। ನಾಲ್ಕು ಬೆರಳಿನ ಸಮೂಹ, ನಾಲ್ಕು ಬೆರಳುಗಳ ಅಳತೆ, ನಾಲ್ಕು ಬೆರಳಿಗೆ ಸುತ್ತಿದ ದಾರ, ಇಸ್ಪೀಟಿನ ನಾಲ್ಕರ ಬಂದು.
चौवालीस–वि. ४४। ನಲವತ್ತನಾಲ್ಕು.
चौस– पु. चार बार जोता हुआ खेत। ನಾಲ್ಕುಬಾರಿ ಹರಗಿದ ಹೊಲ.
चौसर–पु. चौपड़का खेल, चार लड़ोंका हार। ಪಗಡೆಯ ಆಟ, ನಾಲ್ಕು ಸರಗಳ ಹಾರ.
चौहट, चौहट्टा– पु. चौक, चौराहा। ಪೇಟೆ, ನಾಲ್ಕು ಬೀದಿಗಳು ಕೂಡುವ ಸ್ಥಳದಲ್ಲಿಯ ಪೇಟೆ.
चौहरा– वि चार तह या परतका, चौगुना। ನಾಲ್ಕು ಮಡಿಕೆಯ, ನಾಲ್ಕುಪಟ್ಟು. पु. दे. 'चौघरा'।
चौहैं– क्रिवि. चारों तरफ। ನಾಲ್ಕು ಕಡೆಗೆ, ಸುತ್ತಲೂ.
च्युत– वि. भ्रष्ट, विमुख। ಬಿದ್ದ, ಪತಿತ, ಭ್ರಷ್ಟ, ವಿಮುಖ.
च्युति– स्त्री. पतन, स्खलन। ಪತನ, ಭ್ರಷ್ಟತೆ, ಸ್ಖಲನ, ಸೋರುವದು.

# छ

छंग– पु. गोद। ತೊಡೆ, ಮಡಿಲು, ಅಂಕ.

छंगा– वि छ. अंगुलियोवाला। ಆರು ಬೆರಳುಗಳುಳ್ಳ.

छँगुनिया, छंगुनी– स्त्री. सबसे छोटी अँगुली। ಚಿಕ್ಕ ಬೆರಳು.

छंछोरी– स्त्री एक पकवान। ಮೊಸರು ವಡೆ.

छँटना– अक्रि. अलग होना, छितराना, चुना जाना, दुर्बल होना, मैल निकलना। ಕತ್ತರಿಸಿಹೋಗು, ಅಗಲು, ಚದರಿಹೋಗು, ಆರಿಸಲ್ಪಡು, ದುರ್ಬಲವಾಗು, ಶುದ್ಧವಾಗು, ಸ್ವಚ್ಛವಾಗು.

छँटा हुआ = धूर्त, चतुर। ಧೂರ್ತ, ಚತುರ.

छँटवाना– सक्रि. कटवाना, चुनवाना, छिलवाना। ಎರಡನೆಯವರಿಂದ ಕತ್ತರಿಸುವ ಕೆಲಸ ಮಾಡಿಸು,ಆರಿಸಿ ತೆಗೆಯಿಸು, ಸುಲಿಯಿಸು.

छँटा– वि. जिसके पिछले पैर रस्सीसे बांधे गये हो। ಹಿಂದಿನ ಕಾಲುಗಳನ್ನು ಹಗ್ಗದಿಂದ ಕಟ್ಟಿದ.

छँटाई– स्त्री छाँटनेकी क्रिया या उसकी मजदूरी। ಆರಿಸುವಿಕೆ, ಕತ್ತರಿಸುವಿಕೆ, ಕೊಯ್ಯುವಿಕೆ, ಸ್ವಚ್ಛಮಾಡುವಿಕೆ, ಆರಿಸುವ ಅಥವಾ ಕತ್ತರಿಸುವ ಕೂಲಿ.

छँटाना– सक्रि दे 'छँटवाना'।

छँड़ना– सक्रि त्यागना, छोडना, छाँटना, कै करना। ತ್ಯಾಗಮಾಡು, ಬಿಡು, ಸ್ವಚ್ಛಮಾಡು, ತೂರಿ ಸ್ವಚ್ಛಮಾಡು, ವಾಂತಿಮಾಡು.

छंड़ाना– सक्रि. छीनना, छुडाना। ಕಸಿದುಕೊಳ್ಳು,ಕಿತ್ತುಕೊಳ್ಳು, ಬಿಡಿಸಿಕೊಳ್ಳು.

छंद– पु युक्ति, चाल, स्वेच्छाचार, इच्छा, अभिप्राय, समूह, बंधन, वर्ण मात्रादिकी गणना के अनुसार रचित वाक्य, पद्य, कपट। ಯುಕ್ತಿ, ರೀತಿ, ಪದ್ಧತಿ, ಇಚ್ಛೆ, ಅಭಿಪ್ರಾಯ, ಒಲವು, ಸಮೂಹ, ಗುಂಪು, ಬಂಧನ, ಗಂಟು, ಪ್ರಾಸ, ಛಂದಸ್ಸು, ಪದ್ಯ, ವೃತ್ತ, ಕಪಟ, ಮೋಸ.

छंदना– अक्रि पैरोका रस्सीसे बंधा-जाना। ಹಗ್ಗದಿಂದ ಕಾಲುಗಳು ಕಟ್ಟಲ್ಪಡು.

छंदबंद– पु धोखा, कपट। ಮೋಸ, ಕಪಟ.

छदोबद्ध– वि जिसकी रचना पद्यमे की गयी हो। ಛಂದಸ್ಸಿನ ನಿಯಮಾನುಸಾರವಾಗಿ ಬರೆದ

छः– वि. ६। ಆರು.

छकडा– पु. बैलगाडी। ಚಕ್ಕಡಿ,ಎತ್ತಿನ ಗಾಡಿ.

छकडिया– स्त्री. छ. कहारोंकी पालकी।

ಆರು ಬೋಯಿಗಳು ಹೊರುವ ಪಲ್ಲಕ್ಕಿ (ಮೇಣೆ).

**छकडी**– स्त्री. दे 'छकड़िया'। छ.का समूह । ಆರರ ಸಮೂಹ

**छकना**– अक्रि. अघाना, तृप्त होना, उन्मत्त होना, हैरान होना, चक्कर खाना । ತೃಪ್ತಿಹೊಂದು, ಆಶ್ಚರ್ಯವಾಗು, ಗಾಬರಿಯಾಗು, ಕಷ್ಟ ಹೊಂದು, ಮೋಸಹೋಗು.

**छकाना**– सक्रि. खिला-पिलाकर तृप्त करना, उन्मत्त करना, चक्करमें डालना, कष्ट देना । ಊಟ ಮಾಡಿಸಿ ತೃಪ್ತಿಪಡಿಸು, ಸೆರೆ ಕುಡಿಸಿ ಅಮಲೇರಿಸು, ಗಾಬರಿ ಪಡಿಸು, ಆಶ್ಚರ್ಯಗೊಳಿಸು, ಕಷ್ಟಕೊಡು, ತ್ರಾಸ ಕೊಡು, ಗೋಳಾಡಿಸು.

**छक्का**– पु छः का समूह, छः विंदियो-वाला पत्ता, जुएका एक दॉव,सुधवुध। ಆರರ ಸಮೂಹ, ಇಸ್ಪೀಟಿನ ಆರರ ಬಂದು, ಪಗಡೆಯಾಟದಲ್ಲಿ ಆರರ ಎಣಿಕೆ, ದ್ಯೂತ, ಪ್ರಜ್ಞೆ, ಜ್ಞಾನ.

**—छूटना** = सुधवुध खोना, साहस छूटना। ಪ್ರಜ್ಞೆ ತಪ್ಪು, ಗಾಬರಿಯಾಗು, ಸಾಹಸಗುಂದು.

**—पंजा** = दॉवपेंच । ಕಪಟ, ಮೋಸ, ಸಂಚು.

**छग, छगल**– पु. वकरा । ಹೋತ.

**छगन**– वि छोटा वालक, छोटे वच्चेके लिये प्रेमका शब्द । ಚಿಕ್ಕ ಮಗು, ಪ್ರೇಮದ ಮಗು, ಮಕ್ಕಳ ಸಲುವಾಗಿ ಪ್ರೇಮದ ಶಬ್ದ, ಕಂದ.

**छगुनी**– स्त्री. दे. 'छँगुनिया'।

**छछिआ, छछिया**– स्त्री मट्ठा, छाछ, छाछ पीनेका छोटा वर्तन। ಮಜ್ಜಿಗೆ, ಮಜ್ಜಿಗೆ ಕುಡಿಯುವ ಚಿಕ್ಕ ಪಾತ್ರೆ.

**छछूंदर**– पु. चूहेकी तरहका एक जंतु। ಸೊಂಡಿಲಿ.

**छजना**– अक्रि शोभा देना, अच्छा लगना, उचित जान पडना, ठीक जॅचना । ಶೋಭಿಸು, ಒಪ್ಪು, ಯೋಗ್ಯವೆನಿಸು, ಸರಿಯಾಗು.

**छज्जा**– पु. दीवारके आगे निकली हुई छत। ಸೂರು, ಮುಂದಕ್ಕೆ ಚಾಚಿರುವ ಮೇಲ್ಚಾವಣಿ, ಗ್ಯಾಲರಿ.

**छटकना**– अक्रि दूर होना, उछलना। ದೂರವಾಗು, ಬಿಡು, ಜಾರಿಕೊಳ್ಳು, ಹಾರು, ಜಿಗಿ, ಪುಟಿ, ನೆಗೆ.

**छटकाना**– सक्रि छटक जाने देना, छुडाना, वलपूर्वक खीच लेना। ಜಾರಗೊಡು, ಪಾರಾಗಗೊಡು, ಹಾರಿಸು, ಕೊಡವು, ಬಿಡಿಸು, ಕಸಿದುಕೊಳ್ಳು, ಕಿತ್ತುಕೊಳ್ಳು.

**छटपटाना**–अक्रि व्याकुल होना,तड़पना। ತಳಮಳಿಸು, ಒದ್ದಾಡು, ಅಂಜು, ಚಡಪಡಿಸು.

**छटपटी**– स्त्री व्याकुलता, घवराहट। ಗಾಬರಿ, ಅಂಜಿಕೆ, ಆತುರತೆ.

**छटांक**– स्त्री. पावका चतुर्थ भाग। ಕಾಲುಪಾವು.

**छटा**– स्त्री. शोभा, प्रकाश, विजली,

लडी । ಶೋಭೆ, ಸೌಂದರ್ಯ, ಪ್ರಕಾಶ, ಹೊಳಪು, ಸೊಬಗು, ಮಾಲೆ, ಹಾರ.

**छटैल**– वि. छँटा हुआ, धूर्त । ಧೂರ್ತ, ಚತುರ.

**छठ**– स्त्री छठी तिथि । ಷಷ್ಠಿ

**छठा**–वि पाँचवेंके बादका । ಆರನೆಯ.

**छठी**– स्त्री जन्मसे छठे दिनका पूजन । ಮಗು ಹುಟ್ಟಿದ ಆರನೆಯ ದಿನದ ಸಂಸ್ಕಾರ.

**—का दूध याद आना** = बडी हैरानीमें पडना । ಪೇಚಾಟವಾಗು, ಕಂಗೆಡು

**छड**– स्त्री सीधा पतला डंडा । ಬೆತ್ತ, ಕೋಲು, ಸಲಾಕಿ.

**छड़ा**– पु पैरका एक गहना । ಕಾಲೊಳಗೆ ತೊಡುವ ಒಂದು ಆಭರಣ. वि. अकेला । ಒಂಟಿಗ.

**छडी**– स्त्री हाथमें लेनेकी पतली लकडी। ಬೆತ್ತ, ಕೋಲು, ಛಡಿ.

**छत**– स्त्री पाटन । ಅಟ್ಟ, ಮಾಳಿಗೆ, ಛತ್ತು पु. घाव । ಗಾಯ क्रिवि रहते हुए। ಇದ್ದಾಗ, ಜೀವಿಸಿದ್ದಾಗ.

**छतगीर, छतगीरी**– स्त्री. चँदोवा, छतसे सटाकर टँगा हुआ कपड़ा । ಮೇಲ್ಕಟ್ಟು, ಒಳ ಮಾಳಿಗೆಗೆ ಹೊಂದಿ ಕಟ್ಟಿದ ಬಟ್ಟೆ, ಉಲ್ಲಡೆ.

**छतना**– पु पत्तों का बना हुआ छाता। ಎಲೆಗಳಿಂದಾದ ಕೊಡೆ, ಛತ್ರಿ.

**छतरी**– स्त्री. छाता, मंडप, समाधिके ऊपर बना हुआ मंडप । ಛತ್ರಿ, ಕೊಡೆ, ಮಂಟಪ, ಹಂದರ, ಸಮಾಧಿಯ ಮೇಲಿನ ಮಂಟಪ.

**छतिया**– स्त्री दे. 'छाती'।

**छतियाना**–सकि छातीके पास ले जाना, बंदूक तानना । ಆಲಿಂಗಿಸು, ಬಂದೂಕಿನ ಹಿಡಿಕೆಯನ್ನು ಎದೆಯ ಹತ್ತಿರ ತರು.

**छतीसा**–वि चतुर, चालबाज। ಚತುರ, ಮೋಸಗಾರ.

**छत्ता**–पु छतरी, मधुमक्खियोंके रहनेका मोमका घर, कमलका बीजकोप, पटाव जिसके नीचेसे मनुष्य का चलनेका मार्ग हो । ಕೊಡೆ, ಛತ್ತರಿಗೆ, ಜೇನುಗೂಡು, ಮಂಟಪ, ಕಮಲದ ಬೀಜಕೋಶ, ಕಾಲುದಾರಿಯ ಮೇಲಿನ ಚಪ್ಪರ.

**छत्तीस**– वि ३६ । ಮೂವತ್ತಾರು.

**छत्तीसा**– वि दे 'छतीसा' पु नाई । ನಾವಲಿಗ.

**छत्तीसी**– स्त्री कुलटा । ಕುಲಟೆ, ಸ್ವೈಭಿಚಾರಿಣಿ, ಹಾದರಗಿತ್ತಿ.

**छत्र**– पु छतरी, राजाओंका छाता, कुकुरमुत्ता । ಕೊಡೆ, ಛತ್ರ, ರಾಜಛತ್ರ, ನಾಯಿಕೊಡೆ.

**छत्रक**– पु कुकुरमुत्ता, शहद का छत्ता, मंदिर । ನಾಯಿಕೊಡೆ, ಜೇನುಗೂಡು, ಮಂದಿರ, ದೇವಸ್ಥಾನ.

**छत्रबंधु**– पु निम्न श्रेणीका क्षत्रिय । ಕೀಳುದರ್ಜೆಯ ಕ್ಷತ್ರಿಯ.

**छत्री**– पु क्षत्रिय । ಕ್ಷತ್ರಿಯ. वि

छत्रयुक्त । ಛತ್ರಯುಕ್ತ.

**छद्**– पु आवरण, छाल, पख, पत्ता । ಆವರಣ, ಮುಚ್ಚಳ, ಹೊದಿಕೆ, ತೊಗಟೆ, ರೆಕ್ಕೆ, ಎಲೆ.

**छदाम**– पु पैसेका चतुर्थांश । ದುಡ್ಡಿನ ನಾಲ್ಕನೇ ಭಾಗ.

**छद्म**– पु. छल, वहाना, छिपाव । ಕಪಟ, ಮೋಸ, ನೆವ, ನೋಗು, ಮರೆ, ತಂತ್ರ.

**छद्मवेश**– पु. वनावटी वेश । ನೋಗು, ಕಪಟ ವೇಷ.

**छन**– पु क्षण, समय, अवसर, उत्सव, आनंद । ಕ್ಷಣ, ಸಮಯ, ಸಂಧಿ, ಉತ್ಸವ, ಆನಂದ.

**छनक**–पु क्षण, थोड़ी देर । ಕ್ಷಣ,ಸ್ವಲ್ಪ ಹೊತ್ತು. स्त्री. झनकार, जलती हुई वस्तुपर पानी पड़नेसे उत्पन्न शब्द, फुर्ती, भडक । 'ಝುನಝುನ' ಶಬ್ದ, ಝೋಂಕಾರ, ಸುಡುತ್ತಿರುವ ವಸ್ತುವಿನ ಮೇಲೆ ನೀರು ಬಿದ್ದಾಗ ಆಗುವ ಸಪ್ಪಳ, ತ್ವರೆ, ಅವಸರ, ಸಂಕೋಚ, ಅಂಜಿಕೆ, ಹೆದರಿಕೆ.

**छनकना**– अक्रि पानी आदिका उड़ जाना, झनकार करना, भडकना । ಉರಿಯುವ ವಸ್ತುವಿನ ಮೇಲೆ ನೀರು ಬಿದ್ದು ಸುಟ್ಟು ಹಾರಿಹೋಗುವದು, 'ಛನಛನ' ಶಬ್ದ ಮಾಡು, ಬೆದರು, ಬೆದರಿ ಓಡಿಹೋಗು.

**छनकाना**–सक्रि पानी आदिको जलाकर उड़ा देना, भडकाना, छन छन शब्द करना । ಸುಡುತ್ತಿರುವ ಪದಾರ್ಥದಮೇಲೆ ನೀರುಹಾಕಿ ಸುಡಿಸು, ಎಚ್ಚರಿಸು, ಬೆದರಿಸು, ಹೆದರಿಸಿ ಓಡಿಸು,'ಛನಛನ' ಸಪ್ಪಳ ಮಾಡು

**छनछनाना**– अक्रि 'छन छन' शब्द होना, झनकार करना । 'ಛನಛನ' ಶಬ್ದವಾಗು, ಝುನತ್ಕಾರವಾಗು.

**छनछवि**– स्त्री बिजली । ಮಿಂಚು.

**छनदा**– स्त्री रात । ರಾತ್ರಿ.

**छनना**– अक्रि. छोटे छोटे छिद्रोंसे होकर निकलना, साफ हो जाना, छिद जाना, छान-बीन होना, निर्णय होना, मादक पदार्थका पिया जाना, घीमें पकना । ಶೋಧಿಸಲ್ಪಡು,ಸೋಸಲ್ಪಡು, ಸ್ವಚ್ಛವಾಗು, ತೂತು ಬೀಳು, ಅಲ್ಲಲ್ಲಿ ಗಾಯವಾಗು, ವಿಚಾರಣೆಯಾಗು, ಶೋಧನೆಯಾಗು, ನಿರ್ಣಯವಾಗು, ಮಾದಕ ಪದಾರ್ಥ ಸೇವಿಸು, ಕರೆಯಲ್ಪಡು. पु. छाननेका महीन वस्त्र । ಸೋಸುವ ತೆಳುವಾದ ವಸ್ತ್ರ.

**छनवाना, छनाना**– सक्रि. किसी दूसरेसे छाननेका काम कराना, मादक द्रव्य पिलाना । ಶೋಧಿಸುವ ಅಥವಾ ಸೋಸುವ ಕೆಲಸವನ್ನು ಎರಡನೆಯವರಿಂದ ಮಾಡಿಸು, ಮಾದಕ ಪೇಯವನ್ನು ಕುಡಿಸು.

**छनिक**– वि क्षणिक । ಕ್ಷಣಿಕ, ಅನಿತ್ಯ. पु क्षण । ಕ್ಷಣ

**छन्न**–पु तपी हुई चीजपर पानी पड़नेका

ಶಬ್ದ। ಕಾಯ್ದ ವಸ್ತುವಿನ ಮೇಲೆ ನೀರು ಬೀಳುವದರಿಂದ ಆಗುವ ಸಪ್ಪಳ. वि ढका हुआ, लुप्त। ಆವೃತ್ತ, ಮುಚ್ಚಿದ, ಲುಪ್ತ.

**छप**–स्त्री पानीमें किसी वस्तुके गिरनेका शब्द। ಯಾವದೊಂದು ವಸ್ತುವು ನೀರಿನಲ್ಲಿ ಬೀಳುವದರಿಂದಾಗುವ ಸಪ್ಪಳ.

**छपछपाना**– अक्रि. पानी में छपछप शब्द करना। ನೀರಿನಲ್ಲಿ 'ಛಪ್ ಛಪ್' ಸಪ್ಪಳ ಮಾಡು, ನೀರಿನಲ್ಲಿ ಕೈಕಾಲು ಬಡಿ.

**छपटाना**– सक्रि चिपकाना, आलिंगन करना। ಅಂಟಿಸು, ಆಲಿಂಗಿಸು

**छपद**– पु भ्रमर, षट्पद। ಭ್ರಮರ, ಷಟ್ಪದ, ತುಂಬಿ

**छपन**– पु संहार, नाश। ಸಂಹಾರ, ನಾಶ वि. गुप्त। ಗುಪ್ತವಾದ, ಅಡಗಿದ.

**छपना**– अक्रि छापा जाना, अंकित होना, शीतला का टीका लगना। ಅಚ್ಚಾಗು, ಮುದ್ರಿತವಾಗು, ಮೈಲಿ ತೆಗೆಯಲ್ಪಡು.

**छपरखट, छपरखाट**– स्त्री मसहरीवाला पलंग। ಸೊಳ್ಳೆ ಪರದೆ (ಮಚ್ಛರ ದಾಣಿ)ಯುಳ್ಳ ಮಂಚ(ಪಲಂಗ).

**छपरी**– स्त्री झोपडी। ಗುಡಿಸಲು, ಚಪ್ಪರ.

**छपवाना**– सक्रि दे 'छपाना'।

**छपा**– स्त्री रात। ರಾತ್ರಿ.

**छपाई**–स्त्री. छापनेका काम या मजदूरी। ಮುದ್ರಣ ಕೆಲಸ ಅಥವಾ ಅದರ ಕೂಲಿ.

**छपाना**– सक्रि छापनेका काम कराना, शीतलाका टीका लगवाना। ಅಚ್ಚು ಹಾಕಿಸು, ಮೈಲಿ ತೆಗೆಯಿಸು.

**छप्पन**– वि ५६। ಐವತ್ತಾರು

**छप्पय**– पु षट्पदी। ಒಂದು ವೃತ್ತ, ಷಟ್ಪದಿ.

**छप्पर**– पु. छाजन, आच्छादन, पोखरी। ಚಪ್ಪರ, ಹಂದರ, ಹೊಂಡ.

**—फाडकर देना** = अनायस देना। ಅನಾಯಾಸವಾಗಿ ಕೊಡು

**—पर रखना** = अलग करना, छोड देना। ಬಿಡು, ತ್ಯಜಿಸು, ಚರ್ಚೆ ಮಾಡದಿರು.

**छब**– स्त्री दे 'छवि'।

**छबडा, छबरा**-पु झाबा, टोकरा। ಮಕ್ಕರಿ, ಹೆಡಿಗೆ, ಹರವಾದ ಬುಟ್ಟಿ.

**छबि**– स्त्री शोभा, सुदरता। ಶೋಭೆ, ಕಾಂತಿ, ಸೌಂದರ್ಯ.

**छबीला**– वि सुंदर। ಸುಂದರ, ಶೋಭೆಯುಳ್ಳ, ಸೊಬಗಿನ.

**छब्बीस**– वि. २६। ಇಪ್ಪತ್ತಾರು.

**छम**–स्त्री पानी वरसने या घुंघरू आदि बजनेका शब्द। ಮಳೆ ಬೀಳುವ ಅಥವಾ ಗೆಜ್ಜೆಯ ಶಬ್ದ. वि समर्थ। ಯೋಗ್ಯ, ಸಮರ್ಥ. पु. शक्ति, बल। ಶಕ್ತಿ, ಸಾಮರ್ಥ್ಯ, ಬಲ

**छमकना**– अक्रि छम छम करना,

ठुमकना। ಗೆಜ್ಜೆಯು ಸಪ್ಪಳವಮಾಡು, ಗೆಜ್ಜೆ ಕಟ್ಟಿಕೊಂಡು ಕುಣಿ.

**छमछम**– स्त्री दे. 'छम स्त्री'। क्रिवि छम छम करते हुए । ಗೆಜ್ಜೆಯು ಸಪ್ಪಳ ಮಾಡುತ್ತ.

**छमना**– सक्रि. माफ करना। ಕ್ಷಮಿಸು.

**छमा**– स्त्री. क्षमा। ಕ್ಷಮೆ.

**छमुख**– पु षडानन। ಷಡಾನನ.

**छय**– पु. क्षय, विनाश। ಕ್ಷಯ, ನಾಶ

**छर**– पु. दे 'छल'।

**छरछंद**– पु. चालबाजी । ಮೋಸ, ತಂತ್ರ, ಕಪಟ

**छरछराना**– सक्रि छर छर शब्द करके गिरना। ಸರಸರ ಸಪ್ಪಳ ಮಾಡುತ್ತ ಬೀಳು. अक्रि चुनचुनाना। ನೋವಾಗು,ನವೆಯಾಗು, ಉರಿಯಾಗು.

**छरना**– अक्रि टपकाना, चूना। ಹನಿ ಹನಿಯಾಗಿ ಬೀಳು, ಸೋರು, ಒಸರು, ಪ್ರವಹಿಸು. सक्रि दे 'छलना'।

**छरभार**– पु कामका भार, झंझट। ಕೆಲಸದ ಜವಾಬ್ದಾರಿ, ಹೊಣೆ, ಜಂಜಾಟ.

**छरहरा**– वि हलका, पतला, फुरतीला। ಹಗುರು ದೇಹದ, ತೆಳುವಾದ, ಚಪಲ, ಚುರುಕಾದ.

**छरा**– पु. छडा, रस्सी, इजारबंद,लड़ी। ಕಾಲಲ್ಲಿತೊಡುವ ಒಂದು ಆಭರಣ, ಹಗ್ಗ, ದಾರ, ಜೋಣ್ಣ ಕಟ್ಟುವ ದಾರ, ಸಾಲೆ, ಮಾಲೆ ಹೆಣೆಯುವ ದಾರ.

**छरी**–स्त्री दे 'छड़ी'। वि दे. 'छली'।

**छरीदार**–पु. पहरेदार। ಕಾವಲುಗಾರ, ರಕ್ಷಕ.

**छर्दन**–पु छर्दि-स्त्री,वमन, के। ವಾಂತಿ, ವಾಕರಿಕೆ

**छर्रा**– पु लोहे या सीसे के छोटे टुकडे। ಕಬ್ಬಿಣ ಅಥವಾ ಸೀಸದ ಚಿಕ್ಕ ತುಂಡುಗಳು.

**छल**–पु. कपट, धोखा। ಕಪಟ, ಮೋಸ, ಸೋಗು.

**छलक, छलकन**– स्त्री. छलकनेकी क्रिया, या भाव। ಹೊರಚಲ್ಲುವದು,ತುಳುಕುವದು, ಹೊರಸೂಸುವದು.

**छलकना**– अक्रि किसी द्रव पदार्थका बरतनसे उछलकर बाहर गिरना। ತುಂಬಿತುಳುಕು, ಹೊರಚಲ್ಲು

**छलकाना**–सक्रि. द्रव पदार्थको हिलाकर बाहर गिराना। ತುಳುಕಿಸು,ಹೊರಚಲ್ಲಿಸು.

**छलछंद**– पु दे 'छलछंद'।

**छलछलाना**– अक्रि भर आना, पानी छोडना । ತುಂಬಿಬರು, ನೀರು ಸೂಸು, ನೀರು ಬಿಡು.

**छलछिद्र**– पु चालबाजी। ಮೋಸ, ಕಪಟ, ತಂತ್ರ, ಸಂಚು.

**छलना**– सक्रि. धोखा देना। ಮೋಸ ಮಾಡು. स्त्री धोखा, कपट। ಮೋಸ, ಕಪಟ, ವಂಚನೆ.

**छलनी**–स्त्री. चलनी। ಜಲ್ಲಡೆ,ಸಾಣಿಗೆ,

छलबल– पु. कपट, धोखा। ಕಪಟ, ಮೋಸ, ತಂತ್ರ.

छलहाई– वि. कपटी, छली। ಮೋಸಗಾರ, ಠಕ್ಕ, ಧೂರ್ತ.

छलाँग– स्त्री उछाल, चौकड़ी। ಜಿಗಿತ, ನೆಗೆತ, ಹಾರಾಟ, ನೆಗೆದಾಟ.

छला– पु. अँगूठी, झलक, दीप्ति। ಉಂಗುರ, ಕಾಂತಿ, ಶೋಭೆ

छलाना–सक्रि धोखा दिलाना। ಮೋಸ ಮಾಡಿಸು.

छलिया, छली, छलीक–वि. धोखेबाज, कपटी। ಮೋಸಗಾರ, ತಂತ್ರಗಾರ, ಧೂರ್ತ, ಠಕ್ಕ.

छल्ला– पु. अँगूठी, कड़ा, वलय। ಉಂಗುರ, ಬಳೆ, ವಲಯ.

छल्लेदार– वि घेरेदार। ಮಂಡಲಾಕಾರ, ವಲಯಾಕಾರ

छवा– पु. पशुका बच्चा, ऍड़ी। ಕರು, ಪಶುವಿನ ಮರಿ, ಹಿಮ್ಮಡ.

छवाई– स्त्री छानेका काम या उसकी मजदूरी। ಹುಲ್ಲು ಹೊದಿಸುವ ಕೆಲಸ, ಹರವುವಿಕೆ, ಹಾಸುವಿಕೆ, ಹುಲ್ಲು ಹೊದಿಸುವದರ ಕೂಲಿ.

छवाना– सक्रि. छानेका कार्य कराना। ಹುಲ್ಲು ಹೊದಿಸುವ ಕೆಲಸ ಮಾಡಿಸು.

छवि– स्त्री. शोभा, काति, सौंदर्य, प्रतिकृति। ಶೋಭೆ, ಕಾಂತಿ, ಸೌಂದರ್ಯ, ಪ್ರತಿಕೃತಿ, ಚಿತ್ರ.

छवैया– पु. छप्पर छानेवाला। ಹುಲ್ಲು ಹೊದಿಸುವ ಕೆಲಸ ಮಾಡುವವ.

छहरना– अक्रि बिखरना। ಪಸರಿಸು, ಅತ್ತಿತ್ತ ಬೀಳು.

छहराना–अक्रि. दे. ‘छहरना’। सक्रि फैलाना, छितराना। ಚೆಲ್ಲು, ಪಸರಿಸು, ಬಿಸಾಡು, ಹರಡು.

छहियाँ, छाँ– स्त्री छाया। ನೆರಳು, ಛಾಯೆ.

छाँगना– सक्रि. (पेडकी डाल) छाँटना। ಸವರು, ರೆಂಬೆ ಕತ್ತರಿಸು.

छाँगुर– वि छंगा। ಆರು ಬೆರಳಿನವ.

छाँछ– स्त्री मट्ठा। ಮಜ್ಜಿಗೆ.

छाँट–स्त्री कै, निरुपयोगी वस्तु, कतरन, भूसी, काटनेकी क्रिया। ವಮನ, ವಾಂತಿ, ನಿರುಪಯೋಗಿ ವಸ್ತು, ಕತ್ತರಿಸಿ ಒಗೆದ ಚೂರು, ಹೊಟ್ಟು, ಕತ್ತರಿಸುವ ಕೆಲಸ.

छाँटना– सक्रि. चुनना, अलग करना, काटना, साफ करना। ಆರಿಸು, ಕತ್ತರಿಸು, ಸ್ವಚ್ಛಮಾಡು, ಕಾಳು ಕುಟ್ಟಿ ಸ್ವಚ್ಛಮಾಡು.

छाँडना– सक्रि छोड़ना। ತ್ಯಜಿಸು, ಬಿಡು.

छाँद– स्त्री चौपायो के पैर बाँधने की रस्सी। ದನಗಳ ಕಾಲು ಕಟ್ಟುವ ಹಗ್ಗ.

छाँदना–सक्रि कसना बाधना। ಕಟ್ಟು, ಬಿಗಿ, ದನಗಳ ಕಾಲು ಕಟ್ಟು, ಬಂಧಿಸು.

छाँवड़ा– पु पशुका छोटा बच्चा, छोटा

बालक। ಪಶುಗಳ ಚಿಕ್ಕ ಮರಿ, ಚಿಕ್ಕ ಬಾಲಕ.

छांव, छॉह, छॉही– स्त्री. छाया, प्रतिबिंब, शरण, भूतप्रेतका प्रभाव। ನೆರಳು, ಛಾಯೆ, ಪ್ರತಿಬಿಂಬ, ಆಶ್ರಯ, ಭೂತ-ಪ್ರೇತಗಳ ಬಾಧೆ.

—न छूने देना = पास न आने देना। ಹತ್ತಿರ ಬರಗೊಡದಿರು.

—न छू पाना = पास न आना। ಹತ್ತಿರ ಬರದಿರು, ಸಿಗದಿರು.

छांहगीर– पु आईना, छत्र। ಕನ್ನಡಿ, ರಾಜ ಛತ್ರ.

छाक– स्त्री. काम करनेवालोंका दोपहर का भोजन, कलेवा, नशा, तृप्ति। ಕೂಲಿಕಾರರ ಮಧ್ಯಾಹ್ನದ ಊಟ, ಫಲಾಹಾರ, ಉಪಹಾರ, ಅಮಲು, ಮದ, ತೃಪ್ತಿ.

छाकना– अक्रि अघाना, मतवाला, होना, चकित होना। ತೃಪ್ತಿಹೊಂದು, ಅಮಲೇರು, ಮತ್ತನಾಗು, ಗಾಬರಿ ಯಾಗು, ಬೆರಗಾಗು.

छाग– पु बकरा। ಹೋತ.

छाछ, छाछि– स्त्री दे 'छाछ'।

छाज– पु सूप, छप्पर। ಮರ, ತೂರು ವ ಬುಟ್ಟಿ, ಚಪ್ಪರ, ಹಂದರ, ಹುಲ್ಲು ಮಾಳಿಗೆ.

छाजन– पु. आच्छादन, वस्त्र। ಆಚ್ಛಾದನ, ವಸ್ತ್ರ. स्त्री छप्पर। ಚಪ್ಪರ, ಹಂದರ, ಛಾವಣಿ.

छाजना– अक्रि शोभा देना। ಶೋಭಿಸು, ಎದ್ದುಕಾಣು, ಒಪ್ಪು.

छाता– पु छतरी, छत्ता, छातीकी चौड़ाई। ಛತ್ರಿಗೆ, ಕೊಡೆ, ಎದೆಯ ಸುತ್ತಳತೆ.

छाती– स्त्री. सीना, वक्षःस्थल, हृदय, मन, स्तन, साहस। ಎದೆ, ವಕ್ಷಃಸ್ಥಳ, ಹೃದಯ, ಮನಸ್ಸು, ಸ್ತನ, ಮೊಲೆ, ಸಾಹಸ, ಧೈರ್ಯ.

—पर पत्थर रखना = किसी भारी शोक के आघात को सहन करना। ಅಸಹನೀಯ ದುಃಖವನ್ನು ಸಹಿಸು.

—पर मूँग या कोदों दलना=किसी को दिखाकर ऐसा काम करना जिससे उसको बड़ा कष्ट हो। ಒಬ್ಬರ ಸಮ್ಮುಖದಲ್ಲಿಯೇ ಅವರಿಗೆ ತ್ರಾಸ ಕೊಡು.

—पर साँप लोटना = ईर्ष्या होना, मानसिक व्यथा होना। ಅಸೂಯೆ ಅಥವಾ ದ್ವೇಷ ಮಾಡು, ಮಾನಸಿಕ ದುಃಖವಾಗು.

छात्र– पु विद्यार्थी। ವಿದ್ಯಾರ್ಥಿ.

छात्रवृत्ति– स्त्री किसी छात्रको विद्याध्ययनार्थ नियमित रूपसे मिलनेवाला धन। ವಿದ್ಯಾರ್ಥಿವೇತನ, 'ಸ್ಕಾಲರಶಿಪ್'.

छात्रालय– पु. विद्यार्थियोंके रहनेका स्थान। ವಿದ್ಯಾರ್ಥಿಗಳ ವಸತಿಗೃಹ.

छादन–पु. आवरण, ढकने या छिपानेका कार्य। ಆವರಣ, ಮರೆ, ಹೊದಿಕೆ, ಹೊದಿಸುವ ಅಥವಾ ಮುಚ್ಚುವ

ಕೆಲಸ.

**छान**– स्त्री दे. 'छानि'। पशुके पैर बाँधनेकी रस्सी। ದನಗಳ ಕಾಲು ಕಟ್ಟುವ ಹಗ್ಗ.

**छानना**– सक्रि पानी इत्यादिको महीन कपडे या चलनी के पार निकालना, जाँचना, खोजना, अलग करना, घीमें पकाना, बाधना, नशा पीना। ಸೋಸು, ಗಾಳಿಸು, ಪರೀಕ್ಷಿಸು, ಶೋಧಿಸು, ಅನ್ವೇಷಿಸು, ಬೇರ್ಪಡಿಸು,ತೂರು, ಕೇರು, ಕರಿ,ಕಟ್ಟು, ಬಿಗಿ, ಮಾದಕ ಪದಾರ್ಥಗಳನ್ನು ಸೇವಿಸು, ಮದ್ಯಪಾನ ಮಾಡು.

**छानबीन**– स्त्री जाँच पडताल, विस्तृत विचार। ಪೂರ್ಣ ವಿಚಾರ, ಅನ್ವೇಷಣೆ, ಪರಿಶೋಧನ, ಪೃಥಕ್ಕರಣ, ವಿಸ್ತೃತ ವಿಚಾರ.

**छाना**– सक्रि. ऊपर ढाकना या आच्छादित करना, फैलाना, बिछाना, रक्षा करना। ಹೊದಿಸು, ಮುಚ್ಚು, ಹರವು, ಹಾಸು, ರಕ್ಷಿಸು. अक्रि. फैलाना, बसना, टिकना। ಹರಡು, ಹಬ್ಬು, ಕವಿ, ಸ್ಥಿರವಾಗು, ನಿಲ್ಲು, ತಡೆ, ತಂಗು, ಬೀಡುಬಿಡು.

**छानि, छानी**– स्त्री. छप्पर। ಚಪ್ಪರ, ಹಂದರ, ಅಚ್ಛಾದನ.

**छाप**– स्त्री. मुहर आदि का चिह्न, मुद्रा, कवियो का उपनाम। ಅಚ್ಚು, ಮುದ್ರೆ, ಮೊಹರು, ಕವಿಗಳ ಉಪನಾಮ.

**छापना**– सक्रि मुद्रित करना, ठप्पे इत्यादि से अंकित करना। ಅಚ್ಚು ಹಾಕು, ಮುದ್ರಿಸು, ರಸ್ಸೆಹಾಕು, ಮುದ್ರೆ ಒತ್ತು, ಮೊಹರು ಹಾಕು.

**छापा**– पु. ठप्पा, मुहर, मुद्रणयंत्र, प्रतिकृति, आकस्मिक आक्रमण। ಅಚ್ಚು, ಮುದ್ರೆ, ಮುದ್ರಣ ಯಂತ್ರ, ಪ್ರತಿಕೃತಿ,ಆಕಸ್ಮಿಕ ದಾಳಿ (ಆಕ್ರಮಣ).

**छापाखाना**– पु मुद्रालय। ಮುದ್ರಣಾಲಯ, ಛಾಪಖಾನೆ

**छाम**– वि दुबला, क्षीण। ದುರ್ಬಲ, ಅಶಕ್ತ, ಕ್ಷೀಣ, ಕೃಶ.

**छाया**– स्त्री दे. 'छाँह'।

**छार**– पु नमक, क्षार, भस्म, राख। ಉಪ್ಪು, ಕ್ಷಾರ, ಲವಣ, ಭಸ್ಮ, ಬೂದಿ, ಧೂಳು.

**छाल**– स्त्री वृक्षो के ऊपरका आवरण, वल्कल। ತೊಗಟೆ, ಆವರಣ,ನಾರುಬಟ್ಟೆ, ವಲ್ಕಲ.

**छालना**– अक्रि साफ करना, धोना, छेद करना। ಸ್ವಚ್ಛ ಮಾಡು,ಸೋಸು, ತೊಳೆ, ತೂತು ಕೊರೆ.

**छाला**–पु फफोला, छाल, चर्म। ಗುಳ್ಳೆ, ಹುಗುಳು, ತೊಗಟೆ, ಚರ್ಮ.

**छावँ**– स्त्री. दे 'छाँह'।

**छावना**– सक्रि दे. 'छाना'।

**छावनी**– स्त्री. डेरा, छप्पर। ಸೈನ್ಯ ತಂಗುವ ಸ್ಥಳ, ಬಿಡಾರ, ಬೀಡು, ಪಾಳೆಯ,ಡೇರೆ, ಛಾವಣಿ,ಚಪ್ಪರ, ಹುಲ್ಲು ಮಾಳಿಗೆ.

छावा– पु. बच्चा, पुत्र । ಮಗು, ಮರಿ, ಪುತ್ರ.

छाछ– स्त्री. छाछ । ಮಜ್ಜಿಗೆ.

छिंकाना– अक्रि छीक लाना । ಸೀನು, ಸೀನು ತರಿಸು.

छिंगुनिया, छिगुनी, छिंगुलिया, छिंगुली– स्त्री. सबसे छोटी अँगुली । ಚಿಕ್ಕ ಬೆರಳು.

छिंछ, छिंछि– स्त्री. छीटा, बूँद, धार । ಹನಿ, ಸಿಡಿದ ಹನಿ, ಪ್ರವಾಹ.

छिउंकी– स्त्री. एक तरहकी चीटी । ಸಣ್ಣ ಇರುವೆ.

छि॑,छि–अव्य घृणा, अरुचि इत्यादिका सूचक शब्द । ಛೀ, ತಿರಸ್ಕಾರ ಸೂಚಕ ಶಬ್ದ.

छिगुनिया, छिगुनी, छिगुली– स्त्री दे 'छिंगुनिया' ।

छिछला– वि उछला । ಆಳವಿಲ್ಲದ, ತಿಳುವಾದ

छिछोरपन–पु क्षुद्रता, नीचता । ಕ್ಷುದ್ರತನ, ನೀಚತನ, ಅಲ್ಪತನ.

छिछोरा– वि क्षुद्र, ओछा । ಕ್ಷುದ್ರ, ನೀಚ, ಕೀಳುತರದ.

छिटकना–अक्रि. चारो ओर फैल जाना । ಹಬ್ಬು, ಹರವು, ಪಸರಿಸು.

छिटकनी– स्त्री. दे. 'सिटकनी' ।

छिटकाना– सक्रि विखराना, फैलाना । ಹರವು, ಚಲ್ಲು, ಚದುರಿಸು, ಬೀರು, ಹರಡಿಸು, ಹಬ್ಬಿಸು, ಪಸರಿಸು.

छिटनी– स्त्री बाँस की छोटी टोकरी । ಬಿದಿರ ಬುಟ್ಟಿ, ಚಿಕ್ಕ ಬುಟ್ಟಿ.

छिडकना– सक्रि सींचना, छिड़काव करना । ಚಿಮುಕಿಸು, ಪ್ರೋಕ್ಷಿಸು.

छिडकवाना– छिड़कनेका काम दूसरे से कराना । ಎರಡನೆಯವರಿಂದ ಸಿಂಪಡಿಸುವ ಕೆಲಸ ಮಾಡಿಸು.

छिडकाई– स्त्री. छिड़कनेका काम या पारिश्रमिक । ಪ್ರೋಕ್ಷಣೆ, ಚಿಮುಕಿಸುವಿಕೆ, ಎರಚುವಿಕೆ, ಪ್ರೋಕ್ಷಿಸುವ ಕೂಲಿ.

छिड़काव– पु सिंचाई । ಪ್ರೋಕ್ಷಣೆ, ಎರಚುವಿಕೆ.

छिड़ना– अक्रि. शुरु होना । ಪ್ರಾರಂಭವಾಗು, ಹತ್ತು, ತೊಡಗು.

छितराना– सक्रि. फैलाना, विखराना । ಹರವು, ಚದುರಿಸು, ಚೆಲ್ಲು. अक्रि विखरना । ಅಸ್ತವ್ಯಸ್ತವಾಗಿ ಬೀಳು, ಹರಡು, ಚದುರು.

छितराव– पु छितराने का भाव । ಚದುರುವಿಕೆ, ಹರಡುವಿಕೆ, ಎರಚುವಿಕೆ, ಪ್ರೋಕ್ಷಣೆ.

छिति– स्त्री. पृथिवी । ಪೃಥ್ವಿ, ಭೂಮಿ

छिदना–अक्रि चुभना, छिद्रयुक्त होना । ಚುಚ್ಚು, ತೂತುಬೀಳು, ಛಿದ್ರಯುಕ್ತವಾಗು, ಗಾಯುವಾಗು, ಚುಚ್ಚು.

छिदरा– वि छेददार, जर्जर । ತೂತು ಬಿದ್ದ, ಜರ್ಜರಿತ, ಹರಿದ.

छिदवाना, छिदाना– सक्रि छेदाना । ಚುಚ್ಚಿಸು, ಇರಿಸು.

छिद्रान्वेषी–वि पराया दोष ढूँढनेवाला ।

ಪರರ ತಪ್ಪು ಹುಡುಕುವವ.

**छिन**– पु. क्षण । ಕ್ಷಣ.

**छिनक**– क्रिवि. क्षणभर, दमभर । ಕ್ಷಣ ಹೊತ್ತು, ಸ್ವಲ್ಪ ವೇಳೆ.

**छिनकना**– सक्रि (नाक) साफ करना । ಸೀನು, ಮೂಗು ಸ್ವಚ್ಛಮಾಡು.

**छिनछवि, छिनौछवि**– स्त्री. बिजली । ಮಿಂಚು,

**छिनदा**– स्त्री. रात्री । ರಾತ್ರಿ.

**छिनना**– अक्रि. छीना जाना, कूटा जाना । ಅಪಹರಣವಾಗು, ಸುಲಿಯಲ್ಪಡು, ಕುಟ್ಟಲ್ಪಡು. सक्रि. कूटना । ಕುಟ್ಟು, ಜಜ್ಜು.

**छिनरा**– पु व्यभिचारी । ವ್ಯಭಿಚಾರಿ, ಲಂಪಟ, ಕಾಮಾಂಧ.

**छिनवाना, छिनाना**– सक्रि 'छीनना' का प्रे रूप ।

**छिनार, छिनाल**– वि दुराचारिणी । ವ್ಯಭಿಚಾರಿಣಿ, ಹಾದರಗಿತ್ತಿ.

**छिनाला**– पु व्यभिचार । ವ್ಯಭಿಚಾರ, ಹಾದರ.

**छिन्न**–वि. खंडित । ಛಿನ್ನ, ತುಂಡಾದ, ಕತ್ತರಿಸಿದ.

**छिपकली**– स्त्री गोह जातिका एक जंतु जो घरोमें रहता है । ಹಲ್ಲಿ.

**छिपना**– अक्रि आडमें होना, अदृश होना । ಮರೆಯಾಗು, ಅಡಗು, ಗುಪ್ತವಾಗು, ಅವಿತುಕೊಳ್ಳು.

**छिपाना**– सक्रि ढाकना, आडमें करना, गुप्त रखना । ಮರೆಮಾಡು, ಅಡಗಿಸು, ಮುಚ್ಚು, ಗುಪ್ತವಾಗಿಡು

**छिपाव**–पु. छिपानेका कार्य । ಮುಚ್ಚು, ಮರೆ, ಗುಪ್ತವಾಗಿರಿಸುವದು, ರಹಸ್ಯ, ಮುಚ್ಚಿಡುವದು.

**छिमा**– स्त्री क्षमा । ಕ್ಷಮೆ.

**छिया**– स्त्री घृणित वस्तु, मल । ತಿರಸ್ಕೃತ ವಸ್ತು, ಮಲ, ಹೊಲಸು. वि मलिन, घृणित । ಮಲಿನ, ಅಸ್ವಚ್ಛ, ತಿರಸ್ಕೃತ. स्त्री लड़की । ಹುಡುಗಿ.

—**छरद करना** = छी छी करना । ತಿರಸ್ಕರಿಸು

**छियानवे**– वि ९६ । ತೊಂಭತ್ತಾರು.

**छियालीस**– वि. ४६ । ನಾಲ್ವತ್ತಾರು

**छियासठ**– वि ६६ । ಅರವತ್ತಾರು

**छियासी**– वि ८६ । ಎಂಭತ್ತಾರು.

**छिरकना, छिलकना**– सक्रि दे 'छिड़कना' ।

**छिलका**– पु. वकला, भूसी । ಸಿಪ್ಪೆ, ತೊಗಟೆ, ಹೊಟ್ಟು.

**छिलना**– अक्रि रगड़ खाना । ಕೆತ್ತಲ್ಪಡು, ತಿಕ್ಕಲ್ಪಡು, ಸಿಪ್ಪೆ ಸುಲಿದು ಹೋಗು.

**छिलवाना**– सक्रि 'छीलना' का प्रे रूप ।

**छींक**– स्त्री नाक और मुहसे आवाज के साथ वायुका सवेग निकलना । ಸೀನು.

**छीकना**– अक्रि छींक लेना । ಸೀನು, ಸೀನುಬರು

छींका– पु. दे. ' छीका '।

छींट– स्त्री. जलकण, बूटीदार कपड़ा। ತೊಟ್ಟು, ಹನಿ, ತುಂತುರು, ಚಿತ್ರ ಅಥವಾ ಕಸೂತಿ ತೆಗೆದ ಅರಿವೆ.

छींटा–पु. दे. छींट। छिपा हुआ आक्षेप, मादक पदार्थकी एक मात्रा। ವ್ಯಂಗ್ಯ, ಗೇಲಿ,ನಗಚಾಟಿಗೆ, ಮಾದಕ ಪದಾರ್ಥದ ಒಂದು ಗುಟುಕು ಅಥವಾ ಮಾತ್ರೆ.

छीका– पु. सिकहर, बैलो के मुखपर बाँधनेकी जाल, झूलेका पुल। ನೆಲುವು, ಎತ್ತುಗಳ ಮುಖಕ್ಕೆ ಹಾಕುವ ಜಾಳಿಗೆ, ಬಾಯಿಬುಟ್ಟಿ, ಕಲ್ಲಿ, ತೂಗು ಸೇತುವೆ, ಜಾಳಿಗೆಯುಳ್ಳ ಕಿಡಿಕಿ.

छीछड़ा– पु. माँसका बेकाम टुकड़ा। ಮಾಂಸದ ನಿರರ್ಥಕ ತುಂಡು.

छीछालेदार– स्त्री. दुर्गति। ದುರ್ಗತಿ, ಅವನತಿ.

छीजना– अक्रि क्षीण होना, घटना, बिगड़ना। ಕ್ಷೀಣವಾಗು, ಕುಗ್ಗು, ಕಡಿಮೆಯಾಗು, ಸವೆ, ಕೆಡು,ಹಾನಿಯಾಗು.

छींट– स्त्री. दे. ' छींट '।

छीतना– सक्रि डंक मारना। ದಂಶ ಮಾಡು, ಪ್ರಹಾರ ಮಾಡು.

छीति–स्त्री.हानि, क्षति, बुराई। ಹಾನಿ, ಕ್ಷತಿ, ಕೆಡಕು.

छीदा– वि. बहुत छिद्रोंवाला। ಬಹಳ ಛಿದ್ರಗಳುಳ್ಳ, ವಿರಳವಾದ ಎಳೆಗಳುಳ್ಳ.

छीन– वि. क्षीण। ಕ್ಷೀಣ.

छीनना– सक्रि. अपहरण करना, काटकर अलगाना, छेनी से पत्थर काटना। ಕಸುಕೊಳ್ಳು, ಸರ್ರನೆ ಕಿತ್ತುಕೊಳ್ಳು, ಕತ್ತರಿಸು, ಹರಿ, ಕಲ್ಲುಕಟಿ, ಕಲ್ಲು ಮುಳ್ಳಾಡಿಸು.

छीना खसोटी–स्त्री. दे. 'छीना झपटी'।

छीनाछीनी, छीना झपटी– स्त्री किसी वस्तुको छीन लेना। ಜಗ್ಗಾಟ, ತಿಕ್ಕಾಟ, ಬಲಾತ್ಕಾರ, ಕಸುಕೊಳ್ಳುವಿಕೆ.

छीप– वि तेज। ಚಪಲ, ವೇಗವುಳ್ಳ, ತ್ವರಿತ. स्त्री. छाप, छव्वा। ಕಲೆ, ಮುದ್ರೆ, ಮೈಮೇಲೆ ಕಲೆ ಬೀಳುವ ಒಂದು ರೋಗ.

छीपी– पु. वस्त्रपर छींट छापनेवाला। ಬಟ್ಟೆಯಮೇಲೆ ಅಚ್ಚುಹಾಕುವವ.

छीबर– पु. वह वस्त्र जिसपर बेलबूटे छपे हो। ಅಚ್ಚು ಹಾಕಿದ ದಪ್ಪ ಅರಿವೆ.

छीर– पु. दूध, छोर। ಹಾಲು,ಅಂಚು, ದಂಡೆ.

छीरप– पु. बच्चा। ಮಗು, ಬಾಲಕ.

छीलक– पु. दे ' छिलका '।

छीलना– अक्रि. खरोंचना, छिलका अलगाना। ಕೆರೆದುತೆಗೆ, ಸಿಪ್ಪೆಸುಲಿ, ಸುಲಿ, ಹೆರೆ.

छीलर–पु. छिछला गड्ढा। ಆಳವಿಲ್ಲದ ಹೊಂಡ, ಸಣ್ಣ ಕೆರೆ.

छुआछूत– स्त्री छूतछातका विचार। ಮೈಲಿಗೆ, ಹೊಲೆ, ಅಸ್ಪೃಶ್ಯತೆ.
छुआना– सक्रि. छुलाना। ಮುಟ್ಟಿಸು, ಸ್ಪರ್ಶ ಮಾಡಿಸು.
छुगनू– पु. घुंघरू। ಗೆಜ್ಜೆ.
छुच्छी– स्त्री. पोली पतली नली, नाककी कील। ತೆಳುವಾದ ಪೊಳ್ಳು ನಲಿಕೆ, ಮುರುವು, ಮೂಗಬಟ್ಟು.
छुछकारना– सक्रि. कुत्ते को आखेट के पीछे लगाना, डॉट फटकार बताना। ಓಡಿಸು, ಛೂ ಬಿಡು, ಕೆರಳಿಸು, ಬೆದರಿಕೆ ಹಾಕು.
छुछुंदर– पु. चूहेकी जातिका एक जंतु। ಸೊಂಡಿಲಿ.
छुट– अव्य छोडकर, सिवाय। ಬಿಟ್ಟು, ಹೊರ್ತಾಗಿ.
छुटकाना– सक्रि. छुड़ाना, छोड़ना। ಬಿಡಿಸು, ಬಿಡು, ಬಿಡುಗಡೆಮಾಡು.
छुटकारा– पु. मुक्ति, रक्षा। ಮುಕ್ತಿ, ಬಿಡುಗಡೆ, ರಕ್ಷಣೆ.
छुटना– अक्रि. दे 'छूटना'।
छुटपन– पु लडकपन, छोटाई। ಮಗುತನ, ಚಿಕ್ಕತನ, ಬಾಲ್ಯ.
छुटाना– सक्रि दे 'छुड़ाना'।
छुट्टा– वि अकेला, वंधनरहित। ಒಂಟಿಗ, ಬಂಧನರಹಿತ, ಸ್ವತಂತ್ರ, ತೆರವು, ಅವಕಾಶ.
छुट्टी–स्त्री. अवकाश, मुक्ति। ಬಿಡುವು, ರಜೆ, ಬಿಡುಗಡೆ.
छुडवाना–सक्रि. छोड़नेका काम कराना। ಬಿಡಿಸು, ಬಿಡುಗಡೆ ಮಾಡಿಸು.
छुडाई– स्त्री. छोडनेकी क्रिया या किसी चीजके छोडनेके वदलेमें दिया हुआ धन। ಬಿಡುಗಡೆ, ಮುಕ್ತಿ, ಯಾವದೊಂದು ವಸ್ತುವನ್ನು ಬಿಡುವದರ ಸಲುವಾಗಿ ಕೊಟ್ಟ ಹಣ.
छुड़ाना– सक्रि. मुक्त करना, छीनना। ಬಿಡಿಸು, ಬೇರೆಮಾಡು, ಅಗಲಿಸು, ಎಳೆದುಕೊಳ್ಳು.
छुत्– स्त्री. भूख। ಹಸಿವು.
छुपना, छुपाना– दे 'छिपना', 'छिपाना'।
छुभित– वि क्षुब्ध, विचलित। ಕ್ಷುಬ್ಧ, ವಿಚಲಿತ, ಗಾಬರಿಯಾದ.
छुभिराना–अक्रि क्षुब्ध होना, विचलित होना। ಅಲ್ಲೋಲಕಲ್ಲೋಲವಾಗು, ಕ್ಷುಬ್ಧವಾಗು, ಗಾಬರಿಯಾಗು.
छुरधार– स्त्री छुरेकी धार, पैनी धार। ಕತ್ತಿಯ ಅಲಗು, ತೀಕ್ಷ್ಣಧಾರೆ.
छुरा– पु. वडी छुरी, उस्तरा। ಚೂರಿ, ಚಾಕು, ಕತ್ತಿ.
छुरिका, छुरी–स्त्री. चाकू। ಚಿಕ್ಕಚೂರಿ, ಚಾಕು, ಸಣ್ಣ ಕತ್ತಿ.
छुलकना, छुलछुलाना– अक्रि. थोड़ा थोड़ा करके पेशाव करना। ಸ್ವಲ್ಪ ಸ್ವಲ್ಪವಾಗಿ ಮೂತ್ರ ಮಾಡು.
छुलाना– सक्रि. दे 'छुवाना'।
छुवना–सक्रि स्पर्श करना। ಮುಟ್ಟು, ಸ್ಪರ್ಶ ಮಾಡು.
छुवाना– सक्रि स्पर्श कराना। ಸ್ಪರ್ಶ

ಮಾಡಿಸು, ಶಗಲಿಸು.

छुहना– अक्रि छूजाना, रंगा जाना, पुतना। ಮುಟ್ಟು, ಬಣ್ಣ ಕೊಡಲ್ಪಡು, ಬಳೆಯಲ್ಪಡು, ನಾರಿಸಲ್ಪಡು, ಚಿತ್ರಿಸಲ್ಪಡು.

छुहाना– सक्रि भया या प्रेम करना, रंग देना। ದಯೆದೋರು ಅಥವಾ ಪ್ರೀತಿಸು, ಬಣ್ಣಕೊಡು, ಸವರು.

छुहारा– पु. एक तरहका खजूर। ಖಜ್ಜೂರ, ಉತ್ತತ್ತಿ.

छूँछा–वि खाली। ಬರಿದಾದ, ಪೊಳ್ಳು, ನಿಸ್ಸಾರ, ನಿಸ್ಸತ್ವ

छू– पु. मंत्र पढकर फूंकनेका शब्द। ಮಂತ್ರ ಹಾಕುವ ಶಬ್ದ.

छूछू– पु बेवकूफ। ಮೂರ್ಖ, ದಡ್ಡ.

छूट– स्त्री. छुटकारा, अवकाश, ऋणकी छुडौती, गाली गलौज, स्त्रीपुरुषका परस्पर त्याग, किसी कामका भूलसे न किया जाना। ಬಿಡುಗಡೆ,ಮುಕ್ತಿ, ಸ್ವಾತಂತ್ರ್ಯ, ಅವಕಾಶ, ಬಿಡುವು, ಸಾಲದಲ್ಲಿ ಬಿಟ್ಟ ಹಣ, ಬೈಗಳು, ಬಿಡುಗಡೆ, ಸೋಡಚೀಟಿ, ಯಾವದೊಂದು ಕೆಲಸವನ್ನು ಮರೆತು ಮಾಡದಿರುವದು, ವಿಸ್ಮರಣ, ಮರವು.

छूटना–अक्रि अलग होना, मुक्त होना, प्रस्थान करना, शेष रहना। ಬೇರೆಯಾಗು, ದೂರವಾಗು, ಬಿಡುಗಡೆ ಹೊಂದು,ತೊಲಗು, ಬಿಟ್ಟು ಹೋಗು, ಹೊರಡು, ಬಿಚ್ಚು, ಉಳಿ, ನಿಂತು ಹೋಗು, ಕಸರು ಉಳಿ, ಮರೆತು ಬಿಡು.

छूत–स्त्री. स्पर्श, अपवित्र वस्तुके छूनेका दोष। ಸ್ಪರ್ಶ, ಮೈಲಿಗೆ.

छूना– अक्रि स्पर्श होना। ಮುಟ್ಟು, ತಗಲು, ಅಂಟು, ತಾಗು. सक्रि. स्पर्श करना, पोतना। ಮುಟ್ಟು, ಸ್ಪರ್ಶಿಸು, ಸವರು, ಬಣ್ಣ ಬಳಿ.

छेंकना– सक्रि. घेरना, रोकना, आच्छादित करना, रेखाओंसे घेरना, लकीर खींचकर काटना। ಆವರಿಸು,ಮುತ್ತಿಕೊಳ್ಳು, ಅಡ್ಡಿಮಾಡು, ತಡೆ, ಆಚ್ಛಾದಿಸು, ಗೆರೆ ಹಾಕಿ ಮರ್ಯಾದಿಸು, ಕಾಟು ಹೊಡೆ.

छेक– पु. छिद्र, कटाव। ಛಿದ್ರ,ತೂತು, ಕಚ್ಚು, ಕಡಿತ, ತುಂಡು,ಹೋಳು.

छेडना– सक्रि शुरू करना, तंग करना, स्पर्श करना। ಆರಂಭಿಸು, ಕೆಣಕು, ತ್ರಾಸಕೊಡು, ಮುಟ್ಟು.

छेडवाना– सक्रि. 'छेड़ना' का प्रे. रूप।

छेद– छिद्र, सूराख, खंड, नाश, दोष, भाजक। ತೂತು, ಛಿದ್ರ, ತುಂಡು, ಭಾಗ, ನಾಶ, ಕುಂದು, ದೋಷ, ಭಾಜಕ. (ಗಣಿತದಲ್ಲಿ.)

छेदक, छेदनहार–वि. छेदनेवाला,काटनेवाला। ಛೇದಿಸುವ, ಕಡಿಯುವ, ಭಾಗಿಸುವ, ನಾಶ ಮಾಡುವ.

छेदना–सक्रि. भेदना, चुभाना, काटना। ಛೇದಿಸು, ಚುಚ್ಚು. ತೂತುಕೊರೆ, ಕಡಿ, ಕೊಯ್ಯು.

छेना– पु फटे दूधका खोया । ಕೆಟ್ಟು ಗಡ್ಡೆಗಟ್ಟಿದ ಹಾಲು. अक्रि क्षीण होना। ಕ್ಷೀಣವಾಗು. सक्रि काटना। ಕಡಿ, ಪ್ರಹಾರ ಮಾಡು

छेनी– स्त्री टाँकी । ಚಾಣ, ಉಳಿ, ಕೆತ್ತನೆ ಮೊಳೆ.

छेम– पु क्षेम । ಕ್ಷೇಮ, ಕುಶಲ.

छेरी,छेली–स्त्री बकरी । ಮೇಕೆ, ಆಡು.

छेव–पु वार, आघात, चोट आपत्ति । ಇರಿತ, ಗಾಯ, ಆಘಾತ, ಪೆಟ್ಟು, ಸಂಕಟ, ಆಪತ್ತು.

छेवना– सक्रि काटना, चिह्नित करना, मिलाना । ಕಡಿ, ಕೊಯ್ಯು, ಗುರ್ತು ಹಾಕು, ಕೂಡಿಸು. स्त्री ताड़ी । ತಾಡಿ, ಸಿಂದಿ, ಹೆಂಡ.

छेवनी– स्त्री दे. 'छेनी' ।

छेह– पु. नाश, आघात । ನಾಶ,ಆಘಾತ, ಹೊಡೆತ. वि खंडित, न्यून । ತುಂಡಾದ, ಮುರಿದ, ನ್ಯೂನ. स्त्री धूल, राख, छाया । ಧೂಳು,ಮಣ್ಣು, ಬೂದಿ, ಛಾಯೆ, ನೆರಳು

छै– स्त्री. क्षय। ಕ್ಷಯ,ಹಾನಿ. वि छ । ಆರು.

छैया– पु छोटा बच्चा । ಚಿಕ್ಕ ಮಗು.

छैल, छैला– पु बनाठना आदमी, शौकीन । ಸಿಂಗಾರಾದ ಮನುಷ್ಯ, ರಸಿಕ, ಬೆಡಗುಗಾರ.

छैलछकनियाँ– पु. दे 'छैल' ।

छैलछबीला, छैला– पु दे. 'छैल' ।

छोकडा छोकरा– पु बालक। ಬಾಲಕ.

छोकड़िया, छोकडी, छोकरी– स्त्री बेटी, लडकी । ಮಗಳು, ಹುಡುಗಿ.

छोटा– वि. आकार अवस्था आदिमे कम । ಸಣ್ಣ, ಚಿಕ್ಕ, ನೀಚ, ಮಹತ್ವವಿಲ್ಲದ, ತುಚ್ಛ, ಅಲ್ಪ.

छोटाई– स्त्री. छोटापन– पु लघुता, क्षुद्रता । ಚಿಕ್ಕತನ,ಕ್ಷುದ್ರತನ, ಅಲ್ಪತನ, ನೀಚತನ.

छोटा मोटा– वि छोटासा, सामान्य । ಚಿಕ್ಕಪುಟ್ಟ, ಸಾಮಾನ್ಯ, ಮಹತ್ವವಿಲ್ಲದ.

छोटी हाजिरी– स्त्री भारत के रहनेवाले अंगरेजोका प्रातःकाल का भोजन । ಹಿಂದುಸ್ತಾನದಲ್ಲಿಯ ಆಂಗ್ಲರ ಮುಂಜಾನೆಯ ಊಟ.

छोडना– सक्रि. मुक्त करना, परित्याग करना, छूट देना, प्रस्थान करना, माफ करना, चलाना, रहने देना । ಬಿಡು, ಮುಕ್ತ ಮಾಡು, ಬಿಟ್ಟುಬಿಡು, ಹಣ ಬಿಟ್ಟುಕೊಡು, ಹೊರಡು, ಕ್ಷಮಿಸು, ಹಾರಿಸು, ಇದ್ದಲ್ಲಿ ಇರಗೊಡು.

छोडवाना, छोड़ाना– सक्रि 'छोडना' का प्रे रूप ।

छोनिप– पु राजा । ಅರಸು.

छोनी– स्त्री पृथ्वी । ಪೃಥ್ವಿ, ಭೂಮಿ.

छोप– पु मोटा लेप, छिपाव, आघात । ಗಿಲಾವು, ಗಾರೆ, ಮೆತ್ತಗ, ಲೇಪ ಹಚ್ಚುವಿಕೆ,ಗುಪ್ತ ಸಂಗತಿ,ಮುಚ್ಚುಮರೆ, ಆಘಾತ, ಏಟು, ಪೆಟ್ಟು.

छोपना– सक्रि थोपना, मरम्मत करना, ढकना। ಏರಿಸು, ಸ್ಥಾಪಿಸು, ಲೇಪ ಮಾಡು, ಬಳಿ, ದುರಸ್ತಿ ಮಾಡು, ಮುಚ್ಚು, ರಕ್ಷಿಸು.

छोभना– अक्रि क्षुब्ध होना, मुग्ध होना। ಕ್ಷುಬ್ಧವಾಗು, ವ್ಯಾಕುಲ ನಾಗು, ಮುಗ್ಧನಾಗು.

छोम–वि चिकना, मृदु। ನುಣುಪಾದ, ಮೃದುವಾದ, ಮೆತ್ತಗಾದ.

छोर– पु. किनारा, नोंक। ತುದಿ, ದಂಡೆ, ಅಂಚು, ಮೊನೆ, ಸೀಮೆ, ಎಲ್ಲೆ.

छोरना– सक्रि दे 'छोड़ना'।

छोरा– पु. लड़का, पुत्र। ಹುಡುಗ, ಮಗು.

छोरी–स्त्री. लड़की। ಹುಡುಗಿ, ಮಗಳು.

छोलदारी–स्त्री. छोटा तंबू। ಚಿಕ್ಕ ಡೇರೆ, ಚಿಕ್ಕ ಗುಡಾರ.

छोलना–सक्रि. छीलना। ಸುಲಿ, ಕೆತ್ತು, ಕೆರೆ.

छोह– पु प्रेम, ममता, दया। ಪ್ರೇಮ, ಕೃಪೆ, ದಯೆ.

छोहरा– पु. लड़का। ಹುಡುಗ.

छोहाना– अक्रि. अनुग्रह करना, प्रेम दिखलाना। ಅನುಗ್ರಹಿಸು, ದಯೆ ದೋರು, ಪ್ರೇಮ ಮಾಡು.

छोही– वि. प्रेमी। ಪ್ರೇಮಿಸುವವ.

छौंक– स्त्री. वघार। ಒಗ್ಗರಣೆ.

छौंकना– सक्रि वघारना। ಒಗ್ಗರಣೆ ಹಾಕು.

छौना– पु. किसी पशुका वच्चा। ಚತು ಷ್ಪಾದಗಳ ಕರು ಅಥವಾ ಮರಿ.

छौलदारी– स्त्री. छोलदारी। ಚಿಕ್ಕ ಗುಡಾರ, ಸಣ್ಣ ಡೇರೆ.

---

# ज

जंग– पु युद्ध। ಯುದ್ಧ.

ज़ंग– पु. लोहेपर लगनेवाला मुरचा। ಜಂಗು, ತುಕ್ಕು, ಕಿಲುಬು.

जॅगरैत– वि. परिश्रमी। ಉದ್ಯೋಗಿ, ಪರಿಶ್ರಮ ಮಾಡುವವ

जगल– पु. वन। ಅರಣ್ಯ, ಅಡವಿ.

जगला– पु. कटहरा, छड़दार खिड़की। ಕಟಾಂಜನ, ಪಂಜರ, ಕಬ್ಬಿಣದ ಸರಳುಗಳುಳ್ಳ ಕಿಟಕಿ.

जंगली–वि जंगलमें होनेवाला, जंगलका, उजड्ड। ಅರಣ್ಯದಲ್ಲಿ ಬೆಳೆಯುವ, ಕಾಡಿನ, ಪಳಗಿಸದ, ಕಾಡು, ಮೂರ್ಖ, ಹಳ್ಳಿಗಾಡ, ಅನಾಗರಿಕ.

जंगार, जंगाल– पु. तावे का कमाव। ತಾಮ್ರದ ಕಿಲಬು.

जंगारी– वि. नीले रंगका। ನೀಲಿ ಬಣ್ಣದ.

जंगी–वि. फौजी, विशाल। ಯುದ್ಧದ,

ಸೈನ್ಯ ಸಂಬಂಧದ, ಭವ್ಯ, ವಿಶಾಲ ವಾದ.

—लाट = पु. सेनापति । ಸೇನಾಪತಿ.

—जहाज़ = पु. युद्धनौका । ಯುದ್ಧ ನೌಕೆ.

**जंघा**– स्त्री. जाघ । ತೊಡೆ.

**जँचना**– अक्रि. जाँचा जाना । ಪರೀಕ್ಷಿಸಲ್ಪಡು, ನೋಡಲ್ಪಡು, ಯೋಗ್ಯವೆನಿಸು, ಒಳ್ಳೆಯದೆನಿಸು.

**जंजार, जंजाल**– पु. उलझन, झंझट, पानीका भँवर, एक तरहकी बंदूक, या तोप । ತೊಡಕು, ಪೇಚಾಟ, ನೀರಿನ ತಿರುಗಣಿ ಮಡುವು, ಒಂದು ತರದ ಬಂದೂಕು ಅಥವಾ ತೋಪು.

**जंजालिया, जंजाली**– वि. उपद्रवी । ಜಗಳಗಂಟ, ಉಪದ್ರವಿ.

**ज़ंजीर**–स्त्री साँकल, बेड़ी । ಸಂಕೋಲೆ, ಸರಪಣಿ, ಚಿಲಕ, ಬೇಡಿ.

**ज़ंजीरा**– पु. जंजीर जैसी सिलाई, गलेमें पहनने की सिकडी । ಸರಪಣಿ, ಹೊಲಿಗೆ, ಕಂಠಿಯ ಸರ.

**जंतर**– पु. यंत्र, तावीज़ । ಯಂತ್ರ, ತಾಯಿತ.

—मंतर = यंत्र-मंत्र। ಮಂತ್ರ-ತಂತ್ರ, ರಕ್ಷೆ.

**जंतरी**–स्त्री. सोनारका तार महीन करने का यंत्र, तिथिपत्र, जादूगर । ತಂತಿ ಎಳೆಯುವ ಯಂತ್ರ, ತಿಥಿಪತ್ರ, ಪಂಚಾಂಗ. पु. वाजा वजानेवाला। ವಾದ್ಯ ಬಾರಿಸುವವ, ವಾದ್ಯಗಾರ.

**जँतसार**– स्त्री. जाँता गाड़नेकी जगह । ಬೀಸುವ ಕಲ್ಲು ನೆಡುವ ಸ್ಥಳ, ಯಂತ್ರದ ಮನೆ.

**जंता**– पु. तार खीचनेका औज़ार । ತಂತಿ ಎಳೆಯುವ ಯಂತ್ರ. वि. यंत्रणा देनेवाला । ತ್ರಾಸು ಕೊಡುವವ, ಶಿಕ್ಷಿಸುವವ.

**जँताना**– अक्रि. जाँते इत्यादिसे दबकर पिसा जाना । ಬೀಸುವ ಕಲ್ಲು ಮುಂತಾದವುಗಳಲ್ಲಿ ಸಿಕ್ಕು ಒತ್ತಲ್ಪಡು, ಬೀಸಲ್ಪಡು.

**जंतु**– पु प्राणी । ಜೀವಿ, ಪ್ರಾಣಿ,ಪಶು.

**जंत्र**–पु यंत्र, तावीज़, ताला। ಯಂತ್ರ, ತಾಯಿತ, ಕೀಲಿ.

**जंत्रना**–सक्रि. ताला लगाना, जकड़ना । ಕೀಲಿ ಹಾಕು, ಬಂಧಿಸು. स्त्री. यंत्रणा । ಪೀಡೆ, ತ್ರಾಸು.

**जंत्री**– वि. यंत्रित करनेवाला । ಬಂಧಿಸುವವ, ಕಟ್ಟುವವ. पु. वाजा वजानेवाला । ವಾದ್ಯ ಬಾರಿಸುವವ. स्त्री. दे. ‘जंतरी’ ।

**जंद**–पु. पारसियो का धर्मग्रंथ । ಪಾರ್ಸೀ ಜನರ ಧರ್ಮ ಗ್ರಂಥ.

**जंदरा**–पु. जाँता यंत्र, ताला। ಯಂತ್ರ, ಬೀಸುವ ಯಂತ್ರ, ಬೀಸುವಕಲ್ಲು, ಕೀಲಿ.

**जंपति**– पु. दंपती । ಪತಿಪತ್ನಿ,ದಂಪತಿ.

**जंपना**–अक्रि. कहना । ಹೇಳು, ಅನ್ನು.

**जंबाल**– पु. काई, कीचड़ । ಪಾಚಿ, ಕೆಸರು, ಕೊಚ್ಚೆ

जंबालिनी– स्त्री. नदी। ನದಿ, ಹೊಳೆ.

जंबीर– पु एक तरह का नीबू, वन तुलसी। ಒಂದು ತರದ ನಿಂಬೆ ಹಣ್ಣು, ಕಾಡು ತುಳಸಿ.

जंबु– पु जामुन। ನೇರಿಲ ಹಣ್ಣು.

जंबू–पु. काश्मीरकी एक जगह,जामुन। ಕಾಶ್ಮೀರದ ಒಂದು ಪಟ್ಟಣ, ನೇರಿಲ ಹಣ್ಣು.

जंबूर,जंबूरक– स्त्री एक तरह का तोप, चिमटा। ಒಂದು ತರದ ತೋಫು, ಇಕ್ಕಳ.

जंबूरची– पु. जंबूर नामक तोप चलाने वाला। 'ಜಂಬೂರ' ಎಂಬ ತೋಫು ಹೊಡೆಯುವವ.

जंबूरा– पु तोप की चर्ख, एक औजार। ತೋಫು ಹೇರುವ ಬಂಡಿ, ಇಕ್ಕಳ.

जंभ– पु दाढ़, जंभाई। ದವಡೆ, ಆಕಳಿಕೆ.

जंभा, जमाई– स्त्री. आलस्य आदि के कारण मुँह खुलने की एक स्वाभाविक क्रिया। ಆಕಳಿಕೆ.

जंभाना–अक्रि जभाई लेना। ಆಕಳಿಸು.

जई– स्त्री. जौकी तरह का एक अन्न, जौका अंकुर, फलोकी बतिया। ಒಂದು ತರದ ಜವೆಗೋದಿ, ಜವೆ ಗೋದಿಯ ಮೊಳಕೆ, ಅಂಕುರ, ಮಿಡಿಕಾಯಿ.

ज़ईफ़– वि वयोवृद्ध। ವಯೋವೃದ್ಧ, ಮುದುಕ.

ज़ईफ़ी– स्त्री दुर्बलता, वृद्धावस्था। ದುರ್ಬಲತೆ, ಮುಪ್ಪು.

जक्रंद– स्त्री. उछाल, छलाक। ನೆಗೆತ, ಜಿಗಿತ, ಹಾರಿಕೆ, ಕುಣಿತ.

जकंदना– स्त्री. उछालना। ನೆಗೆ, ಜಿಗಿ, ಹಾರು, ಕುಣಿ.

ज़क–स्त्री. हार, हानि, लज्जा। ಸೋಲು, ಹಾನಿ, ನಾಚಿಕೆ, ಮರ್ಯಾದೆ

जक– स्त्री. हठ, धुन। ಹಟ, ದುರಾಗ್ರಹ, ಹುಚ್ಚು, ಚಟ. पु. यक्ष, कृपण मनुष्य। ಯಕ್ಷ, ನಿಧಿ ನಿಕ್ಷೇಪಗಳನ್ನು ಕಾಯುವ ಭೂತ, ಜಿಪುಣ ಮನುಷ್ಯ.

जकड़– स्त्री जकड़ने की क्रिया। ಕಟ್ಟುವದು, ಬಿಗಿಯುವದು, ಕಟ್ಟು.

जकड़ना– सक्रि. कसना, बाँधना। ಕಟ್ಟು, ಬಿಗಿ, ಬಂಧಿಸು.

जकड़बंद करना = कसकर बाँधना। ಬಿಗಿದು ಕಟ್ಟು.

ज़कन– पु. ठोढ़ी। ಗದ್ದ, ಕದಪು.

जकना– अक्रि. आश्चर्य करना, स्थंभित होना। ಆಶ್ಚರ್ಯಚಕಿತನಾಗು.

ज़कात– स्त्री कर, खैरात। ತೆರಿಗೆ, ಸುಂಕ, ದಾನ.

ज़की– वि. बुद्धिमान। ಬುದ್ಧಿವಂತ, ಜಾಣ.

ज़ख़मी–वि. घायल। ಗಾಯಹೊಂದಿದ

जख़ीरा–पु.ढेर, संग्रह, कोष, खज़ाना। ಗುಂಪು, ರಾಶಿ, ಸಂಗ್ರಹ, ಬೊಕ್ಕಸ.

ज़ख़्म– पु घाव। ಗಾಯ, ಪುಣ್ಣು.

ज़ख़्मी– वि दे. 'ज़ख़मी'।

**जग**– पु. संसार । ಜಗತ್ತು.

**जगजगा**–वि. चमकीला । ಹೊಳೆಯುವ, ಹೊಳಪುಳ್ಳ, ಥಳಥಳಿಸುವ.

**जगजगाहट**– स्त्री चमक । ಕಾಂತಿ, ಹೊಳಪು, ಮಿಂಚು.

**जगत**–पु संसार । ಜಗತ್ತು. स्त्री कुएँका चबूतरा । ಬಾವಿಯ ಕಟ್ಟೆ.

**जगत्सेठ**– पु वडा धनी । ಬಹಳ ಶ್ರೀಮಂತ, ಕೋಟ್ಯಾಧೀಶ.

**जगना**–अक्रि जागना, उभड़ना, जलना। ಎಚ್ಚರವಾಗು, ಏಳು, ಆವೇಶ ಭರಿತನಾಗು, ಹುರಿದುಂಬು, ರೇಗು, ಉಕ್ಕು, ಹೊಮ್ಮು, ಹೊತ್ತು, ಜ್ವಾಲೆ ಎದ್ದು ಉರಿ, ಸುಡು.

**जगमग, जगमगा**–वि. प्रकाशित, चमकदार । ಪ್ರಕಾಶಮಾನ, ಹೊಳೆಯುವ, ಥಳಥಳಿಸುವ.

**जगमगना, जगमगाना**– अक्रि चमकना, झलकना । ಮಿಂಚು, ಮಿನುಗು, ಬೆಳಗು, ಹೊಳೆ, ಥಳಥಳಿಸು.

**जगमगाहट**– स्त्री. चमक । ಹೊಳಪು, ಕಾಂತಿ, ಮಿಂಚು

**जगरमगर**– वि दे 'जगमगा'।

**जगवाना**–सक्रि. निद्राभंग करना । ಎರಡನೆಯವರಿಂದ ಎಚ್ಚರಗೊಳಿಸು, ಹುರಿದುಂಬಿಸು, ಪ್ರೇರೇಪಿಸು.

**जगह**– स्त्री. स्थान, पद, गुंजाइश । ಸ್ಥಾನ, ಪದ, ಎಡೆ, ಸ್ಥಳ, ಅವಕಾಶ, ತೆರವು.

**जगाजोती**– स्त्री दे 'जगमगाहट'।

**ज़गात**– पु. दान, कर । ದಾನ, ಕರ, ಸುಂಕ.

**जगाना**– सक्रि. नींद छुड़ाना होश दिलाना, सुलगाना, । ಎಚ್ಚರಗೊಳಿಸು, ಹುರಿದುಂಬಿಸು, ಎಚ್ಚರಿಸು, ಹೊತ್ತಿಸು, ರೇಗಿಸು.

**जगार**– स्त्री जागृति, जागरण । ಜಾಗೃತಿ, ನಿದ್ದೆಗೆಡುವದು, ಜಾಗರಣೆ.

**जगीला**– वि उनींदा । ನಿದ್ದೆಗೆಟ್ಟ, ನಿದ್ದೆಗೆಟ್ಟದ್ದರಿಂದ ಮೈಯಲ್ಲಿ ಆಲಸ್ಯವುಳ್ಳ.

**जघन्य**– वि निंद्य, नीच । ನಿಂದ್ಯ, ನೀಚ.

**जचना**– अक्रि दे 'जँचना'।

**जच्चा**–स्त्री. वह स्त्री जिसने प्रसव किया हो । ಬಾಣಂತಿ, ಪ್ರಸೂತೆ.

**जच्चाख़ाना**– पु. सूतिका गृह । ಹೆರಿಗೆ ಮನೆ, ಸೂತಿಕಾ ಗೃಹ.

**जजमान, जजिमान**– पु यजमान, पूजा, करनेवाला । ಆತಿಥ್ಯ ಮಾಡುವವ, ಆಶ್ರಯದಾತ, ಪೂಜೆ ಮಾಡಿಸುವವ, ಗೃಹಸ್ಥ.

**जज़िया**– पु एक कर जो मुसल्मानों के राज्यमें अन्य धर्मवालों से लिया जाता था । ತೆರಿಗೆ, ಮುಸಲ್ಮಾನರ ಆಳಿಕೆಯಲ್ಲಿ ಅನ್ಯ ಮತಾವಲಂಬಿಗಳಿಂದ ಎತ್ತುತ್ತಿದ್ದ ತೆರಿಗೆ, ತಲೆಕಂದಾಯ.

**जज़ीरा**–पु. द्वीप । ದ್ವೀಪ, ನಡುಗಡ್ಡೆ.

**जज़ीरानुमा**– पु. वह स्थान जो तीन

ओर जलसे घिरा हो। ದ್ವೀಪಕಲ್ಪ, ಮೂರು ದಿಕ್ಕುಗಳಲ್ಲಿ ನೀರಿನಿಂದ ಆವರಿಸಲ್ಪಟ್ಟ ಪ್ರದೇಶ

जटना–सक्रि जड़ना, जकड़ना, ठगना। ರತ್ನ ಕೆತ್ತು, ನೆಡು, ಕಟ್ಟು, ಮೋಸ ಮಾಡು, ಅಪಹರಿಸು, ರಕ್ಷಿಸು.

जटल– स्त्री व्यर्थकी बकवाद। ಹರಟೆ, ಗೊಡ್ಡು ಮಾತು

जटा– स्त्री. उलझे हुए लंबे बाल, उलझे हुए रेशे। ಜಡೆ, ಒಂದರೊಳಗೊಂದು ಸಿಕ್ಕಿಕೊಂಡ ಉದ್ದ ಕೂದಲು, ಜಡೆಗಟ್ಟಿದ ಕೂದಲು.

जटाधर– पु. महादेव, शिव। ಮಹಾದೇವ, ಶಿವ.

जटाना– अक्रि ठगा जाना। ಮೋಸ ಹೋಗು, ರಕ್ಷಿಸಲ್ಪಡು. सक्रि 'जटना' का प्रे रूप।

जटाल– वि जिसके जटा हो। ಜಟಾಧಾರಿ, ಉದ್ದವಾದ ಕೂದಲುಳ್ಳವ. पु वटवृक्ष। ಆಲದ ಮರ

जटित– वि. जड़ा हुआ। ರತ್ನಖಚಿತ.

जटिल– वि. अत्यंत कठिन, दुष्ट, जटावाला। ತೊಡಕಾದ, ಕಠಿಣ, ದುರ್ಗಮ, ದುಷ್ಟ, ಕ್ರೂರ, ಜಡೆ ಗಟ್ಟಿದ ಕೂದಲುಳ್ಳ. पु. सिंह, महादेव। ಸಿಂಹ, ಮಹಾದೇವ.

जटी– वि जटाधारी। ಜಟಾಧಾರಿ.

जठर– पु. पेट। ಹೊಟ್ಟೆ, ಜಠರ. वि. वृद्ध, कठिन। ಮುದುಕ, ವೃದ್ಧ, ಕಠಿಣ.

जठेरा–वि ज्येष्ठ, बड़ा। ಜ್ಯೇಷ್ಠ, ಹಿರಿಯ. पु. लड़का। ಪುತ್ರ.

जड़– स्त्री पेड़की मूल, नींव, आधार। ಬೇರು, ಮೂಲಿಕೆ, ತಳಹದಿ. वि अचेतन, मूर्ख। ಜಡ, ಅಚೇತನ, ಬುದ್ಧಿಹೀನ, ಮೂರ್ಖ.

—उखाड़ना या खोदना = समूल नाश करना। ನಿರ್ಮೂಲಮಾಡು, ಬೇರು ಸಹಿತ ಕಿತ್ತು ಹಾಕು.

—जमना=स्थायी होना। ಬೇರೂರು, ಸ್ಥಿರವಾಗು, ನೆಲೆಗೊಳ್ಳು.

जड़ता,जडताई– स्त्री अचेतन अवस्था, मूर्खता। ಜಡತ್ವ, ಅಚೇತನ ಸ್ಥಿತಿ, ಮೂರ್ಖತನ, ಬುದ್ಧಿಹೀನತೆ.

जड़ना–सक्रि. बैठाना, पच्ची करना,किसी के विरुद्ध कुछ कहना। ಕೂಡ್ರಿಸು, ನೆಡು, ರತ್ನ ಕೆತ್ತು, ಚಾಡಿಹೇಳು.

जड़वाना,जड़ाना– सक्रि. जड़नेका काम दूसरेसे कराना। ರತ್ನ ಕೆಚ್ಚಿಸು, ಕೂಡ್ರಿಸುವ ಅಥವಾ ಕಟ್ಟುವ ಕೆಲಸ ಮಾಡಿಸು.

जड़ाई– स्त्री. जड़ने की क्रिया या मजदूरी। ರತ್ನ ಕೆತ್ತುವ ಕೆಲಸ, ಕುಂದಣದ ಕೆಲಸ, ಕೂಡ್ರಿಸುವಮ ಅಥವಾ ಆ ಕೆಲಸದ ಕೂಲಿ.

जड़ाऊ– वि जिसपर रत्नादि जड़े हों। ರತ್ನಕೆತ್ತಿದ, ರತ್ನ ಕೂಡ್ರಿಸಿದ, ರತ್ನ ಖಚಿತ.

जड़ाव– पु जड़नेका काम। ರತ್ನ ಕೆತ್ತನಿಕೆ, ಕೂಡ್ರಿಸುವ ಕೆಲಸ, ಕುಂದ

ಣದ ಕೆಲಸ.

जड़ावट– स्त्री. दे. 'जड़ाव'।

जड़ावर, जड़ावल–पु. जाड़ेमें पहनने के कपड़े। ಚಳಿಗಾಲದಲ್ಲಿ ತೊಡುವ ಬಟ್ಟೆ.

जड़ित– वि दे. 'जड़ाऊ'।

जड़िया– पु नग जड़नेवाला। ರತ್ನ ಕೆತ್ತುವವ, ಆಭರಣಗಳಲ್ಲಿ ರತ್ನ ಕೂಡ್ರಿಸುವವ, ಕುಂದಣಗಾರ.

जड़ी– स्त्री जड़ (औषध)। ಮೂಲಿಕೆ, ಔಷಧಿ.

जड़ीबूटी– स्त्री. वनौषधि। ಗಿಡಮೂಲಿಕೆ, ವನೌಷಧಿ.

जड़ुआ– वि दे 'जड़ाऊ'।

जड़ैया– स्त्री. जाड़ा देकर आनेवाला ज्वर। ಚಳಿಜ್ವರ, ಕಂಪಜ್ವರ.

जत– वि. जितना। ಎಷ್ಟು.

जतन– पु. यत्न, उपाय। ಯತ್ನ, ಉಪಾಯ.

जतनी– पु यत्न करनेवाला, चतुर। ಯತ್ನ ಮಾಡುವವ, ಚತುರ.

जतलाना, जताना– सक्रि. बताना, सूचित करना। ತಿಳಿಸು, ಸೂಚಿಸು.

जति, जती– पु. संन्यासी। ಯತಿ, ಸನ್ಯಾಸಿ.

जतुगृह– पु. लाखका बना घर, घासफूसका घर। ಅರಗಿನ ಮನೆ,ಹುಲ್ಲಿನ ಗುಡಿಸಲು.

जतेक– वि जितना। ಎಷ್ಟು.

जत्था– पु. मंडली, समूह। ಗುಂಪು, ದಲ, ಪಂಥ.

ज़था– क्रिवि. यथा, जिस प्रकार से। ಯಥಾ, ಹೇಗೆ, ಯಾವ ಪ್ರಕಾರವಾಗಿ. पु. समूह, मंडली। ಗುಂಪು, ದಲ, ಹಿಂಡು. स्त्री पूंजी। ಮೂಲಧನ, ಬಂಡವಾಳ.

जद– अव्य यदि, अगर। ಯದಿ, ಒಂದು ವೇಳೆ. क्रिवि. जब। ಯಾವಾಗ.

ज़द–स्त्री. मार, चोट, वह वस्तु जिसपर निशाना लगाया जाय, हानि। ಹೊಡೆತ, ಏಟು, ಪೆಟ್ಟು, ಗುರಿ ಹೊಡೆಯು ಬೇಕಾದ ವಸ್ತು, ಹಾನಿ

ज़दन– पु मारना, खानापीना फेंकना, खोलना, रखना, करना। ಹೊಡೆತ, ತಿನ್ನುವಿಕೆ, ಬಿಸಾಡುವಿಕೆ, ತೆರೆಯುವಿಕೆ, ಇಡುವಿಕೆ, ಮಾಡುವಿಕೆ.

जदपि– क्रिवि यद्यपि। ಯದ್ಯಪಿ, ಆದಾಗ್ಯೂ.

जदल– पु लड़ाई। ಯುದ್ಧ, ಕಾಳಗ

ज़दीद– वि नया। ಹೊಸ, ನವೀನ.

जद्द– वि ज्यादा, प्रबल। ಹೆಚ್ಚು, ಪ್ರಬಲ, ವೀರ.

जद्दबद्द– वि. खराब बात। ದುರ್ವಚನ.

जन– पु. दास, लोग। ಆಳು, ಅನುಚರ, ದಾಸ, ಜನರು.

ज़न– स्त्री. धर्मपत्नी। ಹೆಂಡತಿ, ಮಡದಿ, ಸ್ತ್ರೀ, ಅರ್ಧಾಂಗಿ.

जनक– पु. पिता। ತಂದೆ, ಅಪ್ಪ.

ज़नख़ा– पु हिजड़ा। ನಪುಂಸಕ,

ಹೆಣ್ಣಿಗ, ಹೇಡಿ.
जनता– स्त्री. सर्वसाधारण लोग। ಸಾಮಾನ್ಯ ಜನರು.
जनना– सक्रि जन्म देना। ಹಡೆ, ಹೆರು, ಜನ್ಮಕೊಡು.
जननि, जननी– स्त्री माता। ತಾಯಿ, ಮಾತೆ,
जनपद– पु. देश, सर्वसाधारण प्रजा। ದೇಶ, ಸರ್ವಸಾಧಾರಣ ಪ್ರಜೆ.
जनम– पु. जन्म, जीवन। ಜನ್ಮ, ಹುಟ್ಟು, ಜೀವನ.
जनमघूंटी– स्त्री. बच्चोंको पिलाने की अेक औषधि। ಮಕ್ಕಳಿಗೆ ಕುಡಿಸುವ ಒಂದು ಔಷಧ.
जनमना– सक्रि. जन्म देना। ಜನ್ಮಕೊಡು. अक्रि जन्म होना। ಹುಟ್ಟು, ಜನ್ಮವಾಗು.
जनमाना–सक्रि प्रसव कराना। ಹುಟ್ಟಿಸು, ಜನ್ಮಕೊಡು, ಹೆರಿಗೆ ಮಾಡಿಸು.
जनवास, जनवासी– पु. वरातियो के टिकने का स्थान। ವರಪಕ್ಷದವರು ಇಳಕೊಂಡ ಸ್ಥಳ, ದಿಬ್ಬಣ ಮನೆ.
जना– वि. पैदा किया हुआ। ಹುಟ್ಟಿಸಿದ. स्त्री. पैदाइश। ಹುಟ್ಟು, ಉತ್ಪತ್ತಿ.
जनाऊ, जनाव– सूचना, खबर। ಸೂಚನೆ, ಸುದ್ದಿ.
जनाज़ा– पु. अर्थी, शव। ಹೆಣ, ಶವ, ಹೆಣದ ಚಟ್ಟಿಗ, ಚಟ್ಟು.
जनान ख़ाना– स्त्री अंतःपुर। ಅಂತಃಪುರ.
जनाना– सक्रि. पैदा कराना, जन्ना, जताना, मालूम कराना। ಹುಟ್ಟಿಸು, ಹೆರಿಗೆ ಮಾಡಿಸು, ಹಡೆ, ಹೆರು, ಅರುಹು, ಎಚ್ಚರಿಸು, ತಿಳಿಸು.
ज़नाना– पु. अंतःपुर। ಅಂತಃಪುರ. वि. स्त्री-संबंधी, हिजड़ा। ಸ್ತ್ರೀ ಸಂಬಂಧವಾದ, ಸ್ತ್ರೀಯರ, ನಪುಂಸಕ.
जनाब– पु महोदय। ಸ್ವಾಮಿ, ಮಹಾಶಯ.
जनाव– पु. सूचना, खबर। ಸೂಚನೆ, ಎಚ್ಚರಿಕೆ, ಸುದ್ದಿ.
जनावर– पु. जानवर। ಪಶು, ದನ.
जनि– अव्य. नहीं, मत। ಅಲ್ಲ, ಬೇಡ.
जनी–स्त्री दासी, माता, स्त्री। ತೊತ್ತು, ದಾಸಿ, ಮಾತೆ, ತಾಯಿ, ಸ್ತ್ರೀ. ಹೆಂಗಸು.
जनु– क्रि. दे 'मानो'।
जनेऊ, जनेव– पु. यज्ञोपवीत,यज्ञोपवित संस्कार। ಜನಿವಾರ, ಯಜ್ಞೋಪವೀತ, ಮುಂಜಿ.
जनेत– स्त्री. वरात। ದಿಬ್ಬಣ, ಮೆರವಣಿಗೆ.
जनैया– वि जाननेवाला। ತಿಳಿದವ, ಗೊತ್ತಿದ್ದವ.
जन्नत– स्त्री. स्वर्ग। ಸ್ವರ್ಗ, ವೈಕುಂಠ
जन्म, जन्मना– दे 'जनम' 'जनमना'।
जन्मसिद्धि–वि. जन्मसे ही प्राप्त, खानि

विक। ಜನ್ಮದಿಂದಲೇ ದೊರೆತ, ಸ್ವಾಭಾವಿಕ

**जन्माना**– सक्रि. दे ' जनमाना '।

**जन्य**– वि उत्पन्न हुआ, जातीय, राष्ट्रीय। ಹುಟ್ಟಿದ, ಜಾತೀಯ, ರಾಷ್ಟ್ರೀಯ. पु हाट, निदा,संग्रास, पिता, शिव, किवदंती, सामान्य मनुष्य। ಸಂತೆ, ಪೇಟೆ, ನಿಂದೆ, ಯುದ್ಧ, ತಂದೆ,ಶಿವ, ಸುಳ್ಳುಸುದ್ದಿ, ಲೋಕವಾರ್ತೆ, ಸಾಮಾನ್ಯ ಜನ.

**जपना**– सक्रि जप करना, खा जाना। ಜಪಿಸು,ನುಂಗಿಬಿಡು, ತಿಂದುಬಿಡು.

**जपनी**– स्त्री माला। ಜಪಮಾಲೆ.

**जपा**– स्त्री अड़हुल पुष्प। ದಾಸಾಳದ ಹೂವು.

**ज़फ़र**– पु विजय। ಜಯ,ಗೆಲವು.

**जफ़ा**– स्त्री जुल्म। ಅತ್ಯಾಚಾರ, ಅನ್ಯಾಯ, ಬಲಾತ್ಕಾರ.

**जफ़ाकश**–वि सहनशील। ಸಹನಶೀಲ, ತಾಳ್ಮೆಯುಳ್ಳ.

**जफ़ीर, जफ़ील**– स्त्री सीटी, सीटीका शब्द। ಸೀಟಿ, ಸೀಪಿ, ಶಿಳ್ಳು, ಸೀಪಿಯ ಧ್ವನಿ.

**जब**– क्रिवि जिस समय। ಯಾವಾಗ, ಯಾವ ಸಮಯದಲ್ಲಿ.

**जबड़ा**– पु डाढ। ದವಡೆ, ದವಡೆ ಎಲುವು.

**ज़बर, ज़बरदस्त**– वि. बलवान। ಬಲಿಷ್ಠ, ದೃಢ, ಬಲಯುತ.

**ज़बरदस्ती**– स्त्री अन्याय। ಅನ್ಯಾಯ, ಅತ್ಯಾಚಾರ, ಜುಲುಮೆ. क्रिवि बलपूर्वक। ಬಲಪೂರ್ವಕವಾಗಿ, ಅನ್ಯಾಯದಿಂದ,ಬಲಾತ್ಕಾರದಿಂದ

**ज़बरन्**–क्रिवि बलपूर्वक। ಬಲಪೂರ್ವಕವಾಗಿ, ಬಲಾತ್ಕಾರದಿಂದ.

**ज़बरा**–वि दे. ' जबरदस्त ' पु. जीव्रा। ಝೀಬ್ರಾ.

**ज़बाँ**– स्त्री दे ' जवान '।

**ज़बाँदराज़**– वि. वढवढकर वातें करने वाला। ವಾಚಾಳ, ಅಧಿಕಪ್ರಸಂಗಿ.

**ज़बान**– स्त्री जीभ, वाणी, भाषा,वादा। ನಾಲಿಗೆ, ವಾಣಿ, ಭಾಷೆ, ಮಾತು, ಕರಾರು, ಪ್ರತಿಜ್ಞೆ.

**—खींचना** = धृष्टता पूर्ण वातें करने के लिये कठोर दंड देना। ನಾಲಿಗೆ ಕೀಳು, ದುಷ್ಟ ಮಾತುಗಳನ್ನು ಆಡಿದ್ದಕ್ಕೆ ಕಠೋರವಾದ ಶಿಕ್ಷೆಕೊಡು.

**—देना**=वचन देना। ವಚನಕೊಡು.

**—पर होना** = याद रहना। ನೆನಪಿರು.

**—पकड़ना** = वोलने न देना। ಮಾತನಾಡಗೊಡದಿರು.

**—बंद करना** = वहसमे हरा देना। ಚರ್ಚೆಯಲ್ಲಿ ಸೋಲಿಸು.

**ज़बानदराज़**– वि दे ' जबॉदराज़ '।

**ज़बान बंदी**– स्त्री. लिखा हुआ वक्तव्य आदि। ಲಿಖಿತ ಹೇಳಿಕೆ ಮುಂತಾದದ್ದು.

**ज़बानी**– वि मौखिक। ಬಾಯಿ ಮಾತಿನ, ಬಾಯಿಂದ ಹೇಳಿದ.

**जवी**– स्त्री माथा, मस्तक। ಹಣೆ,

ಲಲಾಟ, ನೊಸಲು.

ज़बून– वि. खराब । ಕೆಟ್ಟ, ದುಷ್ಟ.

ज़ब्त– वि. अधिकारसे वंचित । ಜಪ್ತಿಯಾದ, ಸ್ವಾಧೀನ ಪಡಿಸಿಕೊಂಡ.

ज़ब्ती– स्त्री. ज़ब्त होना । ಜಪ್ತಿ, ಸರಕಾರದ ವಶವಾಗುವದು.

जब्र–पु. अन्याय, ज्यादती । ಅನ್ಯಾಯ, ಬಲಾತ್ಕಾರ, ಹಿಂಸೆ, ಅತ್ಯಾಚಾರ.

जब्रन्– क्रिवि. अन्यायसे । ಅನ್ಯಾಯದಿಂದ, ಬಲಾತ್ಕಾರದಿಂದ.

जम– पु. यम । ಯಮ.

जमघट, जमघटा, जमघट्ट– पु. जमात, भीड़ । ದಟ್ಟಣೆ, ಗುಂಪು, ಜನಸಂದಣಿ.

जमदाढ़– स्त्री जमधर पु. तलवार । ಕತ್ತಿ, ಕಠಾರಿ.

जमना–अक्रि द्रव पदार्थ का गाढ़ा होना, जमा होना, उगना । ಗಟ್ಟಿಯಾಗು, ಗಡ್ಡೆಗಟ್ಟು, ನೆರೆ ಕೂಡು, ಸ್ಥಿರವಾಗು, ನೆಲೆಗೊಳ್ಳು, ಹುಟ್ಟು, ಬೆಳೆ. स्त्री यमुना । ಯಮುನಾ ನದಿ.

जमनिका– स्त्री परदा । ತೆರೆ, ಪರದೆ.

जमहाई– स्त्री. दे. ' जम्हाई ' ।

जमहाना– अक्रि जम्हाई लेना । ಆಕಳಿಸು.

जमा–वि संगृहीत । ಕೂಡಿದ, ಸಂಗ್ರಹಿಸಿದ, ಕೂಡಿಟ್ಟ, ಮಿಳಿತವಾದ, ಸಂಕಲಿತ. पु पूँजी, लगान, जोड़ । ಬಂಡವಲು, ಮೂಲಧನ, ತೆರಿಗೆ, ಜೋಡು.

जमाई– पु. दामाद । ಅಳಿಯ.

जमाअत, जमात– स्त्री कक्षा, श्रेणी, समूह । ವರ್ಗ, ಕ್ಲಾಸು, ಶ್ರೇಣಿ, ತರಗತಿ, ಗುಂಪು, ಸಮೂಹ.

ज़मानत–स्त्री. जिम्मेदारी । ಜಾಮೀನು, ಹೊಣೆ

जमाना–सक्रि द्रव पदार्थको गाढ़ा करना, ठोस करना, अच्छीतरह बैठाना, इकट्ठा करना, आरोपित करना । ಗಡ್ಡೆಗಟ್ಟಿಸು, ಗಟ್ಟಿಮಾಡು, ಸರಿಯಾಗಿ ಕೂಡ್ರಿಸು, ಒಟ್ಟುಗೂಡಿಸು, ಸಂಗ್ರಹಿಸು, ದೋಷಾರೋಪಣೆ ಮಾಡು.

ज़माना– पु समय, मुद्दत, संसार । ಕಾಲ, ವೇಳೆ, ಸಂಧಿ, ಅಧಿಕ ಸಮಯ, ಜಗತ್ತು, ಪ್ರಪಂಚ.

ज़मानासाज़– स्त्री. व्यवहारकुशल । ಚತುರ, ಧೂರ್ತ.

जमाबंदी– स्त्री. पटवारी का एक कागज़ जिसमें असामियों के लगानकी रक्में लिखी जाती हैं । ಕಂದಾಯದ ಲೆಖ್ಖ-ಪತ್ರ, ಜಮಾಬಂದಿ.

जमाल– पु. खूब सूरती । ಸೌಂದರ್ಯ.

जमाव–पु. भीड़भाड़ । ಗುಂಪು, ಸಮೂಹ, ಸಂದಣಿ.

जमावट– स्त्री. जमनेका भाव । ಕೂಡುವಿಕೆ, ಮಿಳಿತ, ಗಡ್ಡೆಗಟ್ಟುವಿಕೆ, ಹೆಪ್ಪುಗಟ್ಟುವದು.

जमावडा– पु. भीड़ । ದಟ್ಟಣೆ, ಗದ್ದಲ, ಸಮೂಹ, ಜನಸಂದಣಿ.

ज़मीं– स्त्री. दे ' ज़मीन ' ।

जमींदार– पु जमीनका अधिकारी। ಜಮೀನುದಾರ, ಭೂಸ್ವಾಮಿ.

ज़मीकंद– पु सूरन। ಸೂರಣ ಗಡ್ಡೆ, ಸ್ವರ್ಣಗಡ್ಡೆ.

ज़मीन– स्त्री भूमी, धरती। ಭೂಮಿ, ಸ್ಥಾನ, ನೆಲ, ಜಗತ್ತು.

—आसमान एक करना = बहुत बड़े बड़े उपाय करना। ಬಹಳ ಪ್ರಯತ್ನ ಮಾಡು, ವಿಶ್ವ ಪ್ರಯತ್ನಮಾಡು.

—आसमान का फर्क= अधिक अंतर। ಬಹಳ ಅಂತರ, ಅಜಗಜಾಂತರ.

—देखना = गिर पड़ना। ಬೀಳು.

ज़मीनदार– पु दे 'जमीदार'।

ज़मीनी– वि जमीन या भूमि संबंधी। ಭೂಮಿಯ ಸಂಬಂಧದ, ಲೌಕಿಕ.

ज़मीमा– पु परिशिष्ट। ಪರಿಶಿಷ್ಟ, ಪುರವಣಿ

जमीर–पु अंत.करण, विवेक, सर्वनाम। ಅಂತಃಕರಣ,ವಿವೇಕ, ಸರ್ವನಾಮ

जमुकना– अक्रि बिलकुल पास होना। ಸಮೀಪ ತರಲ್ಪಡು, ತಗಲು.

ज़मुर्रद– पु पन्ना (रत्न)। ಪಚ್ಚೆ.

जमैयत– स्त्री दे 'जमात'। मनकी शाति, सेना। ಮನಶ್ಶಾಂತಿ, ಸಂತೋಷ, ಸೈನ್ಯ, ದಂಡು.

जमोगना– सक्रि. हिसाब किताब जॉच करना, भार सौंपना, सरेखना। ಪರೀಕ್ಷಿಸು, ಲೆಕ್ಕ ನೋಡು, ತನಿಖೆ ಮಾಡು, ಒಪ್ಪಿಸು, ಮೇಲ್ವಿಚಾರಣೆ ಮಾಡು.

जम्हाई– स्त्री जॅभाइ। ಆಕಳಿಕೆ.

जम्हाना– अक्रि जॅभाई लेना। ಆಕಳಿಸು.

जम्हावरि– स्त्री दे. 'जॅभाई'।

जयत– वि बहुरूपिया, विजयी। ಬಹುರೂಪಿ, ನೋಗುಹಾಕುವವ, ವಿಜಯಿ, ಗೆದ್ದವ. पु. इंद्रका पुत्र। ಇಂದ್ರನ ಮಗ

जय–स्त्री जीत, लाभ। ಜಯ, ಗೆಲವು, ಲಾಭ.

जया– स्त्री दुर्गा, पार्वती, पताका। ದುರ್ಗಾದೇವಿ, ಪಾರ್ವತಿ, ಧ್ವಜ, ಬಾವುಟ.

जयी– वि जीतनेवाला। ವಿಜಯಿ, ಗೆಲ್ಲುವವ.

जर– पु जरा, वृद्धावस्था, जल, ज्वर। ಮುಪ್ಪು, ವೃದ್ಧಾಪ್ಯ, ಜಲ,ನೀರು, ಜ್ವರ. स्त्री दे 'जड़'।

ज़र– पु सोना, धन। ಬಂಗಾರ, ಸಂಪತ್ತು,ಐಶ್ವರ್ಯ.

जरकस, जरकसी– वि. ज़रीदार। ಜರತಾರಿಯ, ಕಲಾಬತ್ತಿನ.

ज़रखेज़– वि उपजाऊ। ಬೆಳೆಯುಳ್ಳ, ಫಲವತ್ತಾದ.

जरजर– वि. बहुत पुराना बेकाम। ಬಹಳ ಹಳೆಯ, ಜರ್ಜರಿತವಾದ, ನಿರುಪಯೋಗಿ.

जरठ– वि बुड्ढा, कठोर। ಮುದುಕ, ಕಠೋರ, ಒರಟ.

जरतार–पु सोने चाँदी इत्यादिका तार।

ಜರತಾರಿ, ಬಂಗಾರ ಬೆಳ್ಳಿಯ ತಾರು.

ज़रतुश्त– पु पारसियोंके धर्म गुरु। ಪಾರ್ಸಿಗಳ ಧರ್ಮ ಗುರು, ಪಾರ್ಸಿ ಧರ್ಮ ಪ್ರವರ್ತಕ.

ज़रद– वि पीला। ಹಳದಿ.

ज़रदा, ज़र्दा– पु. एक पक्वान्न, पानमें खानेकी एक प्रकारकी सुगंधित सुरती, पीले रंगका घोड़ा। ಒಂದು ಪಕ್ವಾನ್ನ, ಜರ್ದಾ ತಂಬಾಕು, ಹಳದೀ ಬಣ್ಣದ ಕುದುರೆ.

ज़रदार–वि. धनी। ಧನಿಕ,ಶ್ರೀಮಂತ,

ज़रदालू– पु. खूबानी नामक फल। ಸಕ್ಕರೆ ಬಾದಾಮು.

ज़रदोज़– पु कलावत्तू आदिका काम करनेवाला। ಕಸೂತಿ ಅಥವಾ ಜರದ ಕೆಲಸ ಮಾಡುವವ

ज़रदोज़ी–स्त्री. कलावत्तू आदिका काम। ಕಸೂತಿ ಅಥವಾ ಜರದ ಕೆಲಸ, ಕಲಾಬತ್ತಿನ ಕೆಲಸ.

जरन– स्त्री. जलन, ईर्ष्या। ಜಲನ, ದಾಹ, ಈರ್ಷೆ, ಮತ್ಸರ.

ज़रब–स्त्री. चोट, प्रहार, गुणा। ಪೆಟ್ಟು, ಪ್ರಹಾರ, ಹೊಡೆತ,ಪಟ್ಟು, ಗುಣಾಕಾರ.

ज़रबीला–वि चमकदार। ಹೊಳಪುಳ್ಳ, ಶೋಭೆಯುಳ್ಳ, ಸುಂದರ.

ज़रर– पु. नुकसान। ಹಾನಿ, ಕೆಡಕು, ನಷ್ಟ.

जरा– स्त्री. बुढ़ापा। ಮುಪ್ಪು, ಮುದಿತನ.

ज़रा–वि.थोड़ा। ಅಲ್ಪ, ಸ್ವಲ್ಪ, ಕೊಂಚ.

जराऊ– वि. दे. 'जड़ाऊ'।

जराना– सक्रि. जलाना, ईर्ष्या, पैदा करना। ಸುಡು, ಈರ್ಷೆ ಹುಟ್ಟಿಸು.

ज़राफ़त– स्त्री सज्जनता, हँसी मजाक। ಸೌಜನ್ಯ, ವಿನೋದ, ಹಾಸ್ಯ.

जराय,जराव– पु दे 'जड़ाव'।

जरिया– पु. दे. 'जड़िया'।

ज़रिया– पु. द्वार, संबंध, हेतु, कारण। ಮಾರ್ಗ, ಸಂಬಂಧ, ಸಾಧನ, ಹೇತು, ಕಾರಣ.

(क्रि) जरिये = के द्वारा। ಮುಖಾಂತರವಾಗಿ, ದ್ವಾರಾ, ಮೂಲಕ.

जरी– स्त्री जड़ीबूटी। ಗಿಡಮೂಲಿಕೆ. वि वृद्ध। ವೃದ್ಧ.

ज़री– स्त्री. सोने के तारोंका बना काम। ಜರತಾರಿ ಕೆಲಸ, ಬಂಗಾರದ ತಾರಿನ ಕೆಲಸ, ಕಲಾಬತ್ತಿನ ಕೆಲಸ.

जरीब– स्त्री. ज़मीन नापनेकी एक माप। ಜಮೀನಿನ ಒಂದು ಅಳತೆ.

ज़रूर– क्रिवि. अवश्य। ಅವಶ್ಯವಾಗಿ, ನಿಶ್ಚಯವಾಗಿ, ಅಗತ್ಯವಾಗಿ.

ज़रूरत– स्त्री. आवश्यकता। ಅವಶ್ಯಕತೆ, ಅಗತ್ಯ, ಕಡ್ಡಾಯ.

ज़रूरी– वि. आवश्यक, कामका। ಅವಶ್ಯಕ, ಅನಿವಾರ್ಯ, ಉಪಯೋಗವುಳ್ಳ.

जरौट– वि. दे 'जड़ाऊ'।

ज़र्क़बर्क़–वि भड़कीला। ಹೊಳೆಯುವ,

ಬೆಡಗಿನ, ರೀವಿಯ.

**जर्जर**– वि. जीर्ण । ಸವೆದ, ಜೀರ್ಣ ವಾದ, ಕ್ಷಯಿಸಿಹೋದ.

**ज़र्द**– वि पीला । ಹಳದೀವರ್ಣದ.

**जर्दा**– पु. दे. 'जरदा'।

**ज़र्र**– पु दे 'ज़रर'।

**ज़र्रा**– पु. कण । ಕಣ, ಅಣು, ಚಿಕ್ಕ ಚೂರು.

**जर्राह**– पु चीरफाड़का चिकित्सक । ಶಸ್ತ್ರ ಚಿಕಿತ್ಸಕ, ಶಸ್ತ್ರವೈದ್ಯ.

**जर्राही**– स्त्री अस्त्र चिकित्सा । ಶಸ್ತ್ರ ಚಿಕಿತ್ಸೆ, ಶಸ್ತ್ರ ವೈದ್ಯಶಾಸ್ತ್ರ.

**जलंदर**– पु एक रोग । ಜಲೋದರ ರೋಗ.

**जल**– पु. पानी । ನೀರು, ಜಲ.

**जल-अलि**– पु पानीका भँवर । ತಿರುಗಣಿ ಮಡುವು.

**जलकेलि**– स्त्री. जलक्रीडा । ಜಲಕೇಳಿ, ಜಲಕ್ರೀಡೆ.

**जलखावा**– पु. जलपान, कलेवा । ಉಪಹಾರ, ಫಲಾಹಾರ, ಮುಂಜಾನೆಯ ಊಟ, ನಾಶ್ತಾ.

**ज़लज़ला**– पु भूकंप । ಭೂಕಂಪ.

**जलतरंग**= पु. एक बाजा । ಒಂದು ವಾದ್ಯ.

**जलद,जलधर**– पु बादल । ಮೋಡ.

**जलधि**– पु समुद्र । ಸಮುದ್ರ.

**जलन**– स्त्री. ईर्ष्या, जलनेकी पीडा । ಮತ್ಸರ, ಈರ್ಷೆ, ದ್ವೇಷ, ಅಸೂಯೆ, ದಾಹ, ಪೀಡೆ, ಕಿಚ್ಚು, ಉರಿ, ಬೇಗುದಿ, ಸಂತಾಪ.

**जलना**– अक्रि झुलसना, दग्ध होना, कुढना । ಸುಡು, ಉರಿ, ಹೊತ್ತಿಕೊಳ್ಳು, ಹೊಟ್ಟೆಕಿಚ್ಚುಪಡು, ದ್ವೇಷಿಸು.

**जलेपर नमक छिड़कना**= दुखित को और कष्ट देना । ಗಾಯದ ಮೇಲೆ ಬರೆಕೊಡು, ಉರಿಯುವದರ ಮೇಲೆ ಉಪ್ಪು ಎರಚು, ದುಃಖಿತನಿಗೆ ಮತ್ತಿಷ್ಟು ತ್ರಾಸುಕೊಡು.

**जलीकटी बात**= मर्मवेधी वार्ता । ಮರ್ಮವೇಧಕ ಮಾತು, ಚುಚ್ಚು ಮಾತು

**जलपना**– अक्रि डींग मारना । ಬಡಾಯಿ ಹೇಳು, ಜಂಭ ಕೊಚ್ಚು.

**जलपान**– पु नाश्ता, कलेवा । ಫಲಹಾರ, ಉಪಹಾರ, ಅಲ್ಪಾಹಾರ.

**जलप्रपात**– पु जलपात । ದಬದಬೆ, ಜಲಪಾತ.

**जलप्लावन**– पु. पानीकी बाढ, जल-प्रलय । ನೆರೆ, ಮಹಾಪೂರ.

**जलभंवरा**– पु एक प्रकार का काला कीडा जो पानीपर बडे वेगसे दौडता है। ನೀರಿನ ಮೇಲೆ ಬಹು ವೇಗವಾಗಿ ಓಡಾಡುವ ಒಂದು ತರದ ಕಪ್ಪು ಬಣ್ಣದ ಜಲಜಂತು.

**जलमय**– वि. जलपूर्ण, पानीसे भरा हुआ । ಜಲಪೂರ್ಣ, ನೀರಿನಿಂದ ತುಂಬಿದ.

**जलयान**– पु. जहाज, नाव । ಹಡಗ,

ನಾವೆ, ದೋಣಿ

जलवा– पु तडक भड़क, शोभा, वधूके पहले पहल पतिके सामने मुँह खोलना। ಶೃಂಗಾರ, ಥಳಕು, ಠೀವಿ, ವೈಭವ, ಶೋಭೆ, ಚೆಲುವು, ವಿಜೃಂಭಣೆ, ಮದುವೆಯ ಹೆಣ್ಣು ಮದುವಣಿಗನಿಗೆ ಮೊದಲುಸಾರೆ ಬುರುಕಿಯನ್ನು ತೆಗೆದು ಮುಖ ತೋರಿಸುವಿಕೆ.

जलवाना– सक्रि. जलानेका काम दूसरे से कराना। ಸುಡಿಸು, ಉರಿಸು, ದ್ವೇಷ ಹುಟ್ಟಿಸು, ಮತ್ಸರ ಪಡಿಸು.

जलसा– पु. सभा, अधिवेशन, उत्सव। ಸಭೆ, ಸಮಾರಂಭ, ಅಧಿವೇಶನ, ಉತ್ಸವ, ಹಬ್ಬ.

जलसुत– पु कमल, मोती। ಕಮಲ, ಮುತ್ತು.

जलहर– पु. जलाशय। ಜಲಾಶಯ. वि. जल से भरा हुआ। ಜಲಮಯ, ನೀರಿನಿಂದ ತುಂಬಿದ

जलहरी– स्त्री शिवलिंग के ऊपर लटकनेवाला जलपात्र। ಅಭಿಷೇಕ ಪಾತ್ರೆ, ಶಿವಲಿಂಗದ ಮೇಲೆ ಹನಿ ಹನಿಯಾಗಿ ಬೀಳುವಂತೆ ಛಿದ್ರ ಮಾಡಿಕಟ್ಟಿದ ಪಾತ್ರೆ.

जलातन– पु क्रोधी, ईर्षालू। ಕ್ರೋಧಿ, ಸಿಟ್ಟಿನ, ಗಂಟುಮೋರೆಯ,ಸಿಡುಕು ಸ್ವಭಾವದ, ಕುನಸಿನವ.

जलाधिप– पु. वरुण। ವರುಣ.

जलाना– सक्रि. प्रज्वलित-करना, भस्म करना, झुलसना, डाह उत्पन्न करना। ಉರಿಸು, ಸುಡು, ಬೆಂಕಿ ಹಚ್ಚು, ಹೊಟ್ಟೆಕಿಚ್ಚು ಹುಟ್ಟಿಸು, ಮತ್ಸರ ಹುಟ್ಟಿಸು.

जलापा– पु. ईर्ष्या से उत्पन्न जलन। ಹೊಟ್ಟೆಕಿಚ್ಚು, ಮತ್ಸರದಿಂದುಂಟಾಗುವ ಹೊಟ್ಟೆಯುರಿ.

जलाल–पु. तेज, प्रकाश, रोब, आतंक। ಪ್ರಕಾಶ, ತೇಜಸ್ಸು, ಪ್ರಭಾವ, ಅಳುಕು, ಆತಂಕ, ದರ್ಪ.

जलावतन– पु. देशनिर्वासन का दंड। ಗಡೀಪಾರು, ದೇಶ ಬಿಟ್ಟು ಹೊರಗೆ ಹಾಕುವ ಶಿಕ್ಷೆ. वि. निर्वासित, देश से निकाला हुआ। ಗಡೀಪಾರು ಮಾಡಲ್ಪಟ್ಟ, ದೇಶಭ್ರಷ್ಟ.

जलावतनी– स्त्री देशनिर्वासन। ಗಡಿಪಾರು, ದೇಶ ಬಿಟ್ಟು ಹೊರಗೆ ಹಾಕುವದು, ದೇಶಭ್ರಷ್ಟತೆ.

जलावन– पु जलानेकी लकड़ी, ईंधन, अग्निमे जलानेसे नष्ट हुआ अंग। ಉರುವಲು, ಸೌದೆ, ಬೆಂಕಿಯಲ್ಲಿ ಸುಟ್ಟ ಭಾಗ.

जलाहल– वि जलमय। ಜಲಮಯ, ನೀರಿನಿಂದ ತುಂಬಿದ.

जलील– वि. बड़ा, बुजुर्ग। ದೊಡ್ಡ, ಶ್ರೇಷ್ಟ, ಹಿರಿಯ, ಮಾನ್ಯ.

ज़लील– वि तुच्छ, नीच, बेइज्जत, शर्मिंदा। ತುಚ್ಛ, ನೀಚ, ಕ್ಷುದ್ರ, ಮರ್ಯಾದೆಯಿಲ್ಲದ, ಮಾನಗೇಡಿ, ನಾಚಿಕೆಗೇಡಿ, ಅಪಮಾನಿತ.

जलूस– पु. दे. 'जुलूस'।

जलेबी– स्त्री एक मिठाई। ಒಂದು ಪಕ್ವಾನ್ನ, ಜಿಲೇಬಿ.

जलोका, जलौका– स्त्री. जोंक। ಜಿಗಳೆ, ಜಿಗಣೆ.

जल्द– क्रिवि फौरन, शीघ्र। ಬೇಗನೆ, ಕೂಡಲೆ, ಶೀಘ್ರವಾಗಿ, ಸರ್‍ರನೆ

जल्दबाज़– वि शीघ्रता करनेवाला। ದುಡುಕುವ, ತ್ವರೆ ಮಾಡುವ, ಅವಸರಪಡುವ, ಆತುರ ಪಡುವ.

जल्दबाजी–स्त्री शीघ्रता, जल्दी। ತ್ವರೆ, ಅವಸರ, ಆತುರ, ಗಡಿಬಿಡಿ

जल्दी– स्त्री. शीघ्रता। ತ್ವರೆ, ಶೀಘ್ರ, ಅವಸರ, ಭರ. क्रिवि शीघ्र। ಬೇಗನೆ, ಶೀಘ್ರ, ಅವಸರದಿಂದ.

जल्प– पु कथन, प्रलाप। ಕಥನ, ಮಾತು, ರಗಳೆ, ಪ್ರಲಾಪ.

जल्पक– पु वाचाल। ವಾಚಾಲ, ಮಾತುಗುಳಿ, ಹರಟುವವ.

जल्पना–अक्रि व्यर्थ की बकवाद करना, डींग मारना। ಹರಟೆಕೊಚ್ಚು, ಗಳಹು, ಜಂಭಕೊಚ್ಚು.

जल्लाद– पु वध करनेवाला, निष्ठुर व्यक्ति। ಕೊಲೆಗಡಕ, ಕಟುಕರವ, ಕ್ರೂರ.

जव– पु जौ, वेग। ಜವೆಗೋದಿ, ವೇಗ.

जवाँ– वि जवान। ತರುಣ.

जवाँमर्द– वि. वीर, बहादुर। ವೀರ, ಶೂರ, ಪರಾಕ್ರಮಿ, ಗಂಡುಗಲಿ.

जवान– वि तरुण, वीर, सिपाही। ತರುಣ, ಪ್ರಾಯುದವ, ವೀರ, ಸಿಪಾಯಿ.

जवानी– स्त्री युवावस्था। ತಾರುಣ್ಯ, ಯೌವನ.

—उतरना या ढलना= यौवनका उतार होना। ಮುದುಕನಾಗು, ಇಳಿವಯಸ್ಸಿನವನಾಗು

जवाब–पु. उत्तर। ಉತ್ತರ, ಜವಾಬು.

जवाबदेह– वि. उत्तरदायी। ಜವಾಬುದಾರ, ಹೊಣೆಗಾರ.

जवाबदेही– स्त्री उत्तरदायित्व। ಜವಾಬುದಾರಿ, ಹೊಣೆಗಾರಿಕೆ.

जवाबी– वि. जवाबका, जिसका जवाब देना हो। ಉತ್ತರದ, ಜವಾಬಿನ, ಉತ್ತರವನ್ನಪೇಕ್ಷಿಸುವ

जवार– पु आसपास का स्थान। ಸುತ್ತಲಿನ ಭೂಮಿ, ಪಕ್ಕ, ನೆರೆ.

जवारा– पु. जौका अंकुर। ಜವೆಗೋದಿಯ ಮೊಳಕೆ.

ज़वाल– पु अवनति, जंजाल। ಅವನತಿ, ಇಳಿತ, ಜಂಜಾಟ, ಸಂಕಟ, ಗೊಂದಲ, ವಿಪತ್ತು.

जवाहर, जवाहिर– पु. रत्न। ರತ್ನ, ಮಣಿ.

जवाहरात, जवाहिरात– पु रत्नराशी। ರತ್ನಗಳು, ಮಣಿಗಳ ಗುಂಪು

जशन, जश्न–पु. आनंदोत्सव, जलसा। ಆನಂದ, ಉತ್ಸವ, ಸಮಾರಂಭ. ಹಬ್ಬ, ಜಾತ್ರೆ.

जस– पु. यश, कीर्ति । ಯಶ, ಕೀರ್ತಿ क्रिवि जैसा । ಅಂತೆ, ಹಾಗೆ.

जसीम– वि स्थूल शरीरवाला । ಕೊಬ್ಬಿದ ದೇಹದ, ಸ್ಥೂಲ ಶರೀರದ.

जस्ता–पु. एक तरहकी धातु । ಸತುವು, ' ಜಿಂಕ್ '.

जहँ– क्रिवि. जहाँ । ಎಲ್ಲಿ, ಯಾವ ಸ್ಥಳದಲ್ಲಿ.

जहँडना, जहँडाना–अक्रि हानि उठाना, धोखेमें पड़ना । ಹಾನಿ ಮಾಡಿಕೊಳ್ಳು, ನಷ್ಟ ಹೊಂದು, ಸಂಕಟದಲ್ಲಿ ಬೀಳು, ಮೋಸಹೋಗು.

जहद–स्त्री. प्रयत्न, परिश्रम । ಪ್ರಯತ್ನ, ಪರಿಶ್ರಮ, ಕಷ್ಟ.

जहदा– पु. कीचड़, दलदल । ಕೆಸರು, ಜವುಗು ನೆಲ, ಕೊಳಚೆ.

ज़हन– पु बुद्धि, समझ । ಬುದ್ಧಿ, ತಿಳುವಳಿಕೆ.

जहना– सक्रि. त्यागना, नष्ट करना । ತ್ಯಜಿಸು, ಹಾಳುಮಾಡು.

जहन्नुम– पु. नरक । ನರಕ.

ज़हमत– स्त्री. झंझट, कष्ट । ತೊಡಕು, ಸಂಕಟ, ಕಷ್ಟ.

ज़हर– पु. विष । ವಿಷ, ನಂಜು.

—उगलना = मर्म भेदी या कटु बात कहना । ಮರ್ಮಭೇದಕ ಮಾತ ನಾಡು.

—का घूँट पीना = किसी अनुचित बातको देखकर क्रोधको मन ही मन दबा रखना । ಅಪಮಾನ ಸಹಿಸು, ಸಿಟ್ಟು ತಾಳಿಕೊಳ್ಳು.

ज़हरदार– वि. जिसमें जहर हो । ವಿಷವುಳ್ಳ, ನಂಜಿನ.

ज़हरबाद–पु. एक प्रकारका बहुत भयंकर और जहरीला फोड़ा । ಒಂದು ಬಗೆಯ ವಿಷದ ಕುರು.

ज़हरीला– वि. विषमय । ವಿಷವುಳ್ಳ, ವಿಷದ, ನಂಜಿನ.

ज़हाँ–क्रिवि. जिस जगह । ಎಲ್ಲಿ, ಯಾವ ಸ್ಥಳದಲ್ಲಿ. पु. जहान, संसार । ಜಗತ್ತು, ಪ್ರಪಂಚ, ಲೋಕ.

जहाँगीर– वि. दुनियाको जीतनेवाला । ದಿಗ್ವಿಜಯಿ, ಜಗತ್ತನ್ನು ಗೆಲ್ಲುವವ.

जहाँदीद– वि. तजरुबेकार । ಅನುಭವಿಕ, ನುರಿತ.

जहाँपनाह– पु. संसार का रक्षक । ಜಗತ್ತಿನ ರಕ್ಷಕ, ರಾಜಾಧಿರಾಜ.

जहाज़–पु. जलयान । ಹಡಗ,ಜಹಜು.

जहाज़ी– वि. जहाज से संबंध रखनेवाला । ಹಡಗದವ, ಹಡಗದ ಸಂಬಂಧದ.

जहान– पु. दुनिया । ಜಗತ್ತು, ಪ್ರಪಂಚ.

जहालत– स्त्री. मूर्खता । ಮೂರ್ಖತನ, ಅಜ್ಞಾನ, ಅವಿವೇಕ.

जहिया– क्रिवि. जब । ಯಾವಾಗ.

जहीं– क्रिवि. जिस स्थानपर । ಯಾವ ಸ್ಥಾನದಲ್ಲಿ.

ज़हीन– वि. बुद्धिमान । ಬುದ್ಧಿವಂತ, ವಿವೇಕಿ, ಜಾಣ.

जहीर– पु. सहायक। ಸಹಾಯಕ.

ज़हूर– पु प्रकाश, रौनक, प्रकाशन। ಪ್ರಕಾಶ, ಬೆಳಕು, ಪ್ರಭೆ, ಪ್ರಕಾಶನ, ಹೊರಬೀಳುವಿಕೆ.

जहेज़– पु दहेज। ವರದಕ್ಷಿಣೆ.

जँागड़ा–पु. भाट। ಭಟ್ಟಂಗಿ, ಚಾರಣ, ವಂದಿ ಮಾಗಧ.

जँागर– पु. शक्ति, अन्न निकाला हुआ डंटल। ಶಕ್ತಿ, ಸಾಮರ್ಥ್ಯ, ಕಣಿಕೆ

जँागली, जँागलू– वि. जंगली। ಹಳ್ಳಿಗಾಡ, ಕಾಡ, ಒರಟಾದ

जाँघ– स्त्री. जंघा। ತೊಡೆ.

जाँघिया– पु लंगोट विशेष। ಒಂದು ತರದ ಲಂಗೋಟಿ,ಲಾಂಗು,ಚಡ್ಡಿ.

जाँच– स्त्री. परीक्षा, तहकीकात। ಪರೀಕ್ಷೆ, ಶೋಧನೆ.

जाँचक– पु याचक। ಭಿಕ್ಷುಕ, ಯಾಚಕ.

जाँचना–सक्रि परीक्षा करना, मॉगना। ಪರೀಕ್ಷಿಸು, ಶೋಧಿಸು, ವಿಮರ್ಶಿಸು, ಬೇಡು, ಪ್ರಾರ್ಥಿಸು.

जाँत,जाँता–पु चक्की। ಬೀಸುವಕಲ್ಲು.

जाँब, जाँबवत, जाँबु– पु. जामुन। ನೇರಿಲ ಹಣ್ಣು.

जाँवत– क्रिवि जितना। ಎಷ್ಟು.

जाँवर– पु. प्रस्थान, गमन। ಪ್ರಸ್ಥಾನ, ಹೊರಡುವಿಕೆ, ಗಮನ.

जा– सर्व. जो। ಯಾವ. वि उचित। ಉಚಿತ, ಯೋಗ್ಯ. स्त्री माता, देवरानी। ತಾಯಿ, ಸಹೋದರನ ಹೆಂಡತಿ

जा– स्त्री जगह, स्थान। ಸ್ಥಳ,ಸ್ಥಾನ, ಎಡೆ, ಜಾಗ

जाई– स्त्री कन्या। ಮಗಳು, ಕನ್ಯೆ.

जाकड़– पु लौटा सकने की शर्तपर माल लाना। ಮನಸ್ಸಿಗೆ ಬರದಿದ್ದರೆ ತಿರುಗಿ ಕೊಡುವ ಕರಾರಿನಿಂದ ಮಾಲು ತರುವದು

जाखिनी– स्त्री. यक्षिणी। ಯಕ್ಷಿಣಿ.

जाग– पु यज्ञ। ಯಜ್ಞ. स्त्री जागरण, जगह। ಜಾಗರಣೆ, ಎಚ್ಚರಾಗಿರುವಿಕೆ, ನಿದ್ದೆ ಕೆಡುವಿಕೆ, ಸ್ಥಳ.

ज़ाग– पु कौआ। ಕಾಗೆ.

जागना– अक्रि सोकर उठना, सावधान होना, प्रसिद्ध होना, चमक उठना, समृद्ध होना। ಎಚ್ಚರಾಗು, ಏಳು, ಉದಯಿಸು, ಜಾಗರೂಕನಾಗು, ಪ್ರಸಿದ್ಧವಾಗು, ಪ್ರಕಟವಾಗು, ಹೊಳೆ,ಪ್ರಕಾಶಿಸು,ಸಮೃದ್ಧವಾಗು

जागरण– पु. जागनेकी क्रिया। ಎಚ್ಚರಾಗಿರುವಿಕೆ, ನಿದ್ದೆಗೆಡುವಿಕೆ, ಜಾಗರಣೆ.

जागा– स्त्री जगह। ಸ್ಥಳ, ಸ್ಥಾನ.

जागीर–पु राज्यकी ओरसे मिली हुई जमीन। ಇನಾಮು, ಉಂಬಳಿ.

जागीरदार– पु. वह जिसे जागीर मिली हो, अमीर। ಇನಾಮುದಾರ, ಜಹಗೀರುದಾರ, ಉಂಬಳಿದಾರ.

ज़ाजम– स्त्री दे 'जाजिम'

जाजरा– वि जर्जर। ಜರ್ಜರವಾದ,

ಹರಿದ.

**जाज़रूर**– पु. पाखाना । ಶೌಚಕೂಪ, ಪಾಯಖಾನೆ, ಕಕ್ಕಸ.

**जाजिम**– स्त्री. गलीचा । ರತ್ನಗಂಬಳಿ, ಜಮಖಾನೆ.

**जाज्वल्यमान**– वि. प्रकाशमय । ಹೊಳೆಯುವ, ಪ್ರಕಾಶಿಸುವ.

**जाठ**– पु. कोल्हूका लट्ठा, तालावके वीचमें गाढा हुआ लट्ठा । ಗಾಣದ ದಿಂಡು ಅಥವಾ ಅಚ್ಚು, ಗಾಣದ ಕಣೆ, ಕೆರೆಯ ನಡುವೆ ಹುಗಿದ ಕಂಬ.

**जाड़, जाड़ा**– पु. शीत, शीतकाल । ಚಳಿ, ಥಂಡಿ, ಶೀತ, ಚಳಿಗಾಲ.

**जात**– स्त्री. जाति । ಜಾತಿ. पु. पुत्र । ಮಗ, ಪುತ್ರ. वि. उत्पन्न । ಹುಟ್ಟಿದ.

**ज़ात**–स्त्री. शरीर, देह, जाति । ಶರೀರ, ದೇಹ, ಜಾತಿ.

**जातक**– पु. वच्चा, भिक्षुक, वह ग्रंथ जिसमें वुद्धदेवके एक एक जन्मका विवरण रहता है, वह ग्रंथ जिसमें उत्पन्न हुए वालकके शुभाशुभ लक्षण का वर्णन रहता है । ಮಗು, ಕೂಸು, ಭಿಕ್ಷುಕ, ಬುದ್ಧದೇವನ ಹಿಂದಿನ ಜನ್ಮದ ಕತೆಗಳ ಗ್ರಂಥ, ಜಾತಕ, ಜನ್ಮಕುಂಡಲಿ.

**जातकर्म**– पु. जन्मसंस्कार । ಜನ್ಮಸಂಸ್ಕಾರ.

**जातपाँत, जातिपाँति**– स्त्री. जाति, विरादरी । ಜಾತಿ, ಅಣ್ಣತಮ್ಮಿಕೆ, ಆಪ್ತತ್ವ, ಬಂಧುತ್ವ.

**जाति**– स्त्री. गोत्र, कुल, धर्म, चमेली, विभाग । ಗೋತ್ರ, ಕುಲ, ಧರ್ಮ, ಜಾತಿ, ಜಾಜಿ ಮಲ್ಲಿಗೆ, ವಿಭಾಗ.

**जाती**– स्त्री. चमेली का फूल, ऑवला, मालती, जायफल । ಜಾಜಿ ಹೂ, ನೆಲ್ಲಿಕಾಯಿ, ಮಾಲತಿ, ಜಾಜೀಕಾಯಿ. पु. हाथी । ಆನೆ.

**ज़ाती**–वि. व्यक्तिगत, निजका । ವ್ಯಕ್ತಿಗತ, ಸ್ವಂತದ, ತನ್ನ.

**जातीय**– वि. जाति संवंधी । ಜಾತಿ ಸಂಬಂಧವಾದ.

**जात्रा**– स्त्री यात्रा । ಯಾತ್ರೆ, ಪ್ರವಾಸ, ಜಾತ್ರೆ.

**जादा**– वि अधिक । ಅಧಿಕ, ಹೆಚ್ಚಿನ.

**ज़ादा**–वि. उत्पन्न, जन्मा हुआ । ಉತ್ಪನ್ನವಾದ, ಹುಟ್ಟಿದ.

**जादू**– पु. इंद्रजाल । ಇಂದ್ರಜಾಲ, ಜಾದು, ಮಾಟಗಾರಿಕೆ.

**जादूगर**–पु. जादू करनेवाला । ಜಾದೂಗಾರ, ಮೋಹಿನಿವಿದ್ಯೆ ಬಲ್ಲವ, ಮಾಟಗಾರ, ಮಂತ್ರವಾದಿ.

**जादूगरनी**– स्त्री. जादूगरकी स्त्री । ಜಾದೂಗಾರನ ಹೆಂಡತಿ, ಮಾಟಗಾತಿ.

**जान**–स्त्री. जानकारी, समझ, अनुमान । ತಿಳಿವಳಿಕೆ, ಜ್ಞಾನ, ಅಂದಾಜು, ಕಲ್ಪನೆ. वि. ज्ञानवाला । ಜ್ಞಾನಿ, ಬುದ್ಧಿವಂತ.

दस्तकारी– स्त्री. हाथ की कारीगरी । ಶಿಲ್ಪ, ಕೈ ಗಾ ರಿ ಕೆ, ಕೈಕೆಲಸ, ಕೈವಾಡ.

दस्तखत– पु हस्ताक्षर । ಹಸ್ತಾಕ್ಷರ, ಸಹಿ, ಕೈಬರೆಹ, ರುಜು.

दस्तगीर– स्त्री. सहायक, आश्रयदाता । ಸಹಾಯಕ, ಆಶ್ರಯದಾತ.

दस्तगीरी– स्त्री. सहायता । ನೆರವು, ಸಹಾಯ.

दस्तपनाह– पु. कोयला आदि उठाने का चिमटा । ಇಕ್ಕಳ,ಚಿಮುಟ.

दस्तबरदार– वि किसी वस्तु से अपना अधिकार छडा लेनेवाला । ಯಾವ ದೊಂದು ವಸ್ತುವಿನ ಮೇಲಿನ ಅಧಿಕಾರ ತ್ಯಾಗ ಮಾಡುವವ, ತೊರೆಯುವವ.

दस्तबरदारी– स्त्री. स्वत्वत्याग । ಹಕ್ಕು ಬಿಡುವದು, ಸ್ವತ್ವಬಿಡುವದು, ಕೈ-ಬಿಡುವದು, ಪರಿತ್ಯಾಗ.

दस्तबस्ता– वि. हाथ बाधे हुये, हाथ जोडकर। ಕೈಕಟ್ಟಿದ,ಕೈಜೋಡಿಸಿದ, ಕರಬದ್ಧವಾದ.

दस्तमाल– पु रुमाल । ಕೈವಸ್ತ್ರ.

दस्तयाव– वि प्राप्त । ಪ್ರಾಪ್ತ, ದೊರೆತ.

दस्तरखान– पु. खाना चुनने का वस्त्र । ಊಟದ ಮೇಜಿನ ಮೇಲೆ ಹಾಸುವ ಬಟ್ಟೆ.

दस्ता– पु. मूठ, दल, गुच्छ, चौबीस कागज । ಹಿಡಿ, ಹಿಡಿಕೆ, ದಲ, ಗುಚ್ಛ, ದಸ್ತು.

दस्ताना– पु. हाथका मोजा। ಕೈಚೀಲ, ಕೈಗವಸಣಿಗೆ.

दस्तार– स्त्री पगडी । ಪೇಟಾ, ಮುಂಡಾಸು, ರುಮಾಲು.

दस्तावर– वि. दस्त लानेवाला । ರೇಚಕ, ಬೇಧಿಯನ್ನುಂಟುಮಾಡುವ. ಹೊಟ್ಟೆ ಝಾಡಿಸುವ.

दस्तावेज़– पु. वह कागज जिससे किसी व्यवहार की शर्तें लिखी हो, ऋणपत्र । ದಸ್ತೈವಜು, ಪ್ರತಿಜ್ಞಾ-ಪತ್ರ, ಋಣಪತ್ರ.

दस्ती– वि. हाथका। ಕೈಯ, ಕೈಯಿಂದದಾದ, ಕೈಗೆ ಸಂಬಂಧಿಸಿದ स्त्री मूठ, मशाल । ಹಿಡಿಕೆ, ಕಾವು, ದೀ-ವಟಿಗೆ, ಪಂಜು, ಕೈದೀವಿಗೆ.

दस्तूर– पु. रीति, रस्म, प्रथा। ರೀತಿ, ವಿಧಿ, ಪದ್ಧತಿ, ವಾಡಿಕೆ, ಸಂಪ್ರ-ದಾಯ.

दस्तूरी– स्त्री. कमीशन। ಕಮೀಶನ್, ದಸ್ತೂರಿ, ದಲಾಲಿ.

दह– पु. कुंड । ಕುಂಡ, ಹೊಂಡ, ಮಡುವು. स्त्री. ज्वाला, लपट । ಜ್ವಾಲೆ, ಬೆಂಕಿಯ ಶಿಖೆ. वि. दस। ಹತ್ತು, ದಶ.

दहक– स्त्री ज्वाला। ಜ್ವಾಲೆ, ಉರಿ.

दहकना– अक्रि. तपना, जलना । ಕಾಯು, ಉರಿ, ಸುಡು.

दहकाना– सक्रि. जलाना। ಸುಡು, ಹೊತ್ತಿಸು, ಉರಿಸು, ಕೆರಳಿಸು.

**दहडदहड**– क्रिवि प्रखरतासे। ಪ್ರಖರವಾಗಿ, ಧಗಧಗನೆ.

**दहन**– पु जलने या जलाने की क्रिया, अग्नि। ದಹನ, ಸುಡುವಿಕೆ, ಅಗ್ನಿ, ಬೆಂಕಿ, ಉರಿ.

**दहना**– सक्रि जलाना, चिढाना। ಸುಡು, ಸಿಟ್ಟಿಗೆಬ್ಬಿಸು, ರೇಗಿಸು, ತ್ರಾಸ ಕೊಡು. अक्रि जलना, संतप्त होना। ಸುಡು, ಉರಿ, ಸಿಟ್ಟಿಗೇಳು, ರೇಗು. वि. दाहिना। ಬಲಗಡೆಯ.

**दहनि**–स्त्री जलन। ದಹನ, ಸುಡುವಿಕೆ

**दहपट**– वि कुचला हुआ, विध्वस्त। ತುಳಿದ, ಮರ್ದನ ಮಾಡಿದ, ನಾಶ ಮಾಡಿದ, ಹಾಳಾದ.

**दहपटना**– सक्रि कुचलना, ध्वस्त करना। ತುಳಿ, ನಾಶಮಾಡು, ಧ್ವಂಸ ಮಾಡು

**दहर**– पु. दे 'दह'।

**दहरना, दहलना**– अक्रि डरना, कॉपना। ಅಂಜು, ಗಾಬರಿಯಾಗು, ನಡುಗು. सक्रि डराना, भयसे कॅपाना। ಅಂಜಿಸು, ಅಂಜಿಕೆಯಿಂದ ನಡುಗಿಸು

**दहल**– स्त्री. भय से कॉप उठना। ನಡುಕ, ಕಂಪನ.

**दहला**– पु. थाला, दस विंदियों का ताशका पत्ता। ಗಿಡ ಹಚ್ಚುವ ತಗ್ಗು, ಪಾಲೆ, ಆಲವಾಲ, ಹತ್ತು ಚುಕ್ಕೆಗಳುಳ್ಳ ಇಸ್ಪೀಟಿನ ಎಲೆ, ದಶಕ.

**दहलाना**– सक्रि. डराना, कंपा देना। ಅಂಜಿಸು, ನಡುಗಿಸು, ಅದುರಿಸು.

**दहलीज़**– स्त्री देहरी। ಹೊಸ್ತಿಲು, ಹೊಸಲು.

**दहशत**– स्त्री. डर। ಹೆದರಿಕೆ, ಭಯ, ಗಾಬರಿ.

**दहा**– पु ताजिया, मुहर्रम की १ से १० तारीख तक का समय। ಮೊಹರಂ ಹಬ್ಬದಲ್ಲಿ ಮೆರೆಯಿಸುವ ಕಾಗದದ ಡೋಲಿ, ಮೊಹರಮ್ಮಿನ ೧೦ ದಿನಗಳು.

**दहाई**– स्त्री दसका समूह, अंकों की लिखावट मे दाहिनी ओर से दूसरा स्थान। ಹತ್ತರ ಸಮೂಹ, ದಹಮುಸ್ಥಾನ, ದಶಕ.

**दहाड़**– स्त्री गरज, चीत्कार। ಗರ್ಜನೆ, ಚೀತ್ಕಾರ, ಚೀರಾಟ, ಡುರುಕಿ, ಬೊಬ್ಬಾಟ.

**दहाडना**– अक्रि गरजना, जोर जोर से रोना, चिल्लाना। ಗರ್ಜಿಸು, ಅರ್ಭಟಿಸು, ಡುರುಕಿಹಾಕು, ಗಟ್ಟಿಯಾಗಿ ಅಳು, ಚೀರು, ಬೊಬ್ಬೆಯಿಡು.

**दहाना**– पु चौडा मुख, द्वार, वह स्थान जहॉ एक नदी दूसरी नदी या समुद्र में गिरती है, मोरी। ಅಗಲವಾದ ಮುಖ, ದ್ವಾರ, ಒಂದು ನದಿಯು ಮತ್ತೊಂದು ನದಿಗೆ ಅಥವಾ ಸಮುದ್ರಕ್ಕೆ ಕೂಡುವ ಸ್ಥಳ, ಸಂಗಮ, ನದೀಮುಖ, ಮೋರಿ, ಬಚ್ಚಲು, ಚರಂಡಿ

दहिना– वि दायाँ, अनुकूल। ಬಲಗಡೆಯ, ಅನುಕೂಲ.

दहिने– क्रिवि दाहिनी तरफ। ಬಲಗಡೆಯ.

—होना = अनुकूल होना। ಅನುಕೂಲವಾಗು.

—बाएँ = दोनों ओर। ಎರಡೂಕಡೆಗೆ.

दही– पु. जामन डालकर जमाया हुआ दूध। ಮೊಸರು, ದಧಿ.

दहुँ– अव्य. अथवा, शायद। ಅಥವಾ, ಬಹುಶರವಾಗಿ, ಒಂದುವೇಳೆ.

दहेडी– स्त्री. दही रखने का पात्र। ಮೊಸರು ಇಡುವ ಪಾತ್ರೆ, ಮೊಸರು ಇಡುವ ಮಡಿಕೆ.

दहेज़– पु दायजा। ವರದಕ್ಷಿಣೆ

दहेला– वि दग्ध, दुःखी। ಸುಟ್ಟ, ದಗ್ಧ, ಬೆಂದ, ದುಃಖಿತ, ಸಂತಪ್ತ.

दाँ– पु बार, दफा। ಸರತಿ, ಆವರ್ತಿ, ಬಾರಿ, ಸಲ.

दाँ– वि. ज्ञाता। ಅರಿತವ, ಬಲ್ಲವ, ತಿಳಿದವ, ತಜ್ಞ.

दाँक– स्त्री. दहाड। ಗರ್ಜನೆ.

दाँकना– अक्रि दहाड़ना। ಗರ್ಜಿಸು, ಅರಚು, ಮೊರೆ.

दाँग– पु डंका, टीला। ಭೇರಿ,ನಗಾರಿ, ದಿನ್ನೆ, ದಿಬ್ಬ, ತೆವರು. स्त्री दिशा। ದಿಕ್ಕು.

दाँज– स्त्री. समता। ಸಮತೆ, ಸಾಮ್ಯ, ಜೋಡು.

दाँटना– सक्रि दंड देना। ದಂಡಿಸು, ಶಿಕ್ಷಿಸು.

दाँत– पु दंत, दशन। ಹಲ್ಲು, ದಂತ.

—खट्टे करना = हराना, बहुत व्यग्र करना। ಸೋಲಿಸು, ನಾಕು ಸಾಕು ಮಾಡು.

—पीसना या चबाना = क्रोधसे दाँत पीसना। ಕ್ರೋಧದಿಂದ ಹಲ್ಲು ಕಡಿ.

—तोडना = हराना, दंड देना। ಸೋಲಿಸು, ಶಿಕ್ಷಿಸು.

—दाँतों तले उँगली दबाना = आश्चर्य या दुःख प्रकट करना। ಆಶ್ಚರ್ಯಚಕಿತನಾಗು,ವಿಸ್ಮಿತನಾಗು, ದುಃಖ ಪ್ರಕಟಿಸು.

—में तिनका लेना या दबाना = क्षमा-याचना करना। ಕ್ಷಮೆ ಬೇಡು, ಶರಣಾಗತನಾಗು.

दाँता– पु. दाँत जैसा कँगूरा। ಗರಗನದ ಹಲ್ಲು, ಹಲ್ಲಿನಂಥ ಚೂಪಾದ ವಸ್ತು.

दाँता किटकिट– स्त्री. बकझक, गाली-गलौज, झगडा। ಬಡಬಡಿಕೆ, ಬೈದಾಟ, ಜಗಳ.

दाँति– स्त्री. इंद्रिय-निग्रह। ಇಂದ್ರಿಯ ನಿಗ್ರಹ.

दाँती– स्त्री. हँसिया, दंतपंक्ति, घाटी। ಕುಡುಗೋಲು, ದಂತಪಂಕ್ತಿ, ಹಲ್ಲುಗಳ ಸಾಲು, ಘಟ್ಟ,ಕಣಿವೆ.

दाँय– स्त्री अनाजको बैलो इत्यादिसे रौंदवाने का काम। ರಾಶಿ ತುಳಿಸು

ವದು, ಒಕ್ಕಲು.

दाँव– पु घात, मौक़ा, उपाय, वार। ಸಂಧಿ, ವೇಳೆ, ಉಪಾಯ, ಯುಕ್ತಿ, ತಂತ್ರ, ಸರತಿ, ಆವರ್ತಿ.

—चलना = जीतना। ಗೆಲ್ಲು.

दाँवना– सक्रि दाँयँ करना। ತೆನೆಗಳನ್ನು ತುಳಿಸು, ಕಾಳು ಒಕ್ಕು.

दाँवरी– स्त्री रस्सी, डोरी। ಹಗ್ಗ, ದಾರ.

दाइ– पु दे. 'दाँय'।

दाईं– वि. दाहिनी। ಬಲಗಡೆಯ. स्त्री. बारी। ಆವರ್ತಿ, ಸರತಿ, ಬಾರಿ.

दाई– स्त्री प्रसव करानेवाली स्त्री, धाय। ಸೂಲಗಿತ್ತಿ, ದಾದಿ

दाउँ– पु दे 'दाव'।

दाऊ– पु. बड़ा भाई, बलराम। ಅಣ್ಣ, ಬಲರಾಮ.

दाक्षिणात्य– वि. दक्षिण का। ದಕ್ಷಿಣದ. पु. दक्षिण का निवासी। ದಕ್ಷಿಣದ ನಿವಾಸಿ.

दाख, दाखि– स्त्री मुनक्का, अंगूर। ದ್ರಾಕ್ಷೆ, ದ್ರಾಕ್ಷೆ ಹಣ್ಣು.

दाख़िल– वि प्रविष्ट, शरीक। ಪ್ರವೇಶಿಸಿದ, ಸೇರಿದ, ಒಳಹೊಕ್ಕ, ಕೂಡಿದ, ಮಿಳಿತ, ಸೇರಿದ.

दाख़िल ख़ारिज– पु किसी जायदाद के एक हकदार का नाम काटकर उसकी जगह दूसरे का नाम लिखना। ಯಾವದೊಂದು ಸಂಪತ್ತಿನ ಅಧಿಕಾರದ ಖಾತೆಯಲ್ಲಿಯ ಒಬ್ಬನ ಹೆಸರನ್ನು ಅಳಿಸಿ ಮತ್ತೊಬ್ಬನ ಹೆಸರನ್ನು ನಮೂದಿಸುವದು.

दाख़िलदफ़्तर– वि दफ़्तर में विचार न करने योग्य (कागज)। ಕಚೇರಿಯಲ್ಲಿ ವಿಚಾರ ಮಾಡಲು ಅಯೋಗ್ಯವೆಂದೆನಿಸಿ ಫೈಲು ಮಾಡಲ್ಪಟ್ಟ

दाख़िला– पु प्रवेश। ಪ್ರವೇಶ, ಸೇರಿಸುವಿಕೆ.

दाग– पु दाह क्रिया, जलन, जलने की क्रिया। ಅಗ್ನಿ ಸಂಸ್ಕಾರ, ದಹನ, ಸುಡುವದು, ಉರಿ, ಹೊಟ್ಟೆಕಿಚ್ಚು.

दाग़– पु धब्बा, कलंक, जलने का चिह्न। ಕಲೆ, ಕಲಂಕ, ದೋಷ, ಬರೆ, ಚಿಹ್ನೆ.

दागना– सक्रि जलना, बंदूक आदि चलाना। ಸುಡು, ಬರೆ ಕೊಡು, ಗುಂಡು ಹಾರಿಸು.

दाग़बेल– स्त्री. सड़क बनाने या नीव खोदने आदि के लिये खोदकर लगाया गया निशान। ದಾದಿಯನ್ನು ಸರಿಪಡಿಸುವದಕ್ಕಾಗಿ ಅಥವಾ ವಾಯ ಹಾಕುವದಕ್ಕಾಗಿ ಗುದ್ದಲಿಯಿಂದ ಅಗಿದು ಮಾಡಿದ ಗೆರೆ.

दाग़ी– वि. जिसपर दाग हो, दोषयुक्त। ಕಲೆಯಾದ, ಚುಕ್ಕೆಗಳುಳ್ಳ, ಬರೆ ಹಾಕಿದ, ಕಲಂಕಿತ, ದೋಷಯುಕ್ತ.

दाघ– स्त्री जलन, गर्मी। ದಾಹ, ಸೆಕೆ, ಕಾವು, ಮತ್ಸರ

दाजन, दाझन– स्त्री जलन, पीड़ा,

ಈರ್ಷ್ಯೆ। ದಾಹ, ಪೀಡೆ, ಮತ್ಸರ, ಅಸೂಯೆ, ಹೊಟ್ಟೆಕಿಚ್ಚು.

दाजना, दाझना– अक्रि. जलना । ಸುಡು, ಅಸೂಯೆಪಡು. सक्रि जलाना । ಸುಡು, ಬೆಂಕಿಹಚ್ಚು.

दाड़स– पु एक प्रकारका सर्प । ಒಂದು ತರದ ಹಾವು

दाडिम– पु अनार । ದಾಳಿಂಬ.

—प्रिया= तोता । ಗಿಳಿ.

दाढ़– स्त्री. गर्जन, जबड़े के भीतर के बड़े दाँत। ಗರ್ಜನೆ, ದವಡೆಯ ಹಲ್ಲು.

दाढ़ना– सक्रि जलाना, संतप्त करना। ಸುಡು, ಬೆಂಕಿ ಹಚ್ಚು, ತ್ರಾಸ ಕೊಡು, ಪೀಡಿಸು

दाढ़ी– स्त्री ठुड्डी तथा ठुड्डीपरके बाल । ಗಡ್ಡ, ಗಡ್ಡ, ದಾಢಿ.

दाढ़ीजार– पु. दाढ़ी जला हुआ, स्त्रीयो की एक गाली । ಗಡ್ಡ ಸುಟ್ಟ, (ಸ್ತ್ರೀಯರ ಒಂದು ಬೈಗಳು.)

दात– वि खण्डित, शुद्ध । ಕಡಿಯಲ್ಪಟ್ಟ, ಶುದ್ಧ, ಪವಿತ್ರ पु दान। ದಾನ.

दाता, दातार– पु देनेवाला । ಕೊಡುವವ, ದಾನ ಮಾಡುವವ, ದಾತೃ.

दातुन, दातून, दातौन– स्त्री, दाँत साफ करने के लिये नीम आदि की गीली लकड़ी, दंत धावन । ಹಲ್ಲು ಉಜ್ಜುವ ಕಡ್ಡಿ, ಬ್ರಷ್, ಹಲ್ಲು ತಿಕ್ಕುವ ಕ್ರಿಯೆ.

दात्री– स्त्री. देनेवाली, हंसिया । ದಾನ ಮಾಡುವವಳು, ಕೊಡುವವಳು, ಕುಡುಗೋಲು.

दाद– स्त्री. एक चर्मरोग, न्याय । ಗಜಕರ್ಣ, ನ್ಯಾಯ. वि दत्त, दिया हुआ । ಕೊಟ್ಟ.

दादनी– स्त्री पेशगी दी गयी रकम, कर्ज । ಮುಂಗಡ ಕೊಟ್ಟ ಹಣ, ಸಾಲ, ತಗಾಯಿ.

दादस– स्त्री सास की सास। ಅತ್ತೆಯ ಅತ್ತೆ.

दादा– पु. पितामह, पिता, बड़ा भाई, एक आदर सूचक शब्द। ಅಜ್ಜ, ತಂದೆಯ ತಂದೆ, ತಂದೆ, ಹಿರಿಯ ಅಣ್ಣ, ಆದರ ಸೂಚಕ ಶಬ್ದ.

दादी– स्त्री. पितामही । ತಂದೆಯ ತಾಯಿ, ಅಜ್ಜಿ. पु. न्याय चाहने वाला । ನ್ಯಾಯ ಬೇಡುವವ.

दादु– स्त्री. दद्रु । ಗಜಕರ್ಣ.

दादुर– पु. मेंढक । ಕಪ್ಪೆ.

दाध– स्त्री जलन, ताप। ದಾಹ, ತಾಪ, ದುಃಖ.

दाधना– सक्रि जलाना । ಸುಡು.

दान– पु देनेका कार्य, खैरात, त्याग, महसूल, हाथी का मद । ಕೊಡುವದು, ದಾನ, ತ್ಯಾಗ, ಸುಂಕ, ತೆರಿಗೆ, ಆನೆಯ ಮದ.

दाना–वि. अन्नका बीज, मनका, चबेना। ಧಾನ್ಯ, ಬೀಜ, ಕಾಳು, ಮಣಿ, ಹುರಿಗಾಳು.

दाने दाने को तरसना= अन्न न मिलना। ಅನ್ನ ಸಿಗದಾಗು, ಹೊಟ್ಟೆ ತುಂಬು ವದು ಕಠಿಣವಾಗು.

दाने दाने का मुहताज = अति दरिद्र। ಬಹಳ ಬಡವ.

दाना–वि बुद्धिमान्। ತಿಳಿದವ, ಬುದ್ಧಿ ವಂತ, ಚತುರ.

दानाई– स्त्री बुद्धिमानी। ಬುದ್ಧಿ ವಂತಿಕೆ, ತಿಳಿವಳಿಕೆ.

दानाचारा– पु खानापीना। ಅನ್ನ-ನೀರು, ಅನ್ನಾಹಾರ.

दानापानी– पु अन्नजल, जीविका, रोजी। ಅನ್ನ-ನೀರು, ತಿಂಡಿ-ತೀರ್ಥ, ಜೀವನೋಪಾಯ, ಅನ್ನಋಣ.

दानिश–स्त्री समझ, बुद्धि। ತಿಳಿವಳಿಕೆ, ಬುದ್ಧಿ.

दानिशमंद–वि अक्लमंद। ಬುದ್ಧಿವಂತ, ಜಾಣ, ತಿಳಿದವ.

दानिस्त–स्त्री जानकारी,ज्ञान। ತಿಳಿವಳಿಕೆ, ಜ್ಞಾನ, ಬುದ್ಧಿ.

दानी–वि देनेवाला। ಕೊಡುವವ,ದಾನ ಮಾಡುವವ, ಉದಾರ पु. दान देनेवाला व्यक्ति। ದಾತಾ, ದಾನ ಮಾಡುವವ

दानेदार– वि रवादार। ಹರಳುಹರ ಳಾದ, ರವೆಗಳುಳ್ಳ, ಮುಳಲುಮುಳ ಲಾಗಿರುವ.

दाप– पु. अभिमान, प्रताप, शक्ति, उत्साह, ताप, जलन। ಅಭಿಮಾನ, ಗರ್ವ, ಸೊಕ್ಕು, ಪ್ರತಾಪ, ಶಕ್ತಿ, ಉತ್ಸಾಹ, ತಾಪ, ದಾಹ.

दापना– सक्रि. रोकना, दबाना। ಅದ್ದಿ ಮಾಡು, ನಿಷೇಧಿಸು, ಒತ್ತು, ಅಮುಕು.

दाब– स्त्री दाबनेका भाव, बोझ, रोब। ಒತ್ತರಿಕೆ, ಭಾರ, ಪ್ರಭಾವ, ಅಧಿ ಕಾರ, ಬಲಾತ್ಕಾರ, ಆಟೋಪ, ಅದಬು.

दाबदार– वि. प्रभावशाली। ಪ್ರಭಾವ ವುಳ್ಳ, ಜಬರ್ದಸ್ತ, ಪ್ರತಾಪವುಳ್ಳ

दाबना– सक्रि. दे. 'दबाना'।

दाभ– पु. दर्भ। ದರ್ಭೆ.

दाम– पु रस्सी, जाल, समूह, माला। ಹಗ್ಗ, ದಾರ, ಜಾಲ, ಸಮೂಹ, ಗುಂಪು, ರಾಶಿ, ಮಾಲೆ, ಸರ,ಲಡಿ, ಎಳೆ

दाम– पु मूल्य, रुपया पैसा, एक पुराना सिक्का। ಕ್ರಯ, ಬೆಲೆ, ಕಿಮ್ಮತ್ತು, ಹಣ, ಒಂದು ಹಳೆಯ ನಾಣ್ಯ.

दामन– पु. अंचल, छोर, पहाड़के नीचे की जमीन। ಸೆರಗು, ಅಂಚು, ಗುಡ್ಡದ ಕೆಳಭಾಗ

दामरि, दामरी– स्त्री रस्सी। ಹಗ್ಗ, ದಾರ.

दामाद– पु जामाता। ಅಳಿಯ, ಜಾಮಾತೃ

दामी– स्त्री. कर। ತೆರಿಗೆ,ಆಕಾರ,ಕರ

दायँ– स्त्री. दे 'दॉय'। दे 'दाव'।

दाय– पु. पैतृक धन, देय धन, दान, दहेज, दावानल, विभाग। ಪೈತೃಕ

ಧನ, ಪೈತೃಕ ಸಂಪತ್ತು, ಕೊಟ್ಟ ಹಣ, ದಾನ, ವರದಕ್ಷಿಣೆ, ದಾವಾನಲ, ಬೆಂಕಿ, ವಿಭಾಗ.

दायज,दायजा–पु. दहेज । ವರದಕ್ಷಿಣೆ, ಕನ್ಯಾಶುಲ್ಕ.

दायम–क्रिवि हमेशा । ಯಾವಾಗಲೂ.

दायर– वि जारी । ನಡೆಯುವ, ಜಾರಿಯಾದ, ಪ್ರಚಲಿತ, ಜಾರಿಯಲ್ಲಿರುವ.

—करना = पेश करना । ದಾವೆ ಮಾಡು, ಮುಂದೆ ತರು.

दायरा– पु मंडल, घेरा । ಮಂಡಲ, ಸುತ್ತು, ವರ್ತುಲ, ವೃತ್ತ.

दायाँ– वि दाहिना । ಬಲಗಡೆಯ, ಬಲ.

दाया– स्त्री दया । ದಯೆ, ಕರುಣೆ.

दाया– स्त्री धाय । ದಾದಿ, ತೊತ್ತು.

दायाद– पु हिस्सेदार, कुटुंबी, पुत्र । ಪಾಲುಗಾರ, ವಾರಸುದಾರ, ಗೋತ್ರಜ, ಮಗ, ಪುತ್ರ.

दायित्व– पु जवाबदेही । ಹೊಣೆಗಾರಿಕೆ, ಜವಾಬ್ದಾರಿ.

दायें– क्रिवि दाहिनी तरफ़ । ಬಲಗಡೆಗೆ.

—होना= अनुकूल होना । ಅನುಕೂಲವಾಗು.

दार–स्त्री पत्नी, लकड़ी, दाल । ಹೆಂಡತಿ, ಕಟ್ಟಿಗೆ, ಬೇಳೆ. पु. पुत्र, बेटा । ಮಗು, ಪುತ್ರ, ಹುಡುಗ. वि विदारक, फाड़नेवाला । ವಿದಾರಕ, ಒಡೆಯುವವ, ಭಂಜಕ, ಹರಿಯುವವ.

दार– स्त्री सूली, फाँसी । ಗಲ್ಲು, ಫಾಸಿ ಕಂಬ पु. स्थान, घर, मकान । ಸ್ಥಾನ, ಸ್ಥಳ, ಮನೆ, ಕಟ್ಟಡ. वि रखनेवाला । ಉಳ್ಳವ, ಒಡೆಯ. ಉದಾ:— ईमानदार, दूकानदार ।

दारचीनी– स्त्री एक पेड़, उस पेड़ की छाल । ದಾಲಚಿನ್ನಿ ಗಿಡ, ದಾಲಚಿನ್ನಿ, ಲವಂಗ ಚಕ್ಕೆ

दारना– सक्रि. विदीर्ण करना, नष्ट करना । ಹರಿ, ತುಂಡರಿಸು, ಒಡೆ, ನಾಶಮಾಡು, ಹಾಳುಮಾಡು.

दारपरिग्रह– पु विवाह । ವಿವಾಹ, ಲಗ್ನ.

दारमदार– पु. आश्रय, अवलंबन । ಆಶ್ರಯ, ಆಧಾರ, ಅವಲಂಬ.

दारा– स्त्री पत्नी । ಪತ್ನಿ, ಹೆಂಡತಿ.

दारि– स्त्री दाल । ಬೇಳೆ.

दारिउँ, दारिव– पु. दे. 'दाडिम' ।

दारिका– स्त्री. लकड़ी, कन्या । ಕಟ್ಟಿಗೆ, ಕನ್ಯೆ, ಮಗಳು, ಹುಡುಗಿ.

दारिद– पु. गरीबी । ಬಡತನ, ದಾರಿದ್ರ್ಯ.

दारिम– पु दे 'दाड़िम' ।

दारी– स्त्री. दासी, व्यभिचारिणी स्त्री । ದಾಸಿ, ವ್ಯಭಿಚಾರಿಣಿ ಸ್ತ್ರೀ.

दारीजार– पु लौंडी का पति । ಮುಂಡೆಗಂಡ (ಬೈಗಳು).

दारु– पु. बढ़ई, लकड़ी । ಬಡಿಗ, ಕಟ್ಟಿಗೆ, ದೇವದಾರು.

दारुण, दारुन– वि. भीषण। ಭೀಷಣ, ಭಯಂಕರ. पु. शिव, एक नरक, राक्षस । ಶಿವ, ಒಂದು ನರಕ, ರಾಕ್ಷಸ

दारू– स्त्री. शराव, औषध, वारूद। ಸರಾಯಿ, ಮದ್ಯ, ಮದ್ದು, ಔಷಧ, ಸಿಡಿಮದ್ದು.

दारोग़ा– पु थानेका अफसर। ಫೌಜ-ದಾರ, ಸಬ್ ಇನ ಸ್ಪೆ ಕ್ಟ ರ, ಇನಸ್ಪೆಕ್ಟರ.

दार्शनिक– वि. दर्शन शास्त्र संबंधी, दर्शन शास्त्र का पंडित। ತತ್ವಜ್ಞಾನ ಸಂಬಂಧವಾದ, ತ ತ್ವ ಜ್ಞಾ ನ ಪಂಡಿತ

दाल– स्त्री दला हुआ अन्न, खुरंड । ಬೇಳೆ, ತೊಪ್ಪೆ, ಹಕ್ಕಳೆ, ಪರೆ

—न गलना= कामयाब न होना । ಬೇಳೆ ಬೇಯದಿರು, ನಫಲನಾಗದಿರು

—में कुछ काला होना= बुरे आसार नजर आना । ಸಂಶಯುವಾಗು, ಕೆಟ್ಟ ಚಿಹ್ನೆ ತೋರು.

—बंटना= आपस मे कलह होना । ಪರಸ್ಪರರಲ್ಲಿ ಜಗಳವಾಗು.

दालचीनी– स्त्री दे 'दारचीनी'।

दालना– सकि दे. 'दलना'।

दालमोट– स्त्री तली हुयी दाल आदि। ಕಾರು ಉಪ್ಪು ಹಚ್ಚಿ, ಕರೆದ ಕಾಳು, ಉಸಳಿ.

दालान– पु. वरामदा। ಪಡಸಾಲೆ, ಕೈಸಾಲೆ, ಮೊಗಸಾಲೆ, ಪ್ಡರಾಂಡ.

दालिम– पु दे. 'दाडिम'।

दावँ– पु. दे 'दाँव'।

दाव– स्त्री. दे 'दाँय'।

दावँरी– स्त्री. दे 'दाँवरी'।

दावत– स्त्री निमंत्रण, भोज । ಆಮಂತ್ರಣ, ಔತಣ, ಊಟ, ಮೇಜವಾನಿ.

दावन– पु दमन, हंसिया। ದಮನ, ನಾಶ, ಕುಡಗೋಲು.

दावना– सकि दाँय करना, दमन करना । ತೆನೆಗಳನ್ನು ತುಳಿಸು, ಕಾಳು ಬಿಡಿಸು, ಒಕ್ಕು, ದಮನ ಮಾಡು, ನಾಶಮಾಡು, ಅಡಗಿಸು.

दावरी– स्त्री रस्सी। ಹಗ್ಗ

दावा– पु हक, अधिकार, अभियोग, नालिश, दृढता। ಹಕ್ಕು, ಅಧಿಕಾರ, ದೋಷಾರೋಪ, ಫಿರ್ಯಾದು. ದೃಢತೆ, ದೃಢವಾದ ಹೇಳಿಕೆ. स्त्री वनाग्नि। ದಾವಾನಲ, ವನಾಗ್ನಿ.

—करना= दृढता से कहना । ದೃಢವಾಗಿ ಹೇಳು.

दावात– स्त्री दे 'दवात'।

दावादार– पु दावागीर । ಅಧಿಕಾರ ಹೇಳುವವ, ಬಾಧ್ಯಸ್ಥ.

दाशु– वि दाता, देनेवाला, दिया हुआ। ದಾತೃ, ಕೊಡುವವ, ಕೊಟ್ಟ, ದಾನ ಮಾಡಿದ.

दास– पु सेवक। ಸೇವಕ, ದಾಸ, ಆಳು

दासता— स्त्री दासत्व पु. सेवावृत्ति। ದಾಸ್ಯ, ಸೇವಾವೃತ್ತಿ.

दासी— स्त्री सेविका। ದಾಸಿ, ಸೇವಕಿ, ತೊತ್ತು.

दास्तान— पु कथा, बयान। ಕತೆ, ಹೇಳಿಕೆ, ವೃತ್ತಾಂತ, ಸುದ್ದಿ.

दाह—पु शवदाह, ताप, जलन। ದಾಹ ಕರ್ಮ, ದಹನಕ್ರಿಯೆ, ಅಂತ್ಯೇಷ್ಟಿ, ತಾಪ, ದಾಹ, ದ್ವೇಷ, ಅಸೂಯೆ, ಹೊಟ್ಟೆಕಿಚ್ಚು.

दाहना—सक्रि जलाना, दुःख पहुँचाना। ಸುಡು, ಉರಿಸು, ತ್ರಾಸ ಕೊಡು, ಪೀಡಿಸು. वि बायाँका उलटा। ಬಲಗಡೆಯ.

दाहिन, दाहिना— वि दक्षिण,अनुकूल। ಬಲಗಡೆಯ, ಅನುಕೂಲವಾದ.

दाहिनी देना, दाहिनी लाना = प्रदक्षिणा करना। ಪ್ರದಕ್ಷಿಣೆ ಹಾಕು.

दाहिने— क्रिवि. दाहिने तरफ। ಬಲಗಡೆಗೆ.

दिअरी, दिअली— स्त्री छोटा दिया। ಹಣತೆ, ಚಿಕ್ಕ ದೀಪ.

दिआ— पु. दीया। ದೀಪ, ಹಣತೆ.

दिआना— सक्रि दिलाना। ಕೊಡಿಸು

दिआसलाई— स्त्री दे 'दियासलाई'।

दिउला— पु. दिउली— स्त्री. सुरंड। ಹುಣ್ಣಿನ ಪಕ್ಕಳೆ, ಹುಣ್ಣಿನ ಪರೆ.

दिक— पु. क्षयरोग। ಕ್ಷಯರೋಗ वि. हैरान। ಬೇಸತ್ತ, ಬಹಳ ಕಷ್ಟ ಪಟ್ಟ, [illegible], ಘಾಸಿಯಾದ.

—करना = सताना। ತ್ರಾಸಕೊಡು, ಪೀಡಿಸು

दिक्— स्त्री दिशा। ದಿಶೆ,ದಿಕ್ಕು.

दिक्कत— स्त्री. कठिनाई, परेशानी। ತೊಂದರೆ, ಕಷ್ಟ, ಪೇಚು,ಸಂಕಟ, ವ್ಯಾಕುಲತೆ.

दिखना— अक्रि. देख पड़ना। ಕಾಣು, ತೋರು, ದೃಷ್ಟಿಗೋಚರವಾಗು

दिखराना, दिखलाना— सक्रि दिखाना, बतलाना। ತೋರಿಸು, ತಿಳಿಸು, ಪ್ರದರ್ಶಿಸು.

दिखलाई— स्त्री. दे 'दिखाई'।

दिखलावा— पु. दे 'दिखावा'।

दिखहार— पु. दर्शक, देखनेवाला। ನೋಡುವವ, ದರ್ಶಕ.

दिखाई— स्त्री देखने या दिखाने की क्रिया या मजदूरी। ನೋಡುವಿಕೆ, ನೋಡಿಸುವಿಕೆ, ತೋರಿಸುವಿಕೆ, ನೋಡುವ ಅಥವಾ ತೋರಿಸುವ ಕೂಲಿ.

दिखाऊ— वि. बनावटी, देखने योग्य। ಬಾಹ್ಯಾಡಂಬರದ, ತೋರಿಕೆಯ, ನೋಡತಕ್ಕ, ಪ್ರೇಕ್ಷಣೀಯ.

दिखाना— सक्रि दे 'दिखलाना'।

दिखाव— पु दृश्य। ದೃಶ್ಯ, ತೋರಿಕೆ, ಸೋಗು

दिखावटी— वि. दिखाऊ, बनावटी। ತೋರಿಕೆಯ, ಜಂಭದ, ಕೃತ್ರಿಮ, ನಟನೆಯ.

दिखावा— पु बनावट, दिखाने के लिये

किया गया ठाटबाट । ಕೃತ್ರಿಮತೆ, ತೋರಿಕೆ, ಆಡಂಬರ, ಸೋಗು, ನಟನೆ.

दिखैया– पु. देखने या दिखानेवाला । ನೋಡುವವ, ತೋರಿಸುವವ.

दिखौआ– वि. दे 'दिखावटी' ।

दिगंत– पु क्षितिज । ಕ್ಷಿತಿಜ, ದಿಗಂತ.

दिगबर– पु शिव, एक जैन संप्रदाय । ಶಿವ, ಜೈನ ಸಂಪ್ರದಾಯ. वि नंगा । ನಗ್ನ, ಬತ್ತಲೆ, ದಿಗಂಬರ, ನಿರ್ವಾಣವಾದ.

दिग्– स्त्री दिशा । ದಿಕ್ಕು.

दिग्दर्शक-यंत्र–पु कुतुबनुमा । ಹೋಕಾಯಂತ್ರ.

दिग्दर्शन– पु स्थूल परिचय । ದಿಗ್ದರ್ಶನ, ಸ್ಥೂಲ ಪರಿಚಯ.

दिग्भ्रांत– वि. जिसे दिशाका भ्रम हो गया हो । ದಿಗ್ಭ್ರಾಂತ, ದಿಗ್ಭ್ರಮೆಯಾದ.

दिग्विजयी– वि विश्वविजेता । ದಿಗ್ವಿಜಯಿ, ಜಗತ್ತನ್ನು ಗೆದ್ದವ.

दिठादिठी– स्त्री देखादेखी । ಭೆಟ್ಟಿ, ದರ್ಶನ.

दिठाना– अक्रि. नजर लगना । ದೃಷ್ಟಿಯಾಗು, ದೃಷ್ಟಿ ತಟ್ಟು. सक्रि. नजर लगाना । ದೃಷ್ಟಿ ಹಚ್ಚು.

दिठौना–पु. डिठौना । ದೃಷ್ಟಿಬೊಟ್ಟು, ಕಾಡಿಗೆ ಬೊಟ್ಟು, ಹಣೆ ಕಪ್ಪು.

दिढ– वि. दृढ । ದೃಢ, ಗಟ್ಟಿಯಾದ.

दिढ़ाना– सक्रि. मजबूत करना । ನಿಶ್ಚಯಿಸು, ದೃಢ ಪಡಿಸು.

दिढाव– पु दृढ बनाना, समर्थन । ದೃಢೀಕರಿಸುವದು, ಸಮರ್ಥನೆ.

दिन–पु दिवस, समय । ದಿನ,ಹಗಲು, ದಿವಸ, ಕಾಲ, ಅವಧಿ, ಗಡು, ನಿಯಮಿತ ಅವಧಿ.

—दहाड़े = ठीक दिनकी चहल-पहल के समय । ಹಗಲಿನಲ್ಲಿ.

—रात = हमेशा, सदा सर्वदा । ಯಾವಾಗಲೂ, ಹಗಲಿರುಳು, ಅಹೋರಾತ್ರಿ.

—चढ़ना या निकलना = सूर्य उदय होना । ಸೂರ್ಯೋದಯವಾಗು.

—काटना = किसी प्रकार निर्वाह करना । ಹೇಗಾದರೂ ನಿರ್ವಾಹ ಮಾಡು.

—ढलना = संध्या समय निकट आना । ಸಂಜೆಯಾಗು.

—दूना रात चौगुना होना=जल्दी जल्दी बढ़ना । ಶೀಘ್ರವಾಗಿ ಬೆಳೆ, ಬಿದಿಗೆಯ ಚಂದ್ರನಂತೆ ಬೆಳೆ.

—पर दिन = प्रतिदिन । ಪ್ರತಿದಿವಸ.

दिनराइ, दिनराउ, दिनराज–पु सूर्य । ಸೂರ್ಯ.

दिनाई– स्त्री. प्राणघातक विषैली वस्तु । ಪ್ರಾಣಘಾತಕ ವಿಷ ಪದಾರ್ಥ.

दिनार– पु एक सोनेका प्राचीन सिक्का । ಮೊಹರು, ಬಂಗಾರದ ನಾಣ್ಯ.

दिनी– वि बहुत दिनोंका, पुराना । ಬಹಳದಿವಸದ,ಹಳೆಯ,ಪ್ರಾಚೀನ

दिनौंधी– स्त्री. दिनमें न दिखाई देनेका रोग। ಹಗಲು ದೃಷ್ಟಿ ಮಂದವಾಗುವ ರೋಗ, ದಿನಾಂಧತೆ.

दिपति– स्त्री दीप्ति, प्रकाश। ದೀಪ್ತಿ, ಪ್ರಕಾಶ.

दिपना– अक्रि. प्रकाश देना,. चमकना। ಪ್ರಕಾಶಿಸು, ಹೊಳೆ.

दिपाना– अक्रि चमकना। ಹೊಳೆ, ಪ್ರಕಾಶಿಸು.

दिव– पु. सत्यता प्रमाणित करने की परीक्षा। ಸತ್ಯತೆಯನ್ನು ಸಿದ್ಧ ಪಡಿಸುವ ಪರೀಕ್ಷೆ. वि. दिव्य। ದಿವ್ಯ.

दिमाक– पु. दे. 'दिमाग'।

दिमाकदार– वि. दे. 'दिमागदार'।

दिमाग़– पु मस्तिष्क, अक्ल, घमंड। ಮಿದುಳು, ಬುದ್ಧಿ, ಸೊಕ್ಕು, ಗರ್ವ, ಜಂಭ.

दिमाग़दार– वि. अच्छे मास्तिष्कवाला, घमंडी। ಬುದ್ಧಿವಂತ, ಮೇಧಾವಿ, ಸೊಕ್ಕಿನವ, ಗರ್ವಿಷ್ಠ.

दिमाग़ी– वि. दिमाग संबंधी, घमंडी। ಮಿದುಳು ಅಥವಾ ಬುದ್ಧಿಗೆ ಸಂಬಂಧಿಸಿದ, ಗರ್ವಿಷ್ಠ, ಸೊಕ್ಕಿನ.

दिमाना– वि दिवाना। ಹುಚ್ಚು, ನಿಶ್ಚಿಷ್ಟ.

दियट– स्त्री. चिरागदान। ದೀಪದ ಆಧಾರ, ಸಮೆ.

दियना– पु. चिराग, दीया। ದೀಪ, ಸೊಡರು, ಹಣತೆ. अक्रि चमकना। ಹೊಳೆ, ಪ್ರಕಾಶಿಸು.

दिया– पु. दीया। ದೀಪ, ಹಣತೆ.

दियानत– स्त्री. ईमानदारी। ಪ್ರಾಮಾಣಿಕತೆ.

दियानतदार–वि. ईमानदार। ಪ್ರಾಮಾಣಿಕ.

दियारा– पु. नदीका पानी हट जानेपर निकली हुयी भूमि, कछार। ನದಿ ಇಳಿದ ಮೇಲೆ ತೆರೆಯುವ ಭೂಮಿ, ಗಡ್ಡೆ, ಕರಾವಳಿ ಪ್ರದೇಶ.

दियासलाई–स्त्री. आग प्रदीप्त करने की सलाई। ದೀಪದ ಕಡ್ಡಿ, ಬೆಂಕಿಯ ಕಡ್ಡಿ.

दियासा– पु. मृगतृष्णा। ಮೃಗತೃಷ್ಣೆ.

दिरमान– पु. इलाज। ಚಿಕಿತ್ಸೆ, ಔಷಧೋಪಾಯ.

दिरमानी– पु. वैद्य। ವೈದ್ಯ. स्त्री. चिकित्साशास्त्र। ಚಿಕಿತ್ಸಾಶಾಸ್ತ್ರ, ವೈದ್ಯಶಾಸ್ತ್ರ.

दिरानी– स्त्री. दे. 'देवरानी'।

दिल– पु. मन, हृदय, चित्त, कलेजा, इच्छा, साहस। ಮನಸ್ಸು, ಹೃದಯ, ಚಿತ್ತ, ಪ್ರಕೃತಿ, ಎದೆ, ಇಚ್ಛೆ, ಸಾಹಸ, ಧೈರ್ಯ.

—कड़ा करना = साहस करना। ಮನಸ್ಸು ಗಟ್ಟಿ ಮಾಡು, ಸಾಹಸ ಮಾಡು.

—का बादशाह = बहुत बड़ा उदार। ಅತ್ಯಂತ ಉದಾರ.

—देना = अनुरक्त होना। ಅನುರಕ್ತನಾಗು, ಮೋಹಿಸು.

**—मसोसकर रह जाना** = क्रोध या शोकको दबाकर रहजाना। ಕ್ರೋಧ ಅಥವಾ ದುಃಖವನ್ನು ನುಂಗಿ-ಕೊಂಡಿರು.

**—से** = जी लगाकर, अपनी इच्छासे। ಲಕ್ಷ್ಯಕೊಟ್ಟು, ಮನಸ್ಸಿನಿಂದ.

**—ही दिलमे** = मन ही मन, चुपके चुपके। ಮನಸ್ಸಿನಲ್ಲಿ, ಸುಮ್ಮನೆ, ಗುಪ್ತವಾಗಿ.

**दिलकश, दिलकशा**– वि. आकर्षक, मनोहर। ಆಕರ್ಷಕ,ಮನೋಹರ.

**दिलगीर**– वि. उदास, दुखी। ಉದಾಸೀನ, ದುಃಖಿತ.

**दिलगीरी**– स्त्री दु.ख। ದುಃಖ, ವ್ಯಥೆ.

**दिलचला**– वि. वीर, दानी। ವೀರ, ಸಾಹಸಿ, ದಾನಶೂರ

**दिलचस्प**– वि. चित्ताकर्षक। ರಮ್ಯ, ಚಿತ್ತಾಕರ್ಷಕ, ಇಂಪಾದ, ರುಚಿರ.

**दिलचस्पी**– स्त्री. चित्ताकर्षन। ಚಿತ್ತಾಕರ್ಷಣ, ಅಭಿರುಚಿ, ಮನೋರಂಜನೆ, ಆಸ್ಥೆ.

**दिलजमई, दिलजोई**– स्त्री. संतोष, तसल्ली, तृप्ति। ಸಂತೋಷ, ಸಮಾಧಾನ,ಸಾಂತ್ವನೆ, ತೃಪ್ತಿ,ಸಂತುಷ್ಟಿ.

**दिलजला**– वि. दुखी। ಮನನೊಂದ, ದುಃಖಿತ.

**दिलजोई**– स्त्री. दे 'दिलजमई'।

**दिलदार**– वि. उदार, रसिक, प्रिय। ಉದಾರ, ರಸಿಕ, ಪ್ರಿಯ.

**दिलपज़ीर**– वि. दिलपसंद। ಮನಸ್ಸಿಗೆ ನೇರುವ, ಮನೋಹರ, ಸುಂದರ.

**दिलबर**–वि. प्यारा। ಪ್ರಿಯ,ಇನಿಯ.

**दिलबहलाव**–पु. मनोरंजन। ಮನೋರಂಜನ, ಗಮ್ಮತ್ತು.

**दिलरुबा**– पु प्रियतम, प्रेमपात्र, एक बाजा। ಪ್ರಿಯತಮ,ಪ್ರೇಮಪಾತ್ರ, ಒಂದು ವಾದ್ಯ.

**दिलवाना**– सक्रि दे. 'दिलाना'।

**दिलवाला**– वि. उदार, साहसी। ಉದಾರ, ಸಾಹಸಿ.

**दिलाना**– सक्रि. दूसरेको देनेमे प्रवृत्त करना। ಕೊಡಿಸು, ಈಯಿಸು.

**दिलारा**– वि प्रिय। ಪ್ರಿಯ, ಮುದ್ದು, ಪ್ರೇಮಪಾತ್ರ.

**दिलावर**– वि. बाहदुर, साहसी। ವೀರ, ಸಾಹಸಿ, ಎದೆಗಾರ, ಉತ್ಸಾಹಿ.

**दिलावरी**– स्त्री साहस, बहादुरी। ಸಾಹಸ, ವೀರತ್ವ.

**दिलासा**–पु. ढाढस, धैर्य। ಸಾಂತ್ವನ, ಆಶ್ವಾಸನ, ಧೈರ್ಯ, ಸಮಾಧಾನ.

**दिली**– वि हार्दिक, घनिष्ट। ಹಾರ್ದಿಕ, ಗಾಢ, ಹೃತ್ಪೂರ್ವಕ.

**दिलेर**– वि. साहसी, वीर, उत्साही। ಸಾಹಸಿ, ವೀರ, ಉತ್ಸಾಹಿ, ದಿಟ್ಟ, ಎದೆಗಾರ.

**दिलेराना**– वि. वीरोचित। ವೀರೋಚಿತ, ಧೀರನಂಥ.

**दिलेरी**–स्त्री. साहस। ಸಾಹಸ.ಧೀರತೆ.

**दिलोजान**– पु पूर्णमन, दिल और

जान । ಪೂರ್ಣ ಮನಸ್ಸು,ಹೃದಯ ಮತ್ತು ಪ್ರಾಣ

दिल्लगी– स्त्री. हँसी, विनोद । ಹಾಸ್ಯ, ವಿನೋದ, ಗೇಲಿ, ಕುಚೋದ್ಯ, ನಗಚಾಟಿಕೆ.

दिल्लगीबाज– पु हँसोड । ವಿನೋದಿ, ಹಾಸ್ಯಗಾರ, ಗೇಲಿಮಾಡುವವ.

दिव– पु आकाश, स्वर्ग, वन, दिन । ಆಕಾಶ, ಸ್ವರ್ಗ, ವನ, ದಿನ.

दिवा–पु दीया, चिराग, दिन । ದೀಪ, ನೊಡರು, ಹಣತೆ, ದಿನ, ಹಗಲು.

दिवाना– वि दे 'दीवाना'।

दिवार,दिवाल– स्त्री. दीवार । ಗೋಡೆ. वि देनेवाला । ಕೊಡುವವ.

दिवाला–पु ऋण चुकानेकी असमर्थता। ದಿವಾಳಿ, ಸರ್ವನಷ್ಟ.

दिवालिया–वि जिसने दिवाला निकाल दिया हो । ದಿವಾಳಿಕೋರ.

दिवाली–स्त्री दीपावली । ದೀಪಾವಳಿ, ದೀವಳಿಗೆ ಹಬ್ಬ.

दिवैया– वि देनेवाला । ಕೊಡುವವ, ದಾತೃ.

दिव्य– वि स्वर्गीय, सुंदर, प्रकाशमान। ಸ್ವರ್ಗೀಯ, ಸುಂದರ, ಪ್ರಕಾಶಮಾನವಾದ.

दिशा– स्त्री. तरफ, दसकी संख्या, दशा, शौच । ಮಗ್ಗುಲು, ದಿಕ್ಕು, ದಿಶೆ, ಹತ್ತರ ಸಂಖ್ಯೆ, ಸ್ಥಿತಿ, ಶೌಚ.

दिशि– स्त्री दिशा । ದಿಕ್ಕು. ದಿಶೆ.

दिष्टि– स्त्री दृष्टि । ದೃಷ್ಟಿ, ನೋಟ.

दिस– स्त्री. दे 'दिशा'।

दिसना– अक्रि दिखाई पडना । ಕಾಣಿಸು, ತೋರು.

दिसा– स्त्री दे 'दिशा'।

दिसावर–पु. परदेश । ಪರದೇಶ,ವಿದೇಶ.

दिसावरी–पु. परदेश का । ಪರದೇಶದ, ವಿದೇಶದ.

दिसि– स्त्री. दे 'दिशि'।

दिसैया– वि. देखने या दिखानेवाला। ನೋಡುವವ ಅಥವಾ ತೋರಿಸುವವ.

दिहंदा– वि देनेवाला । ಕೊಡುವವ, ದಾನಶೂರ.

दिहात–स्त्री. दिहाती– वि दे. 'देहात' 'देहाती'।

दीअट, दीआ– पु दे. 'दीया'।

दीखना–अक्रि. देख पडना । ಕಾಣಿಸು, ತೋರು.

दीगर– वि. अन्य, दूसरा । ಅನ್ಯ, ಎರಡನೆಯ, ಇತರ.

दीघी– स्त्री. तालाब । ಕೆರೆ, ದೊಡ್ಡ ಬಾವಿ, ಇಳಿಯುವ ಬಾವಿ.

दीठ,दीठी–स्त्री. दृष्टि, कुदृष्टि, कृपादृष्टि। ದೃಷ್ಟಿ, ನೋಟ, ಕೆಟ್ಟ ದೃಷ್ಟಿ, ಕಟಾಕ್ಷ, ಕೃಪಾದೃಷ್ಟಿ.

दीठना– सक्रि देखना । ನೋಡು.

दीठबंदी– स्त्री जादू। ಜಾದು, ಇಂದ್ರಜಾಲ. ಕಣ್ಣು ಕಟ್ಟುವ ವಿದ್ಯೆ. ಗಾರುಡಿ ವಿದ್ಯೆ.

दीद– स्त्री देखादेखी। ದೃಷ್ಟಿ, ದರ್ಶನ.

दीदा–पु दृष्टि, आँख, साहस। ದೃಷ್ಟಿ, ಕಣ್ಣು, ಸಾಹಸ, ಉದ್ಧಟತನ
—लगना = मन लगना। ಮನಸ್ಸು ಹತ್ತು, ಲಕ್ಷ್ಯಕೊಡು.
दीदार– पु दर्शन। ದರ್ಶನ, ಭೆಟ್ಟಿ, ಸಂದರ್ಶನ.
दीदा व दानिस्ता– क्रिवि. जानबूझकर। ತಿಳಿದೂ ತಿಳಿದೂ, ಬುದ್ಧಿಪೂರ್ವಕ.
दीदार–पु दर्शन, देखादेखी। ದರ್ಶನ, ಭೆಟ್ಟಿ, ಸಂದರ್ಶನ.
दीदी– स्त्री. बडी बहन। ಅಕ್ಕ.
दीन– वि गरीब, दुःखी, उदास, नम्र। ದೀನ, ಬಡವ, ದುಃಖಿತ, ಉದಾಸೀನ, ನಮ್ರ.
दीन– पु मजहब। ಧರ್ಮ, ಮತ
दीनदार– वि धार्मिक। ಧಾರ್ಮಿಕ, ಆಸ್ತಿಕ, ಭಕ್ತಿಯುಳ್ಳವ.
दीन-दुनिया– स्त्री लोक-परलोक। ಇಹಲೋಕ-ಪರಲೋಕ.
दीनबंधु–पु दुखियोंका सहायक, ईश्वर। ದುಃಖಿತರ ಸಹಾಯಕ, ಈಶ್ವರ.
दीनार– पु सोनेका एक सिक्का, सोनेका गहना। ಚಿನ್ನದ ನಾಣ್ಯ, ಚಿನ್ನದ ಒಡವೆ, ಬಂಗಾರದ ಒಡವೆ.
दीप– पु दीपक, द्वीप। ದೀಪ,ದೀವಿಗೆ, ದ್ವೀಪ.
दीपक– पु. दीया, एक राग, केशर। ದೀಪ, ದೀವಿಗೆ, ಒಂದು ರಾಗ, ಕೇಶರ. वि. बढानेवाला, प्रकाशक। ಬೆಳೆಸುವವ, ಪ್ರಕಾಶಕ.
दीपकिट्ट– पु. काजल। ಕಾಡಿಗೆ.
दीपत, दीपति– स्त्री. चमक, कांति, शोभा, कीर्ति। ಹೊಳಪು, ಕಾಂತಿ, ಶೋಭೆ, ಕೀರ್ತಿ
दीपना–अक्रि. चमकना। ಹೊಳೆ,ಪ್ರಕಾಶಿಸು. ० सक्रि प्रकाशित करना। ಬೆಳಗಿಸು, ಪ್ರಕಾಶಿತ ಮಾಡು.
दीपशलभ–पु. जुगनू। ಹೊನ್ನೆ ಹುಳ, ಮಿಂಚು ಹುಳ.
दीपशिखा– स्त्री दीयेकी लौ, दीयेका काजल। ದೀಪಶಿಖೆ, ದೀಪದ ಕುಡಿ, ದೀವಿಗೆಯ ಕಾಡಿಗೆ
दीप्ति– स्त्री. दे. 'दीपति'।
दीबाचा– पु. भूमिका। ಮುನ್ನುಡಿ, ಪೀಠಿಕೆ, ಭೂಮಿಕೆ, ಪ್ರಸ್ತಾವನೆ
दीमक– स्त्री चीटी की तरह का एक कीडा। ಗೆದ್ದಲು, ಗೊರಲೆ.
दीयट, दीवट– स्त्री. चिरागदान, दीया। ದೀಪದ ಆಧಾರ, ದೀಪದ ಕಂಬ, ಸಮೆ, ದೀಪ, ಸೊಡರು.
दीया– पु दीपक। ದೀಪ, ದೀವಿಗೆ, ಹಣತೆ.
दीया-सलाई– स्त्री दे. 'दियासलाई'।
दीरघ– वि बडा, लंबा। ದೊಡ್ಡ, ಉದ್ದವಾದ.
दीर्घकाय– वि बडे कदका। ದೀರ್ಘಕಾಯ,ಎತ್ತರವಾದ ನಿಲುವಿನವ.
दीर्घदर्शी, दीर्घदृष्टि– वि दूरतक सोचनेवाला। ದೂರದೃಷ್ಟಿಯ, ದೂರದರ್ಶಿ.
दीवट– स्त्री. दे 'दीयट'।

दीवान–पु मंत्री, राजसभा । ಮಂತ್ರಿ, ದಿವಾನ, ರಾಜಸಭೆ, ದರ್ಬಾರು.

दीवान-खाना– पु बैठक । ಕೂಡ್ರುವ ಕೋಣೆ, ಚಾವಡಿ, ಹಜಾರ.

दीवान-आम=आम दरबार । ಸಾಮಾನ್ಯ ಸಭೆ, ಸಾರ್ವಜನಿಕ ದರ್ಬಾರು.

दीवान-खास= खास दरबार । ಮುಖ್ಯ ಸಭೆ, ಮಂತ್ರಾಲೋಚನ ಸಭೆ.

दीवानगी– स्त्री. पागलपन । ಹುಚ್ಚು, ಉನ್ಮತ್ತತೆ.

दीवाना–वि पागल । ಹುಚ್ಚ,ಮರುಳ, ಉನ್ಮತ್ತ.

दीवानी– स्त्री. दीवानका कार्य या पद, न्यायालय । ಮಂತ್ರಿಯ ಕಾರ್ಯ ಅಥವಾ ಪದ, ನ್ಯಾಯಾಲಯ. वि स्त्री. पागल । ಹುಚ್ಚಿ, ಉನ್ಮಾದಿನಿ.

दीवार, दीवाल– स्त्री. भीत । ಗೋಡೆ, ಭಿತ್ತಿ.

दीवाली– स्त्री दे. ' दिवाली ' ।

दीवारगीर– स्त्री दीवारमे लगानेका लैम्प । ಗೋಡೆಗೆ ತೂಗು ಹಾಕುವ ದೀಪ.

दीसना– अक्रि दिखाई पडना । ಕಾಣಿಸು, ತೋರು.

दीर्घ– वि. लंबा, बडा । ಉದ್ದ, ದೀರ್ಘ, ದೊಡ್ಡ.

दुंद– पु युग्म, दो मनुष्योंमे होनेवाला युद्ध, उपद्रव, नगारा । ಜೋಡಿ, ಯುಗಲ, ದ್ವಂದ್ವ, ಇಬ್ಬರಲ್ಲಿಯ ಜಗಳ, ಉಪದ್ರವ, ಗಲಾಟೆ, ನಗಾರಿ.

दु– वि ' दो ' का संक्षिप्त रूप ( उदा दुविधा ).

दु:ख– पु. क्लेश, पीडा, शोक, विपत्ति । ಕ್ಲೇಶ, ಪೀಡೆ, ದುಃಖ, ವಿಪತ್ತು.

दु:सह– वि. असह्य । ಅಸಹ್ಯವಾದ.

दुआ–स्त्री. आशीर्वाद, प्रार्थना । ಹರಕೆ, ಆಶೀರ್ವಾದ, ಪ್ರಾರ್ಥನೆ.

—मांगना=प्रार्थना करना । ಪ್ರಾರ್ಥಿಸು, ವರ ಕೇಳು.

—देना = आशीर्वाद देना । ಆಶೀರ್ವದಿಸು.

दुआ - ए - ख़ैर– स्त्री शुभकामना । ಶುಭೇಚ್ಛೆ.

दुआब, दुआबा– पु. दो नदियों के बीचका प्रदेश । ಎರಡು ನದಿಗಳ ನಡುವಿನ ಪ್ರದೇಶ.

दुआर– पु. द्वार । ದ್ವಾರ, ಬಾಗಿಲು.

दुआरी– स्त्री. छोटा द्वार । ಚಿಕ್ಕ ಬಾಗಿಲು.

दुइ– वि दो । ಎರಡು.

दुई–स्त्री. द्वैतता,दोका भाव । ದ್ವೈತತೆ, ಎರಡರ ಭಾವ.

दुकडा– पु जोडा, छदाम । ಜೋಡಿ, ಎರಡು, ದಮ್ಮಡಿ.

दुकना– अक्रि. छिपना । ಅಡಗು, ಮರೆಯಾಗು.

दुकान– स्त्री. दे. ' दूकान ' ।

दुकानदार– पु दूकानदार । ಅಂಗಡಿ

ಯುವ, ಕೋಮಟಿ, ವ್ಯಾಪಾರಸ್ಥ.

दुकाल– पु दुष्काल। ಬರ, ದುಷ್ಕಾಳ, ಕ್ಷಾಮ.

दुकूल– पु. रेशमी कपड़ा, वस्त्र। ರೇಶ್ಮೆ ಬಟ್ಟೆ, ವಸ್ತ್ರ.

दुकेला– वि. जिसके साथ कोई और भी हो। ಎರಡನೆಯವರು ಸಂಗಡ ಇದ್ದ, ಜತೆಯಾಗಿರುವ, ಜೋಡಿ.

अकेला-दुकेला= अकेला हो या जिसके साथ दो एक आदमी हो। ಒಂಟಿಗನಾದ ಅಥವಾ ಒಬ್ಬಿಬ್ಬರು ಸಂಗಡ ಇದ್ದ.

दुकेले– क्रिवि. दूसरे व्यक्तिको साथ लिये हुए। ಎರಡನೆಯವರ ಸಂಗಡ.

दुक्का– वि. जोड़ा। ಇಬ್ಬರು, ಜೋಡಿ. दे. 'दुक्की'।

इक्का-दुक्का= दे. 'अकेला दुकेला'।

दुक्की– स्त्री. दो बूटियोवाला ताशका पत्ता। ಇಸ್ಪೀಟಿನ ಎರಡನೆಯ ಬಂದು, ಎರಡು ಚಿಕ್ಕೆಗಳ ಇಸ್ಪೀಟಿನ ಎಲೆ, ದುಗ.

दुखंडा– वि. दो मंजिलका। ಎರಡಂತಸ್ತಿನ, ಎರಡು ಭಾಗವುಳ್ಳ.

दुखड़ा– पु दु.खकी कथा, विपत्ति। ಕರುಣ ಕತೆ, ದುಃಖದ ವೃತ್ತಾಂತ, ವಿಪತ್ತು, ಕಷ್ಟ.

—रोना =अपने दु.खकी स्थिति किसीसे कहना। ದುಃಖ ತೋಡಿಕೊಳ್ಳು, ತನ್ನ ಕರುಣ ಕತೆಯನ್ನು ಹೇಳು.

दुखना–अक्रि दर्द करना। ನೋಯು, ಪೀಡೆಯಾಗು.

दुखरा– पु. दे 'दुखड़ा'।

दुखवना, दुखाना– सक्रि. दु ख देना। ದುಃಖ ಕೊಡು. ತ್ರಾಸ ಕೊಡು, ನೋಯಿಸು.

दुखारा, दुखारी– वि. व्यथित, दु.खी। ದುಃಖಿತ, ತೊಂದರೆಗೊಂಡ, ತ್ರಾಸಗೊಂಡ.

दुखित, दुखी– वि. दे 'दुखारा'।

दुखिया, दुखियारा– वि. दे. 'दुखारा'।

दुखौंहा– वि. दुखदायी। ದುಃಖದಾಯಕ.

दुगई– स्त्री. बरामदा। ಪಡಸಾಲೆ, ವ್ಹರಾಂಡ, ಕೈಸಾಲೆ.

दुगदुगी– स्त्री दे 'धुकधुकी'।

दुगना, दुगुना– वि दूना। ಇಮ್ಮಡಿ, ಎರಡು ಪಟ್ಟು

दुग्ग– पु दुर्ग। ದುರ್ಗ, ಕೋಟೆ.

दुग्घ– वि दुहा हुआ। ಹಿಂಡಿದ. पु दूध। ಹಾಲು.

दुचंद– वि. दूना। ಇಮ್ಮಡಿ, ಎರಡು ಪಟ್ಟು.

दुचित– वि दुविधामें पड़ा हुआ, चिंतित। ಅಸ್ಥಿರ, ಗಾಬರಿಗೊಂಡ, ಚಿಂತಿತ.

दुचितइ, दुचिताई– स्त्री. दुविधा। ಮನಸ್ಸಿನ ಹೊಯ್ದಾಟ, ಸಂಶಯ, ಚಂಚಲತೆ, ಸಂದೇಹ

दुचित्ता– वि. दे. 'दुचित'।

दुज– पु द्विज। ದ್ವಿಜ, ಬ್ರಾಹ್ಮಣ.

दुजानू– क्रिवि. दे. 'दोजानू'।
दुजीह– पु साँप। ಹಾವು.
दुजेश– पु. द्विजेश। ದ್ವಿಜೇಶ, ಬ್ರಾಹ್ಮಣ.
दुटूक, दुट्टूक– वि खंडित। ಎರಡು ತುಂಡಾದ, ಹರಿದ, ಖಂಡಿತ.
दुटूक बात= विना फेरवट की बात। ಸಂಕ್ಷಿಪ್ತವಾಗಿದ್ದರೂ ಸ್ಪಷ್ಟವಾದ ಮಾತು.
दुड्डी– स्त्री दे 'दुक्की'।
दुतकार, दुतकारी– स्त्री फटकार। ತಿರಸ್ಕಾರ, ಧಿಕ್ಕಾರ.
दुतकारना– सक्रि फटकारना, तिरस्कार करना। ಧಿಕ್ಕರಿಸು, ತಿರಸ್ಕರಿಸು, ಗದರಿಸು, ಮೂದಲಿಸು.
दुतरफ़ा– वि दोनो ओर होनेवाला। ಎರಡೂ ಪಕ್ಷದ, ಉಭಯಾರ್ಥದ.
दुति– स्त्री. काति, शोभा। ಕಾಂತಿ, ತೇಜ, ಶೋಭೆ, ಸೌಂದರ್ಯ, ಕಿರಣ.
दुतिया, दुतीया– स्त्री. द्वितीया। ದ್ವಿತೀಯೆ (ತಿಥಿ)
दुदलाना– सक्रि दे. 'दुतकारना'।
दुदिला– वि दे 'दुचित'।
दुधमुख, दुधमुहाँ– वि जो अभीतक दूध पीता हो। ಹಾಲುಣ್ಣುವಮಗು, ಮೊಲೆಗೂಸು.
दुधार– वि. जो दूध देती हो, जिस में दोनों ओर धार हो। ಹಾಲು ಕೊಡುವ, ಹಿಂಡುವ, ಎರಡೂ ಮಗ್ಗಲು ಮೊನೆಯುಳ್ಳ.
दुधारा– पु वह तलवार जिसके दोनों ओर धार होती है। ಎರಡೂ ಮಗ್ಗಲು ಹರಿತವಾದ ಕತ್ತಿ,ಎರಡು ಅಲಗು ಅಥವಾ ಮೊನೆಗಳುಳ್ಳ.
दुधारी, दुधारू– वि. दे 'दुधार'।
दुधिया– वि दे. 'दूधिया'।
दुधैल– वि. अधिक दूध देनेवाली। ಹೆಚ್ಚು ಹಾಲು ಕೊಡುವ.
दुनरना, दुनवना– अक्रि नवना, लचकर दोहरा हो जाना। ಮಣಿ, ಬಾಗು, ಬಾಗಿ ಎರಡು ಮಡಿಕೆಯಾಗು.
दुनाली– वि. दो नलोवाली। ಎರಡು ನಲ್ಲಿಯು, ಎರಡು ಕೊಳವೆಯು.
दुनियाँ, दुनिया– स्त्री संसार। ವಿಶ್ವ, ಜಗತ್ತು, ಸಂಸಾರ, ಪ್ರಪಂಚ.
दुनियाई– स्त्री. संसार। ಜಗತ್ತು,ವಿಶ್ವ. वि. सासारिक। ಸಾಂಸಾರಿಕ, ಪ್ರಾಪಂಚಿಕ.
दुनियादार– वि. सासारिक, व्यवहार कुशल। ಸಾಂಸಾರಿಕ, ವ್ಯವಹಾರ ಕುಶಲ, ಚತುರ. पु सासारिक बातों में फंसा हुआ व्यक्ति। ಸಂಸಾರದ ಜಂಜಾಟದಲ್ಲಿ ಸಿಕ್ಕ.
दुनियादारी– स्त्री. घरगृहस्थी, स्वार्थ साधन की चतुरता। ಸಂಸಾರ, ಪ್ರಪಂಚ, ಸ್ವಾರ್ಥಸಾಧನೆಯ ಚಾತುರ್ಯ, ಕಪಟಾಚಾರ.
दुनियावी– वि. दे 'दुनियाई'।

**दुनियासाज़**– वि. स्वार्थी, मतलब सिद्ध करनेवाला, चापलूस । ಸ್ವಾರ್ಥಿ, ಕೆಲಸ ಸಾಧಿಸಿಕೊಳ್ಳುವವ, ಮುಖಸ್ತುತಿ ಮಾಡುವವ.

**दुनियासाज़ी**– स्त्री स्वार्थता, चापलूसी । ಸ್ವಾರ್ಥತೆ, ಕೆಲಸ ಸಾಧಿಸಿಕೊಳ್ಳುವಿಕೆ, ಮುಖಸ್ತುತಿ.

**दुनी**– स्त्री दुनिया । ಜಗತ್ತು

**दुनोना**– अक्रि. दे. 'दुनवना'।

**दुपटा, दुपट्टा**– पु कंधेपर डालने का कपडा । ವಲ್ಲಿ, ದೋತರ, ದುಪ್ಪಟಿ, ಅಂಗವಸ್ತ್ರ, ಶಲ್ಯ.

**दुपट्टा तानकर सोना**= निश्चित होकर निद्रा लेना । ನಿಶ್ಚಿಂತನಾಗಿ ಮಲಗು.

**दुपहर, दुपहरिया, दुपहरी**– स्त्री मध्याह्न । ಮಧ್ಯಾಹ್ನ, ನಡುಹಗಲು.

**दुफ़सलि**– वि. दोनो फसलोंमें पैदा होनेवाली चीज । ಎರಡೂ ಋತುಗಳಲ್ಲಿ ಬೆಳೆಯುವ ಧಾನ್ಯ.

**दुबधा**– स्त्री दे 'दुविधा'।

**दुबरा**– वि दे. 'दुबला'।

**दुबराना**– अक्रि दुर्बल या क्षीण होना। ದುರ್ಬಲನಾಗು, ಅಶಕ್ತನಾಗು, ಬಲಗುಂದು.

**दुबला**–वि. दुर्बल, कमजोर । ದುರ್ಬಲ, ಅಶಕ್ತ, ಸೊರಗಿದ, ಕೃಶ, ಬಡಕಲ.

**दुबलाना**– अक्रि. दे. 'दुबराना'।

**दुबलापन**– पु. क्षीणता । ಕ್ಷೀಣತೆ, ದುರ್ಬಲತೆ.

**दुबारा, दोबारा**– क्रिवि दूसरी बार, पुन । ಎರಡನೆಯಸಾರಿ, ಪುನಃ, ಮತ್ತೊಮ್ಮೆ.

**दुविधा**– स्त्री. संदिग्ध अवस्था, संशय, चिंता । ಸಂಶಯ, ಅನುಮಾನ, ಅನಿಶ್ಚಯ, ಸಂದೇಹ, ಚಿಂತೆ, ಕಾಳಜಿ.

**दुबे**– पु ब्रह्मणो का एक भेद। ಬ್ರಾಹ್ಮಣರ ಒಂದು ಪಂಗಡ (ದ್ವಿವೇದಿ).

**दुभाखी, दुभाषिया, दुभाषी**– पु दो भाषाएँ जाननेवाला । ಎರಡು ಭಾಷೆಗಳನ್ನು ಬಲ್ಲವ

**दुमंजिला**– वि दो खंडोवाला । ಎರಡಂತಸ್ತಿನ, ಎರಡು ಮಹಡಿಗಳುಳ್ಳ.

**दुम**– स्त्री. पूँछ । ಬಾಲ, ಪುಚ್ಛ, ಲಾಂಗೂಲ

**—दबाकर भागना**= डरपोक कुत्ते की तरह डरकर भागना । ಅಂಜುಬುರುಕ ನಾಯಿಯ ಹಾಗೆ ಓಡಿಹೋಗು.

**दुमदार**– वि. पूँछवाला । ಬಾಲವುಳ್ಳ, ಪುಚ್ಛವುಳ್ಳ.

**दुमन**– वि खिन्न । ಖಿನ್ನ, ದುಃಖಿತ

**दुमात, दुमाता**– स्त्री. विमाता । ಮಲತಾಯಿ.

**दुमुँहा**– वि दो मुँहोवाला साप । ಎರಡು ಬಾಯಿಯುಳ್ಳ ಹಾವು.

**दुरंगा**– वि. दो रंगोंवाला, दो चाल चलनेवाला, दो तरह का । ಎರಡು ಬಣ್ಣದ, ಮೋಸದ, ಕಪಟದ. ಎರಡು ವಿಧದ, ಎರಡು ತರದ.

दुरंगी– स्त्री. द्विविधा । ಎರಡು ವಿಧ, ಮೋಸ, ಕಪಟ.

दुरंत– वि. प्रचंड, भीषण, कठिण । ಪ್ರಚಂಡ, ಭೀಷಣ, ದೊಡ್ಡ, ಕಠಿಣ.

दुर–पु मोती, छोटीसी वाली । ಮುತ್ತು, ಚಿಕ್ಕ ಮುರು, ಬುಲಾಕು. अव्य. दूर हो । ತೊಲಗು, ದೂರವಾಗು, ಧೂ !

दुरद, द्विरद– पु हाथी । ಆನೆ.

दुरदाम– वि प्रवल, प्रचंड, दुस्साध्य । ಪ್ರಬಲ, ಪ್ರಚಂಡ, ದುಸ್ಸಾಧ್ಯ.

दुरदाल– पु. हाथी । ಆನೆ.

दुरदुराना– सक्रि अपमान पूर्वक अलग करना । ತಿರಸ್ಕಾರದಿಂದ ಓಡಿಸು. ಬೆದರಿಸು, ತೊಲಗಿಸು, ಧಿಕ್ಕರಿಸು, ಅಟ್ಟು.

दुरना– अक्रि. छिपना । ಅಡಗು, ಮರೆಯಾಗು, ಅವಿತುಕೊಳ್ಳು.

दुरमुठ, दुरमुस– पु सड़क कूटने की एक प्रकार की गदा । ರಸ್ತೆಯನ್ನು ಬಡಿದು ಸರಿಮಾಡುವ ಬಡಿಮಣೆ, ದಮ್ಮಸ್ಸು.

दुरस– वि दुरुस्त, ठीक । ಸರಿಯಾದ, ಒಳ್ಳೆಯ.

दुराउ– पु. दे 'दुराव'।

दुराग्रही– वि. हठी । ಹಟಮಾರಿ, ದುರಾಗ್ರಹಿ.

दुराचार– पु अनाचार । ಅನಾಚಾರ, ಕೆಟ್ಟ ನಡತೆ.

दुरादुरी– स्त्री छिपाव । ಮುಚ್ಚುಮರೆ, ಗೌಪ್ಯ.

दुराना– अक्रि छिपना, दूर होना । ಅಡಗು, ಮರೆಯಾಗು, ದೂರವಾಗು, ಸರಿ. सक्रि. छिपाना । ಅಡಗಿಸು, ಬಚ್ಚಿಡು.

दुराव– पु. छिपाव, कपट । ಗುಪ್ತ, ಗೌಪ್ಯ, ಕಪಟ, ಮೋಸ.

दुरित– पु. पाप । ಪಾಪ. वि. पापी । ಪಾಪಿಷ್ಟ.

दुरुखा–वि. जिसके दोनो ओर मुँह हो । ಎರಡೂ ಮಗ್ಗಲು ಬಾಯಿಯುಳ್ಳ.

दुरुस्त– वि. ठीक । ಸರಿಯಾದ, ಶುದ್ಧ, ಉಚಿತ, ಯುಕ್ತ, ತಕ್ಕ, ಸುಸ್ಥಿತಿಯಲ್ಲಿರುವ.

दुरुस्ती– स्त्री. सुधार, मरम्मत । ಸುಧಾರಣೆ, ದುರಸ್ತಿ, ಶುದ್ಧತೆ, ಒಳ್ಳೆಯ ಸ್ಥಿತಿ, ತಿದ್ದುಪಾಟು.

दुरुह, दुरूह– वि. गूढ, मुश्किल । ಗೂಢ, ಕಠಿಣ, ದುರ್ಬೋಧ.

दुरेफ, द्विरेफ– पु. भौरा । ಭ್ರಮರ, ಗುಂಗೀಹುಳ.

दुर्ग–पु. किला । ಕೋಟೆ. वि कठिण । ಕಠಿಣ, ದುರ್ಗಮ.

दुर्गत–वि. बुरी दशाको प्राप्त । ದರಿದ್ರ, ದುರ್ಗತಿಯನ್ನು ಹೊಂದಿದ. स्त्री. दे. 'दुर्गति'।

दुर्गति–स्त्री. दुर्दशा, दुर्गमता । ದುರ್ದಶೆ, ದಾರಿದ್ರ್ಯ, ದುರ್ಗಮತೆ.

दुर्घटना– स्त्री वारदात, दुखद घटना ।

ದುರ್ಘಟನೆ, ಅನಾಹುತ, ಅಪ-ಘಾತ, ಸಂಕಟ, ವಿಪತ್ತು,
**दुर्जय, दुर्जेय–** वि. कठिनतासे जीतने योग्य। ಗೆಲ್ಲಲು ಕಠಿಣವಾದ.
**दुर्दम, दुर्दमनीय, दुर्दम्य–** वि. प्रचंड, जिसे दवाना कठिण हो ಪ್ರಚಂಡ, ಹತ್ತಿಕ್ಕಲು ಕಠಿಣವಾದ.
**दुर्दर–** वि. दे. 'दुर्धर'।
**दुर्दशा–**स्त्री दुर्गति। ದುರ್ಗತಿ,ದುರ್ದಶೆ
**दुर्धर–** वि. जो रोका न जा सके,प्रचंड, ತಡೆಯಲಾಗದ, ಪ್ರಚಂಡ, ತಿಳಿಯದ, ಕಠಿಣ.
**दुर्बोध–** वि. गूढ, क्लिष्ट। ಗೂಢ,ಕಠಿಣವಾದ, ಕ್ಲಿಷ್ಟ.
**दुर्भर–** वि. भारी, दूभर। ಭಾರವಾದ, ಕಠಿಣ, ಅಸಹ್ಯ.
**दुर्भिक्ष, दुर्भिच्छ–** पु. अकाल। ಬರ-ಗಾಲ, ಕ್ಷಾಮ.
**दुर्मूल्य–** वि महँगा। ತುಟ್ಟಿಯಾದ, ಅಧಿಕ ಬೆಲೆಯುಳ್ಳ.
**दुर्र–** पु. मोती। ಮುತ್ತು.
**दुर्रा–** पु. कोडा। ಚಾಟಿ, ಬಾರಕೋ-ಲು, ಕೊರಡೆ.
**दुर्लभ–** वि. दुष्प्राप्य, अद्वितीय। ದುಷ್ಪ್ರಾಪ್ಯ, ಅದ್ವಿತೀಯ
**दुर्वह–** वि कठिनतासे ले जाने योग्य, असह्य। ಹೊರಲು ಕಠಿಣವಾದ, ಅಸಹ್ಯ.
**दुर्वार–** वि. जो रोका न जा सके। ತಡೆಯಲಾಗದ.
**दुलकना–** अक्रि. अस्वीकार करना। ಅಸ್ವೀಕಾರ ಮಾಡು, ಇಲ್ಲೆನ್ನು, ಅಲ್ಲೆನ್ನು.
**दुलखना–** सक्रि. वारवार वतलाना या कहना। ಪದೇಪದೇ ಹೇಳು, ತಿರುಗಿತಿರುಗಿ ಹೇಳು.
**दुलडा–** वि. दो लडों का। ಎರಡು ಸರ ಅಥವಾ ಲಡಿಗಳುಳ್ಳ, ಜೋಡೆಳೆಯ.
**दुलडी–** स्त्री. दो लड़ों की माला। ಎರಡು ಸರ ಅಥವಾ ಎರಡೆಳೆಯ ಮಾಲೆ.
**दुलना–** अक्रि. दे 'डुलना'।
**दुलभ–** वि. दे. 'दुर्लभ'।
**दुलरा–** वि. दे 'दुलारा'।
**दुलराना–** सक्रि. दुलार करना। ಲಲ್ಲೆ ಮಾಡು, ಮುದ್ದಾಡು, ಲಾಲಿಸು, ಮುಂಡಾಡು
**दुलरी–** स्त्री. दो लडो की माला। ಎರಡೆಳೆಯ ಮಾಲೆ.
**दुलहन, दुलाहिन, दुलहिया, दुलही–** स्त्री. नववधू। ವಧು, ಮದುವಣ-ಗಿತ್ತಿ, ಮದುಮಗಳು.
**दुलहा–** पु. दूल्हा, पति, वर। ಮದು-ವಣಿಗ, ಪತಿ, ವರ.
**दुलहेटा–** पु. दुलारा लड़का। ಪ್ರೇಮದ ಮಗ, ಮುದ್ದುಮಗ.
**दुलाना–** सक्रि. दे. 'डुलाना'।
**दुलार–** पु. प्यार। ಪ್ರೇಮ, ಪ್ರೀತಿ, ಲಲ್ಲೆ.

दुलारना– सक्रि. प्यार करना। ಪ್ರೇಮ ಮಾಡು, ಲಲ್ಲೆ ಮಾಡು, ಮುದ್ದಾಡು, ಬೋಳಯಿಸು.

दुलारा– वि. प्यारा । ಅತಿ ಪ್ರಿಯ, ಮುದ್ದು. पु प्यारा पुत्र। ಪ್ರೇಮದ ಮಗ.

दुलारी– वि लाडली। ಮುದ್ದು, ಅತಿಪ್ರಿಯ. स्त्री. प्यारी बेटी । ಮುದ್ದುಮಗಳು.

दुलेहिन, दुलेही– स्त्री. दे 'दुलहिन'।

दुलभ– वि. दे. 'दुर्लभ'।

दुवन– पु दुर्जन, शत्रु, राक्षस । ದುರ್ಜನ, ಶತ್ರು, ರಾಕ್ಷಸ.

दुविधा– स्त्री. दे. 'दुविधा'।

दुशमन– पु. शत्रु । ವೈರಿ, ಶತ್ರು.

दुशमनी– स्त्री दे 'दुश्मनी'।

दुशवार– वि मुश्किल । ಕಠಿಣ, ದುಃಸಹ.

दुशाला– पु पशमीने की दोहरी चादर। ಶಾಲು, ಧಾಬಳಿ.

दुश्मन– पु दे. 'दुशमन'।

दुश्मनी– स्त्री वैर। ವೈರತ್ವ, ಶತೃತ್ವ.

दुसराना–सक्रि दुवारा करना। ಮರಳಿ ಮಾಡು, ಮತ್ತೆ ಮಾಡು.

दुसरिहा– वि साथी, प्रतिद्वंद्वी । ಸಂಗಡಿಗ, ಗೆಳೆಯ, ಪ್ರತಿಸ್ಪರ್ಧಿ.

दुसार, दुसाल– पु आरपार छेद । ಒಂದು ತುದಿಯಿಂದ ಮತ್ತೊಂದು ತುದಿಯವರೆಗೆ ಛೇದಿಸಿದ ತೂತು, ಎಜ್ಜ.

दुसाला– पु दे 'दुशाला'।

दुसूती– स्त्री दुहरे तागों की चादर । ಎರಡೆಳೆಯ ಚಾದರ, ಈರೆಳೆ ದುಪ್ಪಟಿ.

दुसेजा– पु. बड़ी चारपाई । ದೊಡ್ಡ ಪಲಂಗ, ದೊಡ್ಡ ಮಂಚ.

दुस्तर– वि विकट, कठिण । ವಿಕಟ, ಕಠಿಣ.

दुस्सह– वि असह्य। ಅಸಹ್ಯ, ಸಹಿಸಲಾಗದ.

दुहता– पु. नाती। ಮಗಳ ಮಗ.

दुहती– स्त्री बेटी की पुत्री । ಮಗಳ ಮಗಳು, ದೌಹಿತ್ರಿ.

दुहत्था– वि दोनों हाथोंसे किया गया। ಎರಡೂ ಕೈಗಳಿಂದ ಮಾಡಿದ.

दुहना–सक्रि दूध निकालना, निचोड़ना। ಹಾಲು ಹಿಂಡು, ಹಿಂಡು, ನಿಃಸತ್ವ ಮಾಡು.

दुहनी– स्त्री दोहनी। ಹಾಲು ಕರೆವ ಪಾತ್ರೆ.

दुहरा– वि दे. 'दोहरा'।

दुहराना–सक्रि. दुवारा करना या कहना, तह करना। ಮತ್ತೊಮ್ಮೆ ಹೇಳು, ಪುನರುಚ್ಚರಿಸು, ತಿರುಗಿ ಮಾಡು, ಮಡಿಕೆ ಹಾಕು, ಎರಿಗೆ ಮಾಡು.

दुहाई– स्त्री. घोषणा, सहायताके लिये पुकार, सौगंध, दुहने की क्रिया या मजदूरी। ಘೋಷಣೆ, ಪ್ರಕಟಣೆ, ಕರುಣ ಕೂಗು, ಸಹಾಯಕ್ಕಾಗಿ ಕೂಗುವದು, ಆಣೆ, ಶಪಥ, ಹಿಂ-

ಡುವ ಕೆಲಸ ಅಥವಾ ಅದರ ಕೂಲಿ
—देना = सहायता के लिये किसीका नाम लेकर पुकारना । ಸಹಾಯಕ್ಕಾಗಿ ಒಬ್ಬರ ಹೆಸರುಗೊಂಡು ಕೂಗುವದು.
—फिरना=घोषणा करना । ಘೋಷಿಸು
दुहाग– पु. दुर्भाग्य, वैधव्य । ದುರ್ಭಾಗ್ಯ, ವೈಧವ್ಯ
दुहागनि, दुहागिन– स्त्री विधवा । ವಿಧವೆ, ವಿತಂತು.
दुहागिल–वि हतभाग्य, सूना । ಭಾಗ್ಯಹೀನ, ಬರಿದಾದ.
दुहाजू– वि पहली स्त्रीके मर जानेपर दूसरा विवाह करनेवाला । ಪುನರ್ವಿವಾಹಿತ.
दुहाना– सक्रि दूध निकलवाना । ಹಾಲು ಹಿಂಡಿಸು, ಹಾಲು ಕರೆಯಿಸು.
दुहार– वि दूध दुहनेवाला । ಹಾಲು ಹಿಂಡುವವ.
दुहावनी– स्त्री दूध दुहने का शुल्क । ಹಾಲು ಹಿಂಡುವ ಕೂಲಿ, ಹಾಲು ಕರೆಯುವ ಕೂಲಿ.
दुहिता–स्त्री पुत्री । ಮಗಳು,ಹುಡುಗಿ, ಪುತ್ರಿ.
दुहिन– पु. ब्रह्मा । ಬ್ರಹ್ಮದೇವ.
दुहेला– वि कठिण, दुःखित । ಕಠಿಣ, ದುಃಸಾಧ್ಯ, ದುಃಖಿತ.
दूइज– स्त्री. दूज । ದ್ವಿತೀಯೆ (ತಿಥಿ).
दूक– वि. कुछ । ಕೆಲವು, ಸ್ವಲ್ಪ.
दूकान–स्त्री. सौदा बेचने तथा खरीदनेका स्थान । ಅಂಗಡಿ.
दूकानदार– पु. दूकानका मालिक । ಅಂಗಡಿಕಾರ.
दूकानदारी– स्त्री दूकानपर सौदा बेचने का काम । ಅಂಗಡಿಕಾರನ ಕೆಲಸ.
दूखना– सक्रि दोष देना । ದೋಷ ಕೊಡು, ದೂಷಿಸು. अक्रि पीडा होना । ನೋವಾಗು,ಪೀಡೆಯಾಗು.
दूज–स्त्री द्वितीया । ಬಿದಿಗೆ,ದ್ವಿತೀಯೆ.
दूजा– वि अन्य, दूसरा । ಅನ್ಯ, ಎರಡನೆಯ.
दूतिका, दूती– स्त्री कुटनी । ಕುಂಟಿನಗಿತ್ತಿ, ದೂತಿ
दूध– पु दुग्ध । ಹಾಲು, ಕ್ಷೀರ.
—का दूध और पानीका पानी करना= खरा न्याय करना । ಸರಿಯಾಗಿ ನ್ಯಾಯ ಮಾಡು
—के दाँत न टूटना = अनुभवहीन होना । ಅನುಭವ ಹೀನನಾಗಿರು, ಹುಡುಗಾಟಿಕೆ ಹೋಗದಿರು.
—फटना = दूध का छेना और पानी अलग होना । ಹಾಲು ಒಡೆ.
—की मक्खी = तिरस्कृत वस्तु । ತಿರಸ್ಕೃತ ವಸ್ತು.
दूध-पूत– पु. धन और संपत्ति । ಧನ ಮತ್ತು ಸಂಪತ್ತು.
दूधभाई– पु. एक ही स्त्री का दूध पीनेवाले लड़के । ಒಂದೇ ತಾಯಿಯ ಹಾಲುಂಡ ಮಕ್ಕಳು.

दूधमुहाँ, दूधमुख– वि. बालक, जो अभितक माँका दूध पीता हो। ಮೊಲೆಗೂಸು, ಹಾಲು ಉಣ್ಣುವ ಮಗು.

दूधिया– वि दूध के रंगका, जिस में दूध का अंग हो। ಹಾಲಿನ ಬಣ್ಣದ, ಹಾಲಿನ ಅಂಶವುಳ್ಳ एक सफेद पत्थर, एक सफेद घास । ಒಂದು ತರದ ಬಿಳಿಯ ಕಲ್ಲು, ಒಂದು ತರದ ಬಿಳಿಯ ಹುಲ್ಲು.

दून– पु. तराई, घाटी। ಕೊಳ್ಳ, ಘಟ್ಟ

दून, दूना– वि दुगुना। ಎರಡುಪಟ್ಟು, ಇಮ್ಮಡಿಯಾದ, ದ್ವಿಗುಣ.

दूनौ– वि दोनों। ಇಬ್ಬರೂ.

दूब– स्त्री एक तरह की घास । ದೂರ್ವಾ, ಗರಿಕೆ ಹುಲ್ಲು.

दूबदू– क्रिवि मुकाबलेमें। ಎದುರಿನಲ್ಲಿ, ಸಮ್ಮುಖವಾಗಿ.

दूबर, दूबरा– वि दुर्बल, पतला । ದುರ್ಬಲ, ಅಶಕ್ತ, ತಿಳುವಾದ.

दूभर– वि कठिण। ಕಠಿಣ,ಕಷ್ಟವಾದ.

दूमना– अक्रि हिलना। ಅಲ್ಲಾಡು, ತೂಗಾಡು, ಅಲುಗಾಡು.

दूरंदेश– वि. दूरदर्शी। ದೂರದರ್ಶಿ, ಚತುರ, ಜಾಗರೂಕ.

दूरंदेशी– स्त्री. दूरदर्शित्व । ದೂರದರ್ಶಿತ್ವ,ಬುದ್ಧಿವಂತಿಕೆ,ಜಾಣತನ.

दूर– वि. जो फासलेपर हो । ದೂರವಾದ, ಅಂತರದಲ್ಲಿದ್ದ. क्रिवि. फासलेपर । ದೂರದಲ್ಲಿ. स्त्री. फासला। ಅಂತರ, ದೂರ.

दूरदर्शी– वि. दे 'दूरंदेश'।

दूरबीन– स्त्री. दूरदर्शक यंत्र। ದೂರದರ್ಶಕ ಯಂತ್ರ, ದುರ್ಬೀನು.

दूरवर्त्ती– वि. दूरस्थ। ದೂರದಲ್ಲಿರುವ.

दूरी– स्त्री. फासला, अंतर। ಅಂತರ, ದೂರ.

दूलह, दूल्हा– पु. दे. 'दुलहा'।

दूसर, दूसरा– वि अन्य, पहिले के बादका। ಅನ್ಯ, ಎರಡನೆಯ.

दूहना– सक्रि. दे. 'दुहना'।

दूहा– पु. दोहा। ದ್ವಿಪದಿ.

दृग– पु. नेत्र, दृष्टि। ಕಣ್ಣು, ದೃಷ್ಟಿ.

दृढ– वि. पक्का, ठोस, मजबूत। ದೃಢ, ಗಟ್ಟಿಯಾದ, ಬಲವುಳ್ಳ, ಬಲಿಷ್ಠ, ತಾಳಿಕೆಯ.

दे, देई– स्त्री. देवी। ಸ್ತ್ರೀಯರ ಆದರ ಸೂಚಕ ಶಬ್ದ, ದೇವಿ, ಅಮ್ಮ.

देउर– पु. दे. 'देवर'।

देखनहारा– पु देखनेवाला। ನೋಡುವವ, ನಿರೀಕ್ಷಕ.

देखना– सक्रि. लखना, परखना, खोजना, समझना, अनुभव करना, ठीक करना। ನೋಡು, ಅವಲೋಕಿಸು, ಪರೀಕ್ಷಿಸು, ಶೋಧಿಸು, ಹುಡುಕು, ತಿಳಿ, ವಿಚಾರ ಮಾಡು, ಅನುಭವ ಹೊಂದು, ನಿಶ್ಚಯಿಸು.

—सुनना= अनुभव लेना, पता लगाना। ಅನುಭವ ಹೊಂದು, ತಿಳಕೊಳ್ಳು.

देखते देखते– क्रिवि. तुरंत। ಕೂಡಲೆ,

ಸ್ವಲ್ಪ ವೇಳೆಯಲ್ಲಿ.

—रह जाना= अचंभे में पडना । ಚಕಿತನಾಗು.

**देखभाल**– स्त्री निगरानी। ನಿರೀಕ್ಷಣೆ, ಮೇಲ್ವಿಚಾರಣೆ, ಪರಾಂಬರಿಕೆ.

**देखराना, देखरावना**– सक्रि. दे. 'दिखलाना'।

**देखरेख**– स्त्री. दे. 'देखभाल'।

**देखादेखी**– स्त्री साक्षात्कार, दर्शन। ಸಾಕ್ಷಾತ್ಕಾರ, ದರ್ಶನ, ಭೆಟ್ಟಿ. क्रिवि. देखनेके अनुसार । ನೋಡಿದಂತೆ, ಅನುಕರಣ ಮಾಡಿ, ನೋಡಿ ಮಾಡುತ್ತ.

**देखाना**– सक्रि. दे 'दिखाना'।

**देखाव**– पु. **देखावट**– स्त्री ठाटबाट, आडंवर। ಡೌಲು, ಆಡಂಬರ, ಬೆಡಗು.

**देग**– पु. भोजन बनानेका बडा बर्तन । ತಪ್ಪೇಲಿ, ಹಂಡೆ, ಕೊಳಗ.

**देगची**– स्त्री. छोटा देग। ಚಿಕ್ಕ ಹಂಡೆ, ಚಿಕ್ಕ ಕೊಳಗ.

**देन**– स्त्री. ऋण, देनेकी क्रिया या भाव। ಋಣ, ಕೊಟ್ಟ ವಸ್ತು, ಕೊಡುಗೆ, ದಾನ, ಕೊಡುವ ಕೆಲಸ ಅಥವಾ ಭಾವ.

**देनदार**– वि. ऋणी। ಋಣಿ, ಸಾಲಗಾರ.

**देनलेन**– पु. महाजनी का व्यवसाय। ಸಾವುಕಾರಿಕೆ, ಲೇವಾದೇವಿ, ಕೊಡ ಕೊಳ್ಳುವಿಕೆ.

**देना**– सक्रि. अर्पण करना । ಕೊಡು, ನೀಡು, ಒಪ್ಪಿಸು, ಸಲ್ಲಿಸು. पु ऋण। ಋಣ, ಸಾಲ.

**देमान**– पु. दीवान। ಮಂತ್ರಿ, ದಿವಾಣ.

**देय**– वि. देने योग्य, जो देना हो। ಕೊಡಲು ಉಚಿತವಾದ, ಕೊಡತಕ್ಕ.

**देर, देरी**– स्त्री. विलंब, समय। ತಡ, ವಿಲಂಬ, ವೇಳೆ, ಕಾಲ.

**देव**– पु देवता, देवर, बादल, दानव। ದೇವರು, ದೇವತೆ, ಪೂಜ್ಯ ವ್ಯಕ್ತಿ, ಗಂಡನ ತಮ್ಮ, ಮೋಡ, ದಾನವ.

**देवता**– पु देव। ದೇವತೆ, ದೇವರು.

**देवधुनी, देवनदी**– स्त्री. गंगानदी। ಗಂಗಾನದಿ.

**देवर**– पु पतीका छोटा भाई। ಮೈದುನ, ಗಂಡನ ತಮ್ಮ.

**देवरानी**– स्त्री. देवरकी स्त्री । ಗಂಡನ ತಮ್ಮನ ಹೆಂಡತಿ, ಓರಗಿತ್ತಿ, ನೆಗೆಣ್ಣಿ.

**देवल**– पु. देवालय, पुजारी, देवर। ದೇವಾಲಯ, ಗುಡಿ, ಪೂಜಾರಿ, ಮೈದುನ.

**देवाल**– पु. देनेवाला। ದಾತೃ, ಕೊಡುವವ.

**देशनिकाला**– पु. देशसे निकालने का दंड। ಗಡಿಪಾರು ಮಾಡುವ ಶಿಕ್ಷೆ, ಹದ್ದುಪಾರು ಮಾಡುವಿಕೆ.

**देशी, देशीय**– वि. देशका। ಸ್ವದೇಶಿ, ದೇಶದಲ್ಲಿ ತಯಾರಾದ, ದೇಶೀಯ.

**देस**– पु देश। ದೇಶ, ರಾಷ್ಟ್ರ, ನಾಡು.

देसावर– पु विदेश। ಪರದೇಶ, ದೇಶಾಂತರ, ವಿಲಾಯತಿ.

देसी– वि. दे 'देशी'।

देह– स्त्री. शरीर, जीवन। ದೇಹ, ಶರೀರ, ಅಂಗ, ಮೈ, ಜೀವನ.

देहपात– पु मृत्यु। ಮೃತ್ಯು, ಸಾವು.

देहरा– पु देवालय, शरीर। ದೇವಾಲಯ, ಜೈನ ದೇವಾಲಯ, ಬಸ್ತಿ, ಶರೀರ.

देहरि, देहरी, देहली– स्त्री द्वारकी चौखटकी नीचेवाली लकड़ी। ಹೊಸ್ತಿಲು, ಹೊಸಲು.

देहात– पु गाँव। ಹಳ್ಳಿ, ಹಳ್ಳಿಗಾಡು. ಗ್ರಾಮಾಂತರ

देहाती–वि. ग्रामीण, गाँवका। ಹಳ್ಳಿಯ, ಹಳ್ಳಿಗಾಡ, ತಿಳಿಯದವ, ಗ್ರಾಮ್ಯ

दैन– पु दैन्य। ದೈನ್ಯ, ನಮ್ರತೆ.

दैनिक– वि रोजाना। ಪ್ರತಿದಿನದ, ಅನುದಿನದ. पु एक दिनका वेतन। ಒಂದು ದಿನದ ಪಗಾರ.

दैयत– पु दैत्य, राक्षस। ದೈತ್ಯ, ರಾಕ್ಷಸ.

दैया– पु दैव। ದೈವ. अव्य. भय, आश्चर्य या क्लेश सूचक शब्द। ಅಂಜಿಕೆ, ಆಶ್ಚರ್ಯ ಅಥವಾ ದುಃಖೋದ್ಗಾರ.

दैव– पु भाग्य, ईश्वर, आकाश। ಭಾಗ್ಯ, ಈಶ್ವರ, ಆಕಾಶ.

दैववशात्, दैवात्–क्रिवि इत्तिफाकन्। ದೈವಯೋಗದಿಂದ, ಆಕಸ್ಮಾತ್ತಾಗಿ.

दैवी– वि. दैव संबंधी, दैवकृत, आकस्मिक। ದೈವೀ, ದೈವ ಸಂಬಂಧದ, ಈಶ್ವರೀಯ, ಆಕಸ್ಮಿಕ.

दोंकना–अक्रि. गुर्राना। ಗುರುಗುಟ್ಟು.

दो, दोइ– वि २। ಎರಡು.

दोआब, दोआबा– पु दे. 'दुआब'।

दोउ– वि दोनों। ಎರಡೂ, ಇಬ್ಬರೂ.

दोखना– सक्रि दोष लगाना। ದೂಷಿಸು, ದೋಷ ಕೊಡು

दोग़ला– वि जारसे उत्पन्न। ಜಾರ, ಅಕುಲೀನ, ವರ್ಣಸಂಕರ.

दोगुना, दोचंद– वि. दूना। ಇಮ್ಮಡಿ, ಎರಡು ಪಟ್ಟು.

दोच, दोचन– स्त्री दबाव, दु:ख, असमंजस। ಒತ್ತರಿಕೆ, ಪ್ರಭಾವ, ದುಃಖ, ಸಂಶಯ, ಬಿಕ್ಕಟ್ಟು.

दोचना– सक्रि दबाव में डालना। ಯಾವದೊಂದು ಕೆಲಸ ಮಾಡಲು ಒಬ್ಬರನ್ನು ಆಗ್ರಹಪಡಿಸು, ಒತ್ತಾಯ ಪಡಿಸು.

दोज़ख़– पु नरक। ನರಕ.

दोजख़ी– वि दोजख का। ನರಕದ ನಾರಕೀಯ.

दोजग– पु नरक। ನರಕ.

दोज़ानू–क्रिवि घुटनो के बल। ಮೊಳಕಾಲೂರಿ, ಎರಡೂ ಮೊಂಡಿಯೂರಿ.

दोतरफ़ा–वि. दोनो तरफका। ಎರಡೂ ಮಗ್ಗಲಿನ. क्रिवि दोनों ओर। ಎರಡೂ ಕಡೆಗೆ, ಎರಡೂ ಮಗ್ಗಲು, ಉಭಯತ್ರ.

**दोतला, दोतल्ला**– वि दो खंडका। ಎರಡಂತಸ್ತಿನ, ಎರಡು ಮಹಡಿಯ.

**दोन**– पु. दो नदियों या पहाड़ो के बीचका स्थान, दो नदियों का संगम स्थान, दो वस्तुओंका मेल। ಎರಡು ನದಿ ಅಥವಾ ಗುಡ್ಡಗಳ ನಡುವಿನ ಪ್ರದೇಶ, ಸಂಗಮ ಪ್ರದೇಶ,ಸಂಧಿ, ಮಿಲನ.

**दोनला**– वि दो नाल या नलीवाला। ಎರಡು ನಲಿಕೆಗಳುಳ್ಳ.

**दोना**– पु. पत्तों का बना कटोरा। ದ್ರೋಣ, ದೊನ್ನೆ.

**दोनों**– वि. उभय। ಇಬ್ಬರೂ,ಎರಡೂ.

**दोपलिया, दोपल्ली**– वि दो पल्लेवाला, ಎರಡು ಪದರು ಅಥವಾ ಮಡಿಕೆಗಳುಳ್ಳ. स्त्री एक प्रकार की टोपी। ಒಂದು ಪ್ರಕಾರದ ಟೊಪ್ಪಿಗೆ, (ಅರಿವೆಯ ಎರಡು ತುಂಡುಗಳನ್ನು ಕೂಡಿಸಿ ಹೊಲಿದದ್ದು)

**दोपहर**– स्त्री मध्याह्न। ಮಧ್ಯಾಹ್ನ, ನಡುಹಗಲು.

**दोपहरिया, दोपहरी**– स्त्री. दे. 'दोपहर'।

**दोपीठा**– वि. दोनो ओर एक ही जैसा, दोरुखा। ಎರಡೂ ಮಗ್ಗಲು ಒಂದೇ ತರದ, ಎರಡು ಪಾರ್ಶ್ವಗಳುಳ್ಳ.

**दोफसली**– वि दोनों फसलों से संबंध रखनेवाला। ಎರಡೂ ಬೆಳೆಗಳಿಗೆ ಸಂಬಂಧಿಸಿದ.

**दोबल**– पु अपराध, दोष। ಅಪರಾಧ, ತಪ್ಪು, ದೋಷ.

**दोबा**– पु. दे 'दुविधा'।

**दोबारा**– क्रिवि. दूसरी बार, पुनः। ಎರಡನೆಯ ಸಾರೆ, ಪುನಃ, ಮತ್ತೊಮ್ಮೆ.

**दो मंजिला**– वि दुमंजिला। ಎರಡಂತಸ್ತಿನ.

**दो मुँहा**– वि. दो मुँहोवाला। ಎರಡು ಮುಖದ, ಧೂರ್ತ, ಕಪಟಿ

**दोय**– वि दो, दोनों। ಎರಡು, ಎರಡೂ

**दोरंगी**– वि. दोनों ओर चलनेवाला, जिसमें दो रंग हों, कपट, छल। ಒಳಗೊಂದು ಹೊರಗೊಂದು, ಎರಡು ಬಣ್ಣದ, ಕಪಟ, ಮೋಸ.

**दोरसा**– वि जिसमें दो तरहका स्वाद या रस हो, एक प्रकार का पीने का तमाखू। ಎರಡು ರಸ ಅಥವಾ ರುಚಿಯುಳ್ಳ, ಒಂದು ತರದ ಹೊಗೆಸೊಪ್ಪು

**दो राहा**– पु. दो रास्तेवाला स्थान। ಎರಡು ಹಾದಿಗಳು ಕೂಡುವಸ್ಥಳ.

**दोरुखा**– वि दोनो ओर समान रंग या बेलबूटोवाला, जिसके अेक ओर एक रंग और दूसरी ओर दूसरा रंग हो। ಎರಡೂ ಮಗ್ಗಲು ಒಂದೇ ತರದ ಬಣ್ಣ ಅಥವಾ ಕುಸೂತಿಯುಳ್ಳ, ಒಂದು ಮಗ್ಗಲು ಒಂದು ಬಣ್ಣ ಮತ್ತೊಂದು ಮಗ್ಗಲು ಬೇರೆ ಬಣ್ಣ

दौड़धूप, दौड़ादौड़ी– स्त्री. बारबार आनाजाना, परिश्रम, परेशानी । ಓಡಾಟ, ಪರಿಶ್ರಮ, ಪ್ರಯತ್ನ, ವ್ಯಾಕುಲತೆ.

दौड़ना– अक्रि. तेज चलना, फैलना, आक्रमण करना । ಓಡು, ಹಬ್ಬು, ಆಕ್ರಮಣ ಮಾಡು.

दौड़ादौड़ी– स्त्री दौड़धूप, अनेक मनुष्यों का एक साथ इधरउधर दौड़ना, घबराहट। ಓಡಾಟ, ಬಹಳ ಜನರು ಅತ್ತಿತ್ತ ಓಡಾಡುವದು, ಅಂಜಿಕೆ, ವ್ಯಾಕುಲತೆ.

दौड़ान– स्त्री दौड़ने की क्रिया, वेग, आक्रमण, क्रम । ಓಟ, ವೇಗ, ಆಕ್ರಮಣ, ಕ್ರಮ.

दौड़ाना– सक्रि जल्दी जल्दी चलाना, फैलाना । ಓಡಿಸು, ಓಡಾಡಿಸು, ಹಬ್ಬಿಸು, ಹರವು.

दौना– पु द्रोण, एक सुगंधित पौधा। ದ್ರೋಣ, ದವನ. सक्रि दमन करना। ದಮನ ಮಾಡು.

दौर– स्त्री. द्रुतगमन, भ्रमण, प्रभाव, वारी । ಸಂಚಾರ, ತಿರುಗಾಟ, ಭ್ರಮಣ, ಪರ್ಯಟನ, ಪ್ರಭಾವ, ಕ್ರಮ, ವಾಳಿ, ಸರತಿ.

दौर दौरा– पु. जोर । ಪ್ರಾಬಲ್ಯ, ಪ್ರಭಾವ, ಪ್ರಾಧಾನ್ಯ.

दौरा–पु भ्रमण, फेरा, रोगका आक्रमण। ಭ್ರಮಣ, ಸಂಚಾರ, ಬೇನೆಯ ಆಕ್ರಮಣ.

दौरान– पु. दौरा, सिलसिला, काल-परिवर्तन, वारी । ಸಂಚಾರ, ಪ್ರವಾಸ, ಕಾಲಪರಿವರ್ತನ, ಕಾಲ-ಚಕ್ರ, ಸರತಿ, ಕ್ರಮ, ವಾಳಿ.

दौरी– स्त्री डलिया। ಚಿಕ್ಕ ಬುಟ್ಟಿ, ಮುಕ್ಕರಿ.

दौलत– स्त्री. संपत्ति, धन। ಸಂಪತ್ತು, ಧನ, ಐಶ್ವರ್ಯ.

दौलतमंद– वि धनाढ्य। ಶ್ರೀಮಂತ, ಧನಾಢ್ಯ, ಧನವಂತ.

द्यूत– पु. जुआ। ದ್ಯೂತ, ಜೂಜು.

द्यौस– पु दिन। ದಿನ, ದಿವಸ.

द्रुत– वि शीघ्रगामी, पिघला हुआ । ವೇಗವಾಗಿ ನಡೆಯುವ, ಶೀಘ್ರ, ಕರಗಿದ.

द्वार– पु. दरवाजा, मुख, साधन । ಬಾಗಿಲು, ಮುಖ, ಸಾಧನ.

द्वारा– अव्य. जरिये। ಮುಖಾಂತರವಾಗಿ, ಮಾರ್ಗವಾಗಿ

द्विरागमन– पु वधूका पति के घर दूसरी वार आना, गौना। ವಧುವು ಪತಿಯ ಮನೆಗೆ ಎರಡನೆಯ ಸಾರೆ ಬರುವದು, ಶೋಭನಪ್ರಸ್ಥ.

द्विवेदी– पु दे 'दुवे'।

# ध

धका– पु धक्का, चोट । ಆಘಾತ, ಪ್ರಹಾರ, ಹೊಡೆತ.

धगर– पु अहीर । ದನ ಕಾಯುವವ, ಗೊಲ್ಲ, ಕುರುಬ.

धघ– पु. धंधा, बखेडा, झंझट । ಉದ್ಯೋಗ, ಗೊಂದಲ,ಜಂಜಾಟ.

धंधक, धंधरक– पु दुनियाका जंजाल। ಜಂಜಾಟ, ಸಂಸಾರದ ಬವಣೆ.

धधकधोरी– पु. हर घड़ी काममें लगा रहनेवाला। ಹಗಲಿರುಳು ಕೆಲಸದಲ್ಲಿ ತೊಡಗಿದವ.

धंधला– पु ढोंग। ಕಪಟ, ಸೋಗು, ಢೋಂಗ.

धंधा– पु. कामकाज। ಉದ್ಯೋಗ, ವ್ಯವಸಾಯ, ವೃತ್ತಿ, ಕೆಲಸ, ಕಸಬು.

धंधार– स्त्री ज्वाला, लपट। ಜ್ವಾಲೆ, ಅಗ್ನಿಶಿಖೆ.

धंधोर– पु. होली, आग, ज्वाला। ಹೋಳಿ ಹಬ್ಬ, ಉರಿ, ಜ್ವಾಲೆ.

धँबना– सक्रि धौंकना। ತಿದಿ ಒತ್ತು, ಗಾಳಿಹಾಕು(ಅಗ್ನಿ ಪ್ರಜ್ವಲಿಸಲು).

धँसना– अक्रि. गडना, पैठना, नष्ट होना। ಭೇದಿಸು, ನುಗ್ಗು, ವೇಗದಿಂದ ಒಳನೇರು, ಇರಿ, ಹುಗಿ, ಸಿಕ್ಕಿಕೊಳ್ಳು, ಹಾಳಾಗು.

धँसान– स्त्री. धँसाव– पु. धँसने की क्रिया, दलदल, उतार। ಇರಿತ, ತಿವಿತ, ಹೊಗುವಿಕೆ, ಭೇದಿಸುವಿಕೆ, ಕೆಸರು, ಕೊಳಚಿ, ಇಳುಕಲು.

धँसाना– सक्रि घुसाना, पैठाना। ಭೇದಿಸು, ನೇರಿಸು, ತಿವಿ, ಚುಚ್ಚು, ಇರಿ, ಕೂಡ್ರಿಸು.

धँसाव– पु. दे 'धँसन'।

धक– स्त्री. हृदय धडकने का शब्द, उमंग, उद्वेग। ಎದೆ ಹಾರುವಿಕೆ, ಹೃದಯ ಸ್ಫುರಣ, ಉತ್ಸಾಹ, ಉದ್ವೇಗ. क्रिवि. एकाएक, सहसा। ಒಮ್ಮಿಂದೊಮ್ಮೆ, ಅಕಸ್ಮಾತ್ತಾಗಿ.

धकधक करना= उद्वेग के कारण कलेजा धड़कना। ಉದ್ವೇಗದಿಂದ ಎದೆ ಹಾರುವದು, ಗಾಬರಿಯಿಂದ ಹೃದಯ ಸ್ಫುರಣವಾಗುವದು.

धकधकना, धकधकाना– अक्रि हृदय का उद्वेग के कारण शीघ्रता या वेगसे चलना, चमकना, अग्नि का लपट के साथ जलना। ಹೆದರಿಕೆ ಅಥವಾ ಮನಸ್ಸಿನ ಉದ್ವೇಗದಿಂದ ಎದೆ ಬೇಗಬೇಗನೆ ಹಾರುವದು, ಹೊಳೆ, ಜ್ವಾಲೆಜ್ವಾಲೆಯಾಗಿ ಉರಿ.

धकधकाहट– स्त्री. हृदय की धड़कन, खटका। ಹೃದಯಸ್ಫುರಣ,ಅಂಜಿಕೆ.

धकधकी– स्त्री हृदय की धडकन, गले के नीचे का गड्ढा। ಹೃದಯ ಸ್ಫುರಣ,ಅಂಜಿಕೆ, ಕೊರಳ ಕೆಳಗಿನ ತಗ್ಗು.

**धकपक–** स्त्री दे धकधकी। क्रिवि डरते हुये। ಹೆದರುತ್ತ, ನಡುಗುತ್ತ.

**धकपकाना–** अक्रि. जीका धड़कना, डरना, दहलना। ಎದೆ ಡಬಡಬ ಅನ್ನು, ಹೆದರು, ಅಂಜಿಕೆಯಿಂದ ನಡುಗು.

**धका–** पु. धक्का, आघात। ಹೊಡೆತ, ಆಘಾತ.

**धकाना–** सक्रि. जलाना, सुलगाना। ಉರಿಸು, ಹೊತ್ತಿಸು.

**धकापेल–** स्त्री. दे 'धक्कमधक्का'।

**धकारा–** पु. धकधकी, डर, शंका। ಅಂಜಿಕೆ, ಭಯ, ಸಂಶಯ, ಸಂದೇಹ.

**धकियाना, धकेलना–** सक्रि धक्का देना, ढकेलना। ತಳ್ಳು, ದೂಡು, ನೂಕು, ನುಗ್ಗು, ಹಾಯು.

**धकैत–** वि धक्का देनेवाला। ನೂಕುವವ, ದೂಡುವವ, ಹಾಯುವವ.

**धक्कम धक्का–** पु रेलपेल, एक दूसरेको धक्का देना। ಗದ್ದಲ, ದಟ್ಟಣೆ, ನೂಕು ನುಗ್ಗಾಟ, ಧಕ್ಕಾಮುಕ್ಕಿ, ಹೊಡೆದಾಟ.

**धक्का–** पु दे. 'धका'।

**धक्कामुक्की–** स्त्री मारपीट। ಹೊಡೆದಾಟ, ಬಡಿದಾಟ, ಮಾರಾಮಾರಿ.

**धगड, धगडा–** पु उपपति। ಮಿಂಡ, ಉಪಪತಿ, ಜಾರ.

**धगधगाना–** अक्रि. दे 'धड़कना'।

**धगा–** पु सूत्र, डोरा। ಸೂತ್ರ, ದಾರ.

**धचक, धचका–** पु धक्का। ಆಘಾತ, ಹೊಡೆತ.

**धज–** स्त्री सजावट, शोभा, शक्ल। ಶೃಂಗಾರ, ಶೋಭೆ, ಆಕಾರ.

**धजा–** पु. पताका। ಬಾವುಟ, ಧ್ವಜ.

**धजीला–** वि सुंदर ढंगका। ಅಂದವಾದ, ಸುಂದರವಾದ, ಸೊಬಗಿನ.

**धज्जी–** स्त्री. कपडे कागज आदिका पतला टुकडा, लोहे या लकडी की पतली पट्टी। ಚಿಂದಿ, ಹರಕು ಬಟ್ಟೆ, ಕಾಗದದ ಪಟ್ಟಿ, ಕಟ್ಟಿಗೆ ಅಥವಾ ಕಬ್ಬಿಣದ ಪಟ್ಟಿ.

**धज्जियाँ उडाना** = टुकडे टुकडे करना, दुर्गति करना। ಚೂರು ಚೂರು ಮಾಡು, ಸಾಕು ಸಾಕು ಮಾಡು, ಬಹಳ ನಿಂದಿಸು.

**धडंग–** वि नंगा। ಬತ್ತಲೆ, ನಗ್ನ.

**धड–** पु शरीर का स्थूल मध्य भाग, पेडका तना। ಧಡ, ಮುಂಡ, ಬೊಡ್ಡೆ. स्त्री. किसी वस्तुके वेगसे भूमिपर गिरनेका शब्द। ವೇಗವಾಗಿ ಒಂದು ವಸ್ತುವು ನೆಲದ ಮೇಲೆ ಬೀಳುವ ಶಬ್ದ.

**धड़क–** स्त्री धड़कन, खटका। ಹೃದಯ ಸ್ಪಂದನ, ಅಂಜಿಕೆ, ಸಂಶಯ

**धड़कन–** स्त्री हृदय का स्पंदन। ಹೃದಯ ಸ್ಪಂದನ, ಎದೆ ಹಾರುವುದು, ಗುಂಡಿಗೆ ಹಾರುವಿಕೆ.

**धड़कना–** अक्रि. हृदयका धकधक करना। ಎದೆ ಹಾರು, ಗುಂಡಿಗೆಬಡಿ,

ಅದುರು.

धडका– पु धडकन, साहस, खटका, चिडियो को भगानेका पुतला । ಹೃದಯ ಸ್ಫುರಣ, ಎದೆ ಹಾರುವಿಕೆ, ಸಾಹಸ, ಅಂಜಿಕೆ, ಭಯ, ಪಕ್ಷಿಗಳನ್ನು ಅಂಜಿಸುವದಕ್ಕಾಗಿ ಹೊಲದಲ್ಲಿ ಮಾಡಿದ ಮೂರ್ತಿ.

धडकाना– सक्रि डराना । ಅಂಜಿಸು, ಬೆದರಿಸು, ನಡುಗಿಸು.

धडक्का– पु दे 'धडका'।

धड़धडाना–अक्रि धडधड़ शब्द करना। ಧಡ ಧಡ ಶಬ್ದ ಮಾಡು, ಬಾಗಿಲ ಬಡಿ, ಎದೆ ಹಾರು.

धडल्ला–पु धडाका, बडी भीड़ । 'ಧಡ ಧಡ' ಶಬ್ದ, ಬೀಳುವ ಶಬ್ದ, ಸಂದಣಿ.

धडल्लेसे– क्रिवि वेगसे, बेरोकटोक। ವೇಗವಾಗಿ, ಅಂಜಿಕೆ ಇಲ್ಲದೆ, ಆತಂಕವಿಲ್ಲದೆ.

धड़ा– पु. बटखरा, पाँच सेरकी तौल, तराजू, दल । ತೂಕದ ಕಲ್ಲು, ಐದು ಸೇರಿನ ತೂಕ, ಧಡೆ,ತಕ್ಕಡಿ, ದಲ, ಸಮೂಹ.

धडाका–पु धमाका । ಬೀಳುವ ಅಥವಾ ನಡೆಯುವ 'ಧಡ ಧಡ' ಶಬ್ದ.

धडाकेसे– क्रिवि. झटपट । ಲಗುಬಗೆಯಿಂದ, ಶೀಘ್ರವಾಗಿ.

धड़ाधड– क्रिवि लगातार, धड़धड़ शब्दके साथ । ನಿರಂತರ, ಯಾವಾಗಲೂ, ಧಡಧಡ ಸಪ್ಪಳ ಮಾಡುತ್ತ.

धडाम– पु. जोरसे कूदने का शब्द। ವೇಗದಿಂದ ಕೆಳಗೆ ಬೀಳುವ ಶಬ್ದ.

धडी– स्त्री. चार या पाच सेर की तौल। ನಾಲ್ಕು ಅಥವಾ ಐದು ಸೇರಿನ ತೂಕ.

धत– स्त्री बुरी आदत । ಕೆಟ್ಟ ಚಾಳಿ, ದುರಭ್ಯಾಸ.

धत्– अव्य दुतकारने का शब्द । ಧೂ, ಛೀ, ಧತ್.

धतकारना– सक्रि दुतकारना । ಧಿಕ್ಕರಿಸು, ತಿರಸ್ಕರಿಸು, ತೊಲಗಿಸು.

धता– वि. दूर किया हुआ, हटाया हुआ । ದೂರೀಕರಿಸಿದ, ತೊಲಗಿಸಿದ.

धतूर– पु. तुरही । ತುತೂರಿ. दे 'धतूरा'।

धतूरा– पु एक पौधा । ದತ್ತೂರಿ, ಮದ್ದುಗುಣಿಕೆ.

धधक– स्त्री. आगकी लपट, लौ । ಅಗ್ನಿಶಿಖೆ, ಕಾವು, ಜ್ವಾಲೆ, ಉರಿ.

धधकना– अक्रि. लपटके साथ जलना, भडकना। ಪ್ರಜ್ವಲಿಸು,ಶಿಖೆಗಳೇಳು, ಹೆಚ್ಚಾಗು.

धधकाना– सक्रि. प्रज्वलित करना। ಬೆಂಕಿ ಹೊತ್ತಿಸು, ಉರಿಸು, ಧಗಧಗನೆ ಉರಿಸು.

धन–पु. दौलत, अतिप्रिय वस्तु, जोड़का चिह्न । ಹಣ, ಸಂಪತ್ತು, ಆಸ್ತಿ, ಅತಿ ಪ್ರಿಯ ವಸ್ತು, ಅಧಿಕ ಚಿಹ್ನೆ.

स्त्री. स्त्री । ಹೆಂಗಸು, ಲಲನೆ.

—दौलत = मालमत्ता। ಆಸ್ತಿಪಾಸ್ತಿ, ಸಿರಿಸಂಪತ್ತು.

**धनक**–पु. धनुष, धनेच्छा, एक प्रकारकी ओढनी । ಧನುಷ್ಯ, ಹಣದ ಇಚ್ಛೆ, ಒಂದು ಪ್ರಕಾರದ ಹೊದಿಕೆ.

**धनतेरस**–स्त्री. आश्विन कृष्ण त्रयोदशी । ಧನ ತ್ರಯೋದಶಿ (ಆಶ್ವಿನ ಬ. ತ್ರಯೋದಶಿ.)

**धनधाम**– पु. धन और घर। ಆಸ್ತಿ-ಪಾಸ್ತಿ, ಸಂಪತ್ತು.

**धनधारी, धनपति**– पु. कुबेर, धनी । ಕುಬೇರ, ಶ್ರೀಮಂತ.

**धनवत, धनवान्**– वि धनी । ಶ್ರೀ-ಮಂತ.

**धना, धनि**– स्त्री. वधू, स्त्री । ವಧು, ಸ್ತ್ರೀ, ಯುವತಿ.

**धनिया**– पु. एक मसाला, धनि । ಕೋತಂಬರಿ, ವಧೂ, ಯುವತಿ.

**धनी**–वि. धनवान् । ಶ್ರೀಮಂತ, ಧನಿಕ. स्त्री. युवती स्त्री, वधू । ಯುವತಿ, ವಧು.

**धनु, धनुक**– पु धनुष, एक राशिका नाम । ಧನುಷ್ಯ, ಬಿಲ್ಲು, ಒಂದು ರಾಶಿಯ ಹೆಸರು.

**धनुआ**–पु कमान, रुई धुननेका औजार । ಬಿಲ್ಲು, ಧನುಷ್ಯ, ಅರಳೆ ಹಿಂಜುವ ಉಪಕರಣ.

**धनुकवाई**– स्त्री एक प्रकारका वायु-रोग । ಧನುರ್ವಾತ.

**धनुद्धर, धनुद्धारी**– पु तीरदाज । ಧನುರ್ವಿದ್ಯೆ ಬಲ್ಲವ, ಯುದ್ಧ ನಿಪುಣ.

**धनुहाई**– स्त्री. धनुर्युद्ध । ಧನುರ್ಯುದ್ಧ.

**धन्ना**– पु धरना । ಸತ್ಯಾಗ್ರಹ, ಪಿಕೆ-ಟಿಂಗ वि धन्य । ಧನ್ಯ.

**धन्नासेठ**– पु बडा धनी । ದೊಡ್ಡ ಶ್ರೀಮಂತ.

**धन्यवाद**–पु प्रशंसा, साधुवाद । ಧನ್ಯ ವಾದ, ಆಭಾರ ಮನ್ನಣೆ, ಅಭಿ ನಂದನೆ.

**धन्वा**– पु. कमान । ಬಿಲ್ಲು, ಧನುಷ್ಯ.

**धन्वी**– वि धनुद्धर । ಧನುರ್ವಿದ್ಯೆ ಬಲ್ಲವ.

**धप**– स्त्री किसी भारी चीजके गिरनेकी आवाज, चपत । ದೊಡ್ಡ ವಸ್ತು ಬೀಳುವ ಶಬ್ದ, ಕೆನ್ನೆ ಏಟು, ತಪ ರಾಕು.

**धपना**– अकि. दौडना, मारना पीटना । ಓಡು, ವೇಗವಾಗಿ ನಡೆ, ಹೊಡೆ, ಬಡಿ.

**धप्पा**– पु तमाचा, थपाड, हानि । ಕೆನ್ನೆ ಏಟು, ತಪರಾಕು, ಹೊಡೆತ, ಹಾನಿ.

**धप्पाड**– स्त्री दौड । ಓಟ, ಪೌಡು.

**धब्बा**– पु. दाग, कलंक । ಕರೆ, ಚುಕ್ಕೆ, ಕಲಂಕ.

**धम, धमक**– स्त्री भारी चीजके गिरने की आवाज, आघात । ದೊಡ್ಡ ಪ-ದಾರ್ಥವು ಬೀಳುವ ಶಬ್ದ, ಪೆ-

ಡಿತ, ಆಘಾತ, ಸಪ್ಪಳ.

धसकना– अक्रि धम शब्दके साथ गिरना, रहरहकर पीडा होना, प्रहार करना, धावा करना। ಧೊಪ್ಪೆಂದು ಬೀಳು, ಶೂಲೆಯಾಗು, ನೋಯು, ಹೊಡೆ, ದಾಳಿ ಮಾಡು.

धमकाना–सक्रि भय दिखाना, डॉटना। ಅಂಜಿಸು, ಬೆದರಿಸು, ಗದರಿಸು.

धमकी– स्त्री घुडकी, डाटडपट। ಬೆದರಿಕೆ, ಗದರಿಕೆ, ಹೆದರಿಕೆ.

धमाका– पु. दे 'धम'।

धमाचौकडी– स्त्री. कूदफॉद, ऊधम। ಜಿಗಿದಾಟ, ಕೋಲಾಹಲ, ಉಪದ್ರವ.

धमाधम– क्रिवि. 'धमधम' शब्दके साथ। 'ಧಮ್ ಧಮ್' ಸಪ್ಪಳ ಮಾಡುತ್ತ.

धमार– स्त्री. उपद्रव, उछलकूद। ಉಪದ್ರವ, ಗಲಾಟೆ, ನೆಗೆದಾಟ.

धमारी– वि. उपद्रवी। ಉಪದ್ರವಿ, ತುಂಟ. स्त्री. होली की क्रीडा। ಹೋಳಿ ಹಬ್ಬದ ಆಟ.

धमिका– स्त्री. लोहारकी स्त्री। ಕಮ್ಮಾರತಿ, ಕಮ್ಮಾರನ ಹೆಂಡತಿ.

धमूका– पु. आघात, घूसा। ಆಘಾತ, ಪ್ರಹಾರ, ಗುದ್ದು.

धयना– अक्रि. दौड़ना। ಓಡು.

धरक– स्त्री. धरका–पु. दिलकी धडकन, खटका। ಹೃದಯ ಸ್ಪಂದನ, ಅಂಜಿಕೆ, ಸಂಶಯ.

धरकना– अक्रि. दे 'धडकना'।

धरणि, धरणी– स्त्री पृथिवी। ಪೃಥ್ವಿ, ಭೂಮಿ.

धरता– पु. ऋणी, किसी कार्यका भार अपने ऊपर लेनेवाला। ಸಾಲಗಾರ, ಋಣಿ, ಕಾರ್ಯಭಾರವನ್ನು ವಹಿಸುವವ, ಕಾರ್ಯ ನಿರ್ವಾಹಕ.

धरती– स्त्री. पृथ्वी। ಪೃಥ್ವಿ, ಭೂಮಿ.

धरन– स्त्री. टेक, हठ, गर्भाशय, एक नस, धरती, पाटन आदिका भार संभालनेवाली लकड़ी। ಆಧಾರ, ಹಟ, ಆಗ್ರಹ, ಗರ್ಭಾಶಯ, ಒಂದು ನಾಡಿ, ಭೂಮಿ, ತೊಲೆ, ಜಂತಿ.

धरना– सक्रि. पकड़ना, रखना, ग्रहण करना, बंधक रखना, धारण करना। ಹಿಡಿ, ಇಡು, ಗ್ರಹಣ ಮಾಡು, ಸ್ವೀಕರಿಸು, ಅಡವು ಇಡು, ಒತ್ತೆ ಇಡು, ಧರಿಸು, ತೊಡು. पु. हठपूर्वक किसीके दरवाजेपर बैठना। ಸತ್ಯಾಗ್ರಹ, ಪಿಕೆಟಿಂಗು, ಮುಷ್ಕರ.

धरनी– स्त्री. पृथ्वी। ಪೃಥ್ವಿ, ಭೂಮಿ.

धरनेत–पु. धरना देनेवाला। ಪಿಕೆಟಿಂಗ ಮಾಡುವವ, ಮುಷ್ಕರ ಮಾಡುವವ, ತಗಾದೆ ಮಾಡುವವ.

धरषना– सक्रि. चूर्ण करना, मलना, दबाना। ಪುಡಿ ಮಾಡು, ತಿಕ್ಕು, ಒತ್ತು.

धरसना– सक्रि. डॉटना। ಬೆದರಿಸು, ಗದರಿಸು, ಒತ್ತು. अक्रि. सहम

जाना । ಅಂಜು,ಭಯಭೀತನಾಗು, ಹೆದರು.

धरहर–स्त्री. धरपकड, धैर्य, वीचबचाव । ಹಿಡಿಯುವದು, ಕೈದು ಮಾಡು ವದು, ಧೈರ್ಯ, ಸಹನೆ, ತಾಳ್ಮೆ, ಮಧ್ಯಸ್ಥಿಕೆ.

धरहरा– पु मीनार । ಮಿನಾರ, ಗೋಪುರ, ಬುರುಜು

धराऊ– वि बहुमूल्य, बहुत दिनोंका रखा हुआ । ಬೆಲೆಯುಳ್ಳ, ಬಹಳ ದಿನಗಳಿಂದ ಕಾದಿಟ್ಟ, ಭದ್ರವಾಗಿ-ಟ್ಟಿರುವ.

धरातल– पु पृथ्वी, लंबाई और चौडाई का गुगनफल । ಪೃಥ್ವಿ, ಮೇಲ್ಮೈ, ಕ್ಷೇತ್ರಫಲ.

धराना–सक्रि पकडाना, निश्चय कराना । ಹಿಡಿಸು, ಕೈದು ಮಾಡಿಸು, ನಿಶ್ಚಯಿಸು

धराहर– पु दे. 'धरहरा'।

धरी– स्त्री रखनी. कानमें पहिरनेका एक गहना । ಇಟ್ಟುಕೊಂಡವಳು, ಕಿವಿಯ ಒಂದು ಆಭರಣ.

धरैया– पु पकड़नेवाला, धारण करनेवाला । ಹಿಡಿಯುವವ, ಧರಿಸುವವ

धरोहर– पु. अमानत । ಠೇವ, ಅಮಾನತ್ತು.

धर्त्ता– पु धारन करनेवाला । ಧರಿಸುವವ, ವಹಿಸುವವ

धर्मभीरु– वि. धर्मसे डरनेवाला, धर्म-परायण । ಧರ್ಮಭೀರು, ಧರ್ಮಪರಾಯಣ.

धर्षण– स्त्री. अपमान, अनादर, संभोग, आक्रमग, शिव, असहनशीलता । ಅಪಮಾನ,ಅನಾದರ,ಸಂಭೋಗ, ಆಕ್ರಮಣ, ದಾಳಿ, ಶಿವ, ಅಸಹಿಷ್ಣುತೆ.

धवल– वि सफेद । ಶುಭ್ರ,ಬಿಳಿಯ, ನಿರ್ಮಲ. पु बैल । ಎತ್ತು.

धवलना–सक्रि उज्वल बनाना, प्रकाश-युक्त करना । ಬೆಳಗು, ಕಾಂತಿ ಕೊಡು, ಪ್ರಕಾಶಯುಕ್ತ ಮಾಡು.

धवला– वि सफेद । ಬಿಳಿಯ,ಶುಭ್ರ. स्त्री सफेद गाय, श्वेत वर्णवाली स्त्री । ಬಿಳಿಯ ಆಕಳು, ಬಿಳಿಯ ಬಣ್ಣದ ಸ್ತ್ರೀ.

धवाना– सक्रि दौडाना । ಓಡಿಸು, ಅಟ್ಟು.

धस– पु डुबकी । ಮುಳುಕ, ಮುಳುಗುವದು, ಇಳಿಯುವಿಕೆ.

धसक, धसकन– स्त्री सूखी खाँसी, डर, ईर्ष्या, डाह । ಒಣ ಕೆಮ್ಮು, ಅಂಜಿಕೆ, ಭಯ, ಈರ್ಷೆ, ದ್ವೇಷ, ಅಸೂಯೆ.

धसकना–अक्रि. नीचेको धँसना, दबना, डाह करना, डरना । ಕೆಳಗೆ ಇಳಿ, ಒಳಸೇರು, ಕುಸಿ, ದ್ವೇಷಿಸು, ಮತ್ಸರ ಪಡು, ಅಂಜು.

धसन– पु. दलदल, पैठना । ಕೊಳಚೆ, ಕೆಸರು, ಜೌಗು, ಇಳಿಯುವಿಕೆ

धसना, धसमसाना– अक्रि नीचेको

**पढंत**– स्त्री. पढनेकी क्रिया या भाव, जादू । ಓದು, ಅಭ್ಯಾಸ, ಪಠನ, ಜಾದು.

**पढंता**– वि पढनेवाला । ಓದುವವ, ಪಾಠಕ.

**पढ़ना**– सक्रि. बाँचना, रटना । ಓದು, ಜಪಿಸು, ಪಠಣೆಮಾಡು, ಕಲಿ.

**पढ़वाना**– सक्रि बँचवाना । ಎರಡನೆಯವರಿಂದ ಓದಿಸು, ಶಿಕ್ಷಣ ಕೊಡಿಸು.

**पढाई**–स्त्री अध्ययन, अध्यापन, पढानेका परिश्रमिक । ಅಭ್ಯಾಸ, ಓದುವಿಕೆ, ಅಧ್ಯಯನ, ಕಲಿಸುವಿಕೆ, ಓದಿಸುವದು, ಅಧ್ಯಾಪನ, ಕಲಿಸುವ ಪಾರಿಶ್ರಮಿಕ, ಗುರುದಕ್ಷಿಣೆ.

**पढ़ाना**– सक्रि सिखाना । ಕಲಿಸು, ಓದಿಸು, ತಿಳಿಸು, ಬೋಧಿಸು.

**पढ़ैया**– पु. पढनेवाला । ಓದುವವ, ಕಲಿಯುವವ-

**पण**– पु प्रतिज्ञा, जूआ, दाँव, व्यापार, एक प्राचीन सिक्का, मजदूरी । ಪ್ರತಿಜ್ಞೆ, ಜೂಜು ಆಟ, ಯುಕ್ತಿ, ವ್ಯಾಪಾರ, ಒಂದು ಪ್ರಾಚೀನ ನಾಣ್ಯ, ಪಾರಿಶ್ರಮಿಕ.

**पणव**–पु. छोटा नगाडा । ಚಿಕ್ಕನಗಾರಿ.

**पतंग**– पु. पक्षी, गुड्डी, पतिंगा, सूर्य । ಪಕ್ಷಿ, ಪತಂಗ, ಗಾಳಿಪಟ, ದೀಪದ ಹುಳು, ಸೂರ್ಯ.

**पतंगछुरी**– स्त्री. चुगुलखोर । ಚಾಡಿ ಹೇಳುವವ, ಜಗಳ ಹಚ್ಚುವವ.

**पतंगबाज**–पु पतंगका शौकीन । ಗಾಳಿಪಟವನ್ನು ಹಾರಿಸುವ ಚಟವುಳ್ಳವ

**पतंगम**– पु पक्षी । ಪಕ್ಷಿ, ಹಕ್ಕಿ.

**पतंगा**– पु फतिंगा, उड़नेवाला कीडा, चिनगारी । ದೀಪದ ಹುಳು, ಹಾರುವ ಹುಳು, ಬೆಂಕಿಯ ಕಿಡಿ.

**पत**– स्त्री प्रतिष्ठा । ಪತ್ತು, ಪ್ರತಿಷ್ಠೆ पु पति । ಸ್ವಾಮಿ, ಪತಿ.

**पतझड, पतझर, पतझाड, पतझार**– स्त्री. शिशिर ऋतु । ಶಿಶಿರ ಋತು, ಎಲೆಯುದುರುವ ಕಾಲ

**पतन**– पु. गिरना, अधोगति । ಪತನ, ಬೀಳುವಿಕೆ, ನಾಶ, ಅಧೋಗತಿ.

**पतपानी**– पु प्रतिष्ठा । ಪ್ರತಿಷ್ಠೆ, ಮರ್ಯಾದೆ.

**पतर**– पु पत्ता । ಎಲೆ. वि पतला । ದುರ್ಬಲ, ತೆಳುವಾದ.

**पतरा**– वि दे 'पतला' ।

**पतरी**– स्त्री पत्तल । ಎಲೆ, ಪತ್ರಾವಳಿ, ಊಟದೆಲೆ, ಎಡೆ.

**पतला**– वि. महीन, निर्बल, कृश । ತಿಳುವಾದ, ತೆಳ್ಳಗಾದ, ನಿರ್ಬಲ, ಅಶಕ್ತ, ಕೃಶವಾದ.

**पतलाई**– स्त्री. **पतलापन**– पु. पतराई । ತಿಳುತನ, ಕೃಶತೆ, ಬಡಕಲು, ಕ್ಷೀಣತೆ.

**पतलून**– पु. अंग्रेजी ढंगका पाजामा । ಇಜಾರು, ಚಲ್ಲಣ, ಪ್ಯಾಂಟು

**पतलो**– स्त्री. नरकंडा । ಚಪ್ಪರ ಹೊದಿಸಲು ಉಪಯೋಗಿಸುವ ಒಂದು

ತರದ ಹುಲ್ಲು, ಮೆದೆ.

**पतवर**– क्रिवि. पंक्ति रूपमे, बराबर बराबर। ಸಾಲಾಗಿ,ಸರಿಯಾಗಿ

**पतवार, पतवारी**– स्त्री. नावके पीछेका वह त्रिकोण भाग जिसके घुमानेसे नाव घूम जाती है। ಹಡಗು ನಡೆಸುವ ಯಂತ್ರ, ಚುಕ್ಕಾಣಿ

**पतस**– स्त्री. पक्षी। ಪಕ್ಷಿ, ಹಕ್ಕಿ

**पता**– पु ठिकाना, खबर, खोज, भेद, चिह्न। ವಿಳಾಸ, ಪತ್ತೆ, ಸುದ್ದಿ, ಶೋಧ, ಸುಳಿವು, ರಹಸ್ಯ, ಚಿಹ್ನೆ. **पतेकी बात**=भेद खोलने की बात। ರಹಸ್ಯ ತಿಳಿಸುವ ಮಾತು.

**पताई**– स्त्री. सूखी हुयी पत्तियोका ढेर। ಉದುರಿದ ಎಲೆಗಳ ಗುಂಪು, ತರಗೆಲೆ.

**पताका**– पु. झंडा। ಧ್ವಜ, ಬಾವುಟ, ಪತಾಕೆ.

**पतार**– पु. पाताल, जंगल। ಪಾತಾಳ, ಅರಣ್ಯ.

**पतावर**–पु. सूखे पत्ते। ಒಣ ಎಲೆಗಳು.

**पतिंग**– पु फतिंगा। ಪತಂಗ, ಶಲಭ, ದೀಪದ ಹುಳು.

**पति**– पु. स्वामी, कांत। ಒಡೆಯ, ಪತಿ, ಗಂಡ. स्त्री. लज्जा, मर्यादा। ಮರ್ಯಾದೆ, ಪ್ರತಿಷ್ಠೆ.

**पतिआना, पतियाना, पत्याना**– सक्रि. एतबार करना। ನಂಬು, ನೆಚ್ಚು, ವಿಶ್ವಾಸವಿಡು.

**पतिआर, पतिआरा**– पु. विश्वास। ವಿಶ್ವಾಸ, ನಂಬುಗೆ, ಶ್ರದ್ಧೆ. वि विश्वसनीय। ವಿಶ್ವಸನೀಯ.

**पतित**– वि. गिरा हुआ, नीच, पापी। ಬಿದ್ದ, ಅಧೋಗತಿಗಿಳಿದ, ನೀಚ, ಪಾಪಿಷ್ಟ.

**पतितपावन**– वि पापियो को तारनेवाला। ಪತಿತರನ್ನು ಉದ್ಧರಿಸುವವ. पु ईश्वर। ಈಶ್ವರ.

**पतिदेवता, पतिदेवा**– वि स्त्री, पतिव्रता। ಪತಿವ್ರತೆ, ಪತಿವ್ರತಾ ಸ್ತ್ರೀ.

**पतियार**– वि. दे 'पतिआर'।

**पतियारा**– पु दे. 'पतिआरा'।

**पतीजना, पतीनना**– सक्रि. पतियाना। ನಂಬು, ನೆಚ್ಚು, ವಿಶ್ವಾಸವಿಡು.

**पतीर**– स्त्री. पंक्ति। ಸಾಲು,ಪಂಕ್ತಿ.

**पतीली**– स्त्री. एक प्रकार का बर्तन। ಬೋಗುಣಿ, ಬುಟ್ಟಿಯಂಥ ಪಾತ್ರೆ, ಡಬರಿ.

**पतुकी**– स्त्री. हाँड़ी, पतीली। ಗಡಿಗೆ, ಮಡಿಕೆ, ಬೋಗುಣಿ, ಡಬರಿ, ತಪ್ಪಲೆ.

**पतुरिया**– स्त्री वेश्या। ವೇಶ್ಯೆ, ಸೂಳೆ.

**पतूख, पतूखी**– स्त्री. छोटा दोना। ಸಣ್ಣ ದ್ರೋಣ.

**पतोखा**– पु दोना। ದ್ರೋಣ, ದೊನ್ನೆ.

**पतोखी**– स्त्री. पत्तो का बना छोटा छाता, छोटा दोना। ತೆಂಗಿನ ಗರಿಯ ಕೊಡೆ, ಚಿಕ್ಕ ದೊನ್ನೆ, ದ್ರೋಣ.

**पतोह, पतोहू**– स्त्री. पुत्रवधू। ಸೊಸೆ,

ವಧು.

**पतौआ, पतौवा**– पु. पत्ता । ಎಲೆ, ಪತ್ರ, ಪರ್ಣ.

**पत्तर**–पु. धातु का चिपटा लंबा टुकड़ा। ಲೋಹದ ತೆಳುವಾದ ತಗಡು, ರೇಕು. स्त्री. दे. 'पत्तल'।

**पत्तल**– स्त्री. थाली का काम देनेवाला पत्तों का पात्र, पत्तलमें परोसी हुयी भोजन सामग्री । ಊಟದೆಲೆ, ಎಡೆ, ಒಬ್ಬನಿಗೆ ಸಾಕಾಗುವಷ್ಟು ಅನ್ನ.

**पत्ता**– पु. पर्ण, धातु की चादर, कागज का मोटा टुकड़ा । ಎಲೆ, ಪತ್ರ, ತಗಡು, ಕಾಗದದ ದೊಡ್ಡ ತುಂಡು, ಹಾಳೆ.

**पत्ती**– स्त्री. छोटा पत्ता, फूल की पॅखड़ी, हिस्सा । ಚಿಕ್ಕ ಎಲೆ, ಹೂವಿನ ರೇಕು, ಪುಷ್ಪದಲ, ಭಾಗ, ಪಾಲು.

**पत्तीदार**– पु. दे. 'पट्टीदार'।

**पत्थर**–पु. पाषाण, ओला, रत्न। ಕಲ್ಲು, ಹರಳು, ಆಣೆಕಲ್ಲು, ರತ್ನ.

**—पड़ना**= नष्ट होना । ಹಾಳಾಗು, ನಾಶವಾಗು.

**—की लकीर**= सर्वदा वनी रहनेवाली वस्तु। ವಜ್ರಲೇಪ, ನಾಶವಾಗದ ವಸ್ತು.

**—चटाना**= पत्थर पर घिसकर शस्त्र चोखा करना। ಶಸ್ತ್ರಗಳನ್ನು ಸಾಣೆ ಹಿಡಿಸು, ಮಸೆ, ತಿಕ್ಷ್ಣ.

**—पर दूब जमना**= असंभव घटना हो जाना। ಅಸಂಭವ ಘಟನೆಯಾಗು.

**—से सिर मारना**= व्यर्थ श्रम करना। ವ್ಯರ್ಥವಾಗಿ ಪರಿಶ್ರಮ ಮಾಡು.

**पत्थरकला**– पु. पुराने ढंग की वंदूक। ಹಳೆ ತರಗತಿಯ ಬಂದೂಕ.

**पत्थरचटा**– पु एक तरह का साँप, एक घास, कंजूस। ಒಂದು ತರದ ಹಾವು, ಒಂದು ತರದ ಹುಲ್ಲು, ಕೃಪಣ, ಜೀನ, ಲೋಭಿ.

**पत्नी**– स्त्री. भार्या । ಸ್ತ್ರೀ, ಹೆಂಡತಿ.

**पत्याना**– सकि. दे. 'पतिआना'।

**पत्यारा**– पु. दे. 'पतियारा'।

**पत्यारी**– स्त्री. पंक्ति । ಸಾಲು, ಪಂಕ್ತಿ.

**पत्र**–पु. चिट्ठी, पत्ता, पृष्ठ, पख। ಪತ್ರ, ಪತ್ರಿಕೆ, ಎಲೆ, ತಗಡು, ಪುಟ, ಕಾಗದ, ರೆಕ್ಕೆ.

**पत्रकार**–पु. समाचार पत्र का संपादक। ಸಂಪಾದಕ, ವೃತ್ತಪತ್ರ ನಡೆಯಿಸುವವ.

**पत्रवाहक**– पु. हरकारा। ಪತ್ರ ತಂದು ಮುಟ್ಟಿಸುವವ, ಪೋಸ್ಟಮನ್, ಓಲೆಕಾರ.

**पत्रा**– पु. पंचाग, पन्ना। ಪಂಚಾಂಗ, ಪುಟ, ಪಾನು, ಹಾಳೆ.

**पत्रिका**– स्त्री. चिट्ठी, समाचार पत्र, छोटा लेख, पत्ती । ಪತ್ರ, ವೃತ್ತಪತ್ರ, ಚಿಕ್ಕ ಲೇಖ, ಚಿಕ್ಕ ಎಲೆ.

**पत्री**– स्त्री. वाण, पक्षी, पर्वत, वाज, पेड़ । ಬಾಣ, ಪಕ್ಷಿ, ಪರ್ವತ, ಗಿಡಗ, ಮರ, ಗಿಡ. स्त्री. चिट्ठी, छोटा लेख, लिपि । ಪತ್ರ,

ಚಿಕ್ಕ ಲೇಖ, ಅಕ್ಷರ. वि पत्रयुक्त । ಎಲೆಗಳುಳ್ಳ.

**पथ–** पु मार्ग, विधान । ಮಾರ್ಗ, ರೀತಿ, ವಿಧಾನ, ದಾರಿ.

**पथदर्शक, पथप्रदर्शक–** वि रास्ता दिखलानेवाला । ಹಾದಿ ತೋರಿಸು-ವವ.

**पथरना–** सक्रि पत्थरपर औजार तेज करना । ಆಯುಧಗಳನ್ನು ಮಸೆ, ತಿಕ್ಕು, ಸಾಣೆ ಹಿಡಿಸು.

**पथराना–** अक्रि. कड़ा हो जाना, स्तब्ध हो जाना । ಬಿರುಸಾಗು, ಸ್ತಬ್ಧ-ವಾಗು, ಜಡವಾಗು, ಕಲ್ಲಾಗು.

**पथरी–** स्त्री. चकमक पत्थर, पत्थर का वर्तन, एक रोग, सिल्ली । ಮಿಂಚು-ಹರಳು, ಕಲ್ಲಿನ ಪಾತ್ರೆ, ಕಲ್ಲು-ಬಟ್ಟಲು, ಮೂತ್ರಾಶಯದಲ್ಲಿ ಹರಳು ಆಗುವ ರೋಗ, ಸಾಣೆಕಲ್ಲು, ಮಸೆಗಲ್ಲು.

**पथरीला–** वि. पत्थरमय। ಕಲ್ಲುಗಳುಳ್ಳ, ಕಲ್ಲಿನ.

**पथरौटा–** पु. **पथरौटी–** स्त्री पथरी । ಕಲ್ಲುಬಟ್ಟಲು.

**पथिक, पथी–** पु. यात्री । ಹಾದಿಕಾರ, ದಾರಿಕಾರ, ಪಥಿಕ.

**पथ्‌–** पु पथ, मार्ग। ಮಾರ್ಗ, ಪಥ, ಹಾದಿ.

**पथेरा–** पु. ईंटे पाथनेवाला, कुम्हार । ಇಟ್ಟಂಗಿ ಮಾಡುವವ, ಕುಂಬಾರ.

**पथोरा–** पु. गोबर पाथने का स्थान। ಸೆಗಣಿ ತಟ್ಟುವ ಸ್ಥಳ, ಕುಳ್ಳು ಬಡಿಯುವ ಸ್ಥಳ.

**पद–** पु पाँव, स्थान, चिह्न, प्रदेश, व्यवसाय, उपाधि, भजन, शब्द । ಕಾಲು, ಪಾದ, ಸ್ಥಾನ, ಚಿಹ್ನೆ, ಪ್ರದೇಶ, ವ್ಯವಸಾಯ, ಉದ್ಯೋಗ, ಪದವಿ, ಹುದ್ದೆ, ಪದ, ಭಜನ, ಕವಿತೆಯ ಪದ, ಚರಣ, ಶಬ್ದ.

**पदग, पदचर–** पु. पैदल जानेवाला । ಕಾಲ್ನಡಿಗೆಯವ.

**पदत्याग–** पु. इस्तीफा । ರಾಜೀನಾಮೆ, ಪದತ್ಯಾಗ.

**पदत्राण, पदत्रान–** पु. जूता । ಪಾದ-ತ್ರಾಣ, ಕಾಲ್ಮರಿಗೆ, ಪಾಪೋಸು, ಚಪ್ಪಲು, ಮೆಟ್ಟು.

**पददलित–** वि. पैरसे कुचला हुआ । ಕಾಲಿನಿಂದ ತುಳಿಯಲ್ಪಟ್ಟ, ದಬ್ಬ-ಲ್ಪಟ್ಟ.

**पदन्यास–** पु पैर रखना, चलना । ಕಾಲು ಎತ್ತಿ ಇಡುವದು, ನಡೆಯುವದು, ನಡೆಯುವ ರೀತಿ

**पदवी–** स्त्री. उपाधि, प्रतिष्ठा, पद। ಬಿರುದು, ಪದವಿ,ಪ್ರತಿಷ್ಠೆ, ಗೌರವ, ಪದ.

**पदात, पदाति–** पु. पैदल सिपाही, सेवक । ಕಾಲ್ನಡಿಗೆಯ ಸಿಪಾಯಿ, ಕಾಲಾಳು, ಸೇವಕ.

**पदाधिकारी–** पु. कर्मचारी, अफसर । ಕಾಮಗಾರ, ಅಧಿಕಾರಿ, ಹುದ್ದೇ-ದಾರ, ಆಡಳಿತೆಗಾರ.

**पदाना**– सक्रि हैरान करना, दौड़ाना। ತ್ರಾಸಕೊಡು, ಪೀಡಿಸು, ಓಡಿಸು.

**पदार**– पु. चरण रज। ಪಾದಧೂಳಿ.

**पदार्पण**– पु प्रवेश, पधारना। ಕಾಲಿಡುವದು, ಪ್ರವೇಶ.

**पदावली**– स्त्री पदों का समूह। ಪದ್ಯ-ಸಂಗ್ರಹ.

**पदिक**– पु एक गहना, हीरा, पैदल सेना। ಪದಕ, ರತ್ನ, ಕಾಲ್ನಡಿಗೆ-ಯ ಸೈನ್ಯ.

**पदी**–पु प्यादा। ಕಾಲ್ನಡಿಗೆಯ ಸೈನಿಕ, ಕಾಲ್ನಡಿಗೆಯವ, ಕಾಲಾಳು.

**पद्धति**– स्त्री. रीति, प्रथा, मार्ग। ಪದ್ಧತಿ, ರೀತಿ, ವಾಡಿಕೆ, ಪ್ರಥಾ, ಮಾರ್ಗ.

**पधरना**– अक्रि आना। ಬರು, ಆಗ-ಮಿಸು.

**पधराना**– सक्रि प्रतिष्ठित करना, आदर से ले जाना। ಸ್ಥಾಪಿಸು (ಮೂರ್ತಿ), ಕೂಡ್ರಿಸು, ಆದರದಿಂದ ಬರಮಾಡಿ ಕೊಳ್ಳು.

**पधरावनी**– स्त्री आदर पूर्वक ले जाकर बैठाना, देवता का स्थापन। ಆದರದಿಂದ ಬಿಜಯ ಮಾಡಿಸುವಿಕೆ, ದೇವತಾ ಸ್ಥಾಪನೆ.

**पधारना**– अक्रि आना। ದಯಮಾಡಿ-ಸು, ಬರು. सक्रि प्रतिष्ठित करना। ಸ್ಥಾಪಿಸು, ಸನ್ಮಾನದಿಂದ ಕೂಡ್ರಿ-ಸು, ಸನ್ಮಾನದಿಂದ ಬರಮಾಡಿ ಕೊಳ್ಳು.

**पन**–पु प्रण। ಪ್ರತಿಜ್ಞೆ, ಸಂಕಲ್ಪ. प्रत्य भाव वाचक संज्ञा का एक प्रत्यय। ಭಾವವಾಚಕ ಪ್ರತ್ಯಯ, ತನ, ತ್ವ.

**पनकपड़ा**– पु. चोट बाँधने की कपड़े की गीली पट्टी। ಗಾಯ ಕಟ್ಟುವ ಒದ್ದೆಯಾದ ಅರಿವೆಯ ಪಟ್ಟಿ, ಒದ್ದೆ ಬಟ್ಟೆ.

**पनकौआ**– पु जलकौआ। ನೀರು-ಗೋಳಿ.

**पनघट**– पु. पानी भरने का स्थान। ನೀರು ತುಂಬುವ ಸ್ಥಳ, ಬಾವಿಯ ಕಟ್ಟೆ, ನದಿಯ ಘಟ್ಟ.

**पनच**– पु चिल्ला। ಬಿಲ್ಲಿನ ಹಗ್ಗ, ಹೆದೆ.

**पनचक्की**– स्त्री. पानी से चलनेवाली चक्की। ನೀರಿನಿಂದ ತಿರುಗುವ ಬೀಸುವ ಯಂತ್ರ.

**पनडुब्बा**– पु. गोतख़ोर, एक पक्षी। ನೀರಿನಲ್ಲಿ ಮುಳುಗುವವ, ಬುಡು-ಗನ ಹಕ್ಕಿ.

**पनडुब्बी**– स्त्री पानी के अंदर चलने वाली नाव। ಮುಳುಗುನಾವೆ, 'ಸಬ್ ಮರೀನ್'.

**पनपना**– अक्रि पल्लवित होना, पुष्ट होना। ಚಿಗುರು, ಅಂಕುರಿಸು, ಕೊನರು, ಬೆಳೆ, ಸುಧಾರಿಸು, ಪುಷ್ಟನಾಗು, ಪ್ರವರ್ಧಿಸು.

**पनपनाहट**– स्त्री. पनपना। ಚಿಗುರೊಡೆ-ಯುವಿಕೆ, ಉತ್ತಮ ಸ್ಥಿತಿಗೆ ಬರು-ವಿಕೆ, ವೃದ್ಧಿ, ಸುಧಾರಣೆ, ಪುಷ್ಟಿ.

**पनपाना**– सक्रि ऐसा कार्य करना जिस

से कोई वस्तु पनपे । ಚಿಗುರಿಸು, ಕೊನರಿಸು, ಬೆಳೆಸು.

**पनबट्टा**– पु. पान के बीड़े रखने का डिब्बा । ಪಾನಪಟ್ಟಿಗಳನ್ನು ಇಡುವ ಡಬ್ಬಿ, ವೀಳ್ಯದೆಲೆಯ ಡಬ್ಬಿ.

**पनभरा, पनहरा**– पु. पानी भरनेवाला । ನೀರಿನವ, ನೀರು ಹಾಕುವವ.

**पनवाड़ी**– पु. तमोली । ಎಲೆಗಾರ, ತಾಂಬೂಲ ಮಾರುವವ.

**पनवार, पनवारा**– पु. पत्तल, पत्तलभर भोजन । ಊಟದೆಲೆ, ಎಡೆ, ಒಬ್ಬನ ಊಟ.

**पनस**– पु. कटहल । ಹಲಸಿನ ಹಣ್ಣು.

**पनसारी**– पु. मसाले तथा जड़ीबूटी बेचनेवाला बनिया । ಕಿರಾಣಿ ಹಾಗು ಮಸಾಲೆಯ ಸಾಮಾನುಗಳನ್ನು ಮಾರುವ ವ್ಯಾಪಾರಸ್ಥ.

**पनसाल, पनसाला**– पु. पौसरा । ಅರವಟ್ಟಿಗೆ, ನೀರು ಕುಡಿಯುವ ಸ್ಥಳ.

**पनसुइया, पनसोई**– स्त्री. छोटी नाव । ಸಣ್ಣ ನಾವೆ.

**पनसेरी**– स्त्री पंसेरी । ಪಂಛೇರು.

**पनह**– स्त्री दे. 'पनाह' ।

**पनहरा, पनहारा**– पु. दे. 'पनभरा' ।

**पनहा**– पु. चौड़ाई, चोरी का पता लगानेवाला । ಅಗಲಳತೆ (ಅರಿವೆಯದು) ಪನ್ನ, ವಿಸ್ತಾರ, ಕಳವು ಹಿಡಿಯುವವ, ಪತ್ತೇದಾರ.

**पनहारिन, पनहारी**– स्त्री पानी भरनेवाली स्त्री । ನೀರು ಹೊರುವವಳು, ನೀರಿನವಳು.

**पनहिया, पनही**– स्त्री. जूता । ಕೆರವು, ಜೋಡು, ಪಾಪೋಸು, ಚಪ್ಪಲು.

**पना**– पु एक प्रकार का शर्बत । ಒಂದು ತರದ ಪಾನಕ, ಶರಬತ್ತು, ಪಾನೀಯ.

**पनाती**– पु. पोते, नाती का लड़का । ಮರಿಮಗ, ಮೊಮ್ಮಗನ ಮಗ.

**पनातिन**– स्त्री पोते, नाती की लड़की । ಮರಿಮಗಳು.

**पनार, पनारा, पनाला**– पु नाला, मोरी, प्रवाह । ಕಾಲುವೆ, ಮೋರಿ, ಚರಂಡಿ, ಹರನಾಳಿಗೆ, ಪ್ರವಾಹ.

**पनारी, पनाली**– स्त्री. प्रणाली, मोरी, नाली, धारा । ಪ್ರಣಾಲಿ, ರೀತಿ, ಮೋರಿ, ಚರಂಡಿ, ಪ್ರವಾಹ.

**पनासना**– सक्रि. पोसना । ರಕ್ಷಿಸು, ಪಾಲನೆ ಪೋಷಣೆ ಮಾಡು.

**पनाह**– स्त्री. बचाव, शरण । ರಕ್ಷಣೆ, ಆಶ್ರಯ, ಆಧಾರ, ಶರಣ, ಮರೆ.

**पनिया**– वि. पानी का, पानीमें उत्पन्न । ನೀರಿನ, ನೀರಿನ ಸಂಬಂಧದ, ನೀರಿನಲ್ಲಿ ಹುಟ್ಟಿದ. पु पानी । ನೀರು.

**पनियाना**– सक्रि. पानी देना । ನೀರು ಹಾಯಿಸು, ನೀರು ಹಾಕು.

**पनिहा**– वि. दे. 'पनिया' । पु. जासूस । ಗುಪ್ತಚರ, ಪತ್ತೇದಾರ.

**पनिहार**– पु. दे 'पनहरा' ।

**पनी**– पु प्रण करनेवाला । ಪ್ರತಿಜ್ಞೆ

ಮಾಡುವವ.

**पनीर**– पु. छेना । ಹಾಲಿನ ಕೆನೆ.

**पनीला**– वि दे 'पनिया'।

**पनुआँ**– वि फीका, जिसमें आवश्यकता से अधिक पानी पड गया हो । ನೀರಸವಾದ, ಸಪ್ಪೆಯಾದ, ಹೆಚ್ಚು ನೀರು ಕೂಡಿದ.

**पनेरी, पनैरी**– स्त्री तमोली। ತಾಂಬೂಲ ಮಾರುವವ.

**पनौटी**– स्त्री पानदान । ಎಲೆ ಇಡುವ ಬಿದಿರಿನ ಡಬ್ಬಿ.

**पन्नग**– पु. सॉप, पन्ना नामक रत्न । ಹಾವು, ಪಚ್ಚೆ.

**पन्ना**– पु मरकत, पृष्ठ, पत्र । ಪಚ್ಚೆ, ಹಸರು ರತ್ನ , ಪುಟ, ಹಾಳೆ, ಪತ್ರ, ಠೀಕು.

**पन्नी**– स्त्री. सुनहला या कपहला कागज, चॉदी आदिका पतला पत्तर । ಹೊಂಬಣ್ಣದ ಅಥವಾ ಬಿಳೀ ವರ್ಣದ ಕಾಗದ, ಬೆಳ್ಳಿ ಮುಂತಾದವುಗಳ ತಿಳುವಾದ ತಗಡು, ವರಕು.

**पन्नीसाज़**– पु पन्नी वनानेवाला । ಬಂಗಾರ ಬೆಳ್ಳಿಯ ತಗಡು ತಯಾರಿಸುವವ

**पन्हाना**– सक्रि पहनाना । ತೊಡಿಸು. अक्रि. थनमें दूध उतरना । ಮೊಲೆಯಲ್ಲಿ ಹಾಲು ಇಳಿ.

**पपडा**– पु. छिलका । ಚಿಪ್ಪು, ಸಿಪ್ಪೆ, ತೊಗಟೆ, ಹಕ್ಕಳೆ, ಹಪ್ಪಳ.

**पपडियाना**– अक्रि. सूखकर पपडी पडना । ಒಣಗು, ಹಕ್ಕಳೆಯೇಳು, ಸುಕ್ಕುಗಟ್ಟು.

**पपडी, पपरी**– स्त्री छिलका, खुरंड । ಚಿಪ್ಪು, ಸಿಪ್ಪೆ, ತೊಗಟೆ, ಹಕ್ಕಳೆ, ಹಪ್ಪಳ.

**पपनी, पपरो**– स्त्री ऑख की वरौनी । ಎವೆ, ರೆಪ್ಪೆಯ ಕೂದಲು.

**पपिहा, पपीहरा, पपीहा**– पु चातक । ಚಾತಕ ಪಕ್ಷಿ.

**पपीता**– पु एक तरहका पेड़ तथा उसका फल । ಪಪ್ಪಾಯ ಹಣ್ಣು.

**पपीलि**– स्त्री चींटी । ಇರುವೆ.

**पपीहा**– पु दे 'पपिहा'।

**पपोटा**– पु पलक । ರೆಪ್ಪೆ.

**पपोरना**–सक्रि भुजाऍ ऐंठना । ಮುಂಗೈಯನ್ನು ಭುಜದ ಕಡೆಗೆ ಮಣಿಸಿ ಅದರ ದಪ್ಪ ಹಾಗೂ ಬಲವನ್ನು ನೋಡುವದು.

**पपोलना**– सक्रि. चवाना । ಅಗಿ,ಜಗಿ, ಮೆಲ್ಲು.

**पयद, पयोद**– पु वादल । ಮೋಡ

**पयधि, पयनिधि**–पु समुद्र । ಸಮುದ್ರ.

**पयस्विनी**– स्त्री दूध देनेवाली गाय, वकरी, नदी । ಹಿಂಡುವ ಆಕಳು, ಆಡು, ಮೇಕೆ, ನದಿ.

**पयान**– पु. प्रयाण । ಪ್ರಯಾಣ, ಗಮನ.

**पयाम**– पु. संदेश । ಸಂದೇಶ.

**पयार, पयाल**– पु सूखी घास, धान आदि के सूखे डंटल । ಒಣ ಹುಲ್ಲು.

ಒಣ ಜೋಳದ ದಡ್ಡಿ, ದಣಕಿ.

**पयाल झाड़ना=** वृथाका परिश्रम करना । ವ್ಯರ್ಥ ಪರಿಶ್ರಮ ಮಾಡು.

**पयोद–** पु दे 'पयद'।

**परंतु–** अव्य लेकिन, तोभी, किंतु । ಆದರೆ, ಆದಾಗ್ಯೂ, ಪರಂತು.

**पर–** अव्य दे 'परंतु'। पु शत्रु, पंख । ಶತ್ರು, ರೆಕ್ಕೆ, ಗರಿ, ತುಪ್ಪಳ. वि दूसरा, श्रेष्ठ, दूर। ಅನ್ಯ,ಎರಡನೆಯ, ಶ್ರೇಷ್ಠ, ದೂರ. क्रिवि. पास, पश्चात्, पीछे। ಹತ್ತಿರ,ಹಿಂದಿನಿಂದ, ಆಮೇಲೆ, ಅನಂತರ. प्रत्य ऊपर, में । ಮೇಲೆ, - ಲ್ಲಿ, ಒಳಗೆ

**परई–** स्त्री. एक प्रकार का बडा दीया या दीया जैसा ढक्कन । ಹಣತೆ, ದೀಪ, ಮುಚ್ಚಳ.

**परकटा–** वि जिस के पर कटे हो । ರೆಕ್ಕೆ ಕಡಿಯಲ್ಪಟ್ಟ, ರೆಕ್ಕೆ ಕತ್ತರಿಸಲ್ಪಟ್ಟ

**परकना–** अक्रि चसका लगना । ಅಭ್ಯಾಸವಾಗು, ಚಟಹತ್ತು.

**परकाजी–** वि परोपकारी । ಪರೋಪಕಾರಿ.

**परकाना–**सक्रि अभ्यस्त कराना। ಚಟ ಹಚ್ಚು, ರುಚಿ ಹಚ್ಚು.

**परकार, परकाल–** पु वृत्त खींचने का औजार । ಕಂಪಾಸು.

**परकाला–** पु चौखट, सीढी, टुकड़ा, चिनगारी। ಚೌಕಟ್ಟು, ಹೊಸ್ತಿಲು, ಸೋಪಾನ, ಏಣಿ, ಕಿಡಿ, ತುಂಡು, ಚೂರು, ಬೆಂಕಿಯ ಕಿಡಿ.

**आफत का परकाला=**भयंकर मनुष्य। ಭಯಂಕರ ಮನುಷ್ಯ.

**परकासना–** सक्रि प्रकाशित करना । ಪ್ರಕಾಶಿತ ಮಾಡು, ಪ್ರಕಟಿಸು. अक्रि प्रकाशित होना। ಪ್ರಕಾಶಿಸು, ಪ್ರಕಟವಾಗು

**परकिति, परकीति, परकीती–** स्त्री प्रकृति । ಪ್ರಕೃತಿ, ಸ್ವಾಸ್ಥ್ಯ, ಆರೋಗ್ಯ

**परकीय–** वि पराया। ಎರಡನೆಯವರ, ಇತರ, ಅನ್ಯರ

**परकोटा–** पु चहारदीवारी। ಕೋಟೆಯ ಸುತ್ತಲಿನ ಗೋಡೆ, ಆವಾರದ ಗೋಡೆ, ಪ್ರಾಕಾರ.

**परख–** स्त्री. जाँच, परीक्षा । ಪರೀಕ್ಷೆ, ಶೋಧನೆ,ವಿಮರ್ಶೆ,ಪರಿಶೀಲನೆ.

**परखना–** सक्रि जाँचना, भला बुरा पहचानना । ಪರಕಿಸು, ಪರೀಕ್ಷಿಸು, ಪರಿಶೋಧಿಸು, ವಿಮರ್ಶಿಸು, ನೋಡು.

**परखवैया, परखैया–** पु परखनेवाला। ಪರೀಕ್ಷಕ, ಶೋಧಕ, ವಿಮರ್ಶಕ.

**परखवाना, परखाना–** सक्रि जाँच कराना।ಎರಡನೆಯವರಿಂದ ಪರೀಕ್ಷೆ ಮಾಡಿಸು, ವಿಮರ್ಶೆ ಮಾಡಿಸು, ಪರಿಶೀಲನೆ ಮಾಡಿಸು

**परखाई–** स्त्री. परखने की क्रिया या मजदूरी । ಪರೀಕ್ಷೆ, ಶೋಧನೆ, ಪರೀಕ್ಷಿಸಲು ಕೊಡುವ ಹಣ.

**परग–** पु क़दम । ಹೆಜ್ಜೆ, ಪಾದದ ಗುರುತು.

**परगसना–** सक्रि प्रकाशित होना । ಪ್ರಕಾಶಿತವಾಗು, ಪ್ರಕಟವಾಗು.

**परगाढ़–** वि कठिन, गहरा । ಪ್ರಗಾಢ, ಕಠಿಣ, ಗಹನವಾದ.

**परगास–**पु प्रकाश, विकास । ಪ್ರಕಾಶ, ಬೆಳವಣಿಗೆ, ವಿಕಾಸ

**परगासना–** सक्रि प्रकाशित करना । ಪ್ರಕಾಶಿತ ಮಾಡು, ಪ್ರಕಟಿಸು अक्रि दे 'परगसना'।

**परचइ–** पु. परिचय । ಪರಿಚಯ, ಗುರ್ತು.

**परचत–** स्त्री पहिचान, परिचय । ಪರಿಚಯ, ಗುರ್ತು वि परिचित । ಪರಿಚಿತ.

**परचना–** अक्रि हिलना मिलना, अभ्यस्त होना। ಈಲಾಗು, ಹೆಚ್ಚು ಪರಿಚಯವಾಗು, ಪಳಗು, ಚಟ ಹತ್ತು, ಅಭ್ಯಾಸವಾಗು, ರುಚಿ ಹತ್ತು.

**परचा–** पु. पुर्जा, प्रश्नपत्र, परिचय, चिट्ठी । ಕಾಗದದ ತುಂಡು, ಪ್ರಶ್ನ ಪತ್ರ, ಪರಿಚಯ, ಕಾಗದ, ಪತ್ರ, ಚೀಟಿ

**परचाना–** सक्रि हिलाना मिलाना, चसका लगाना । ಈಲು ಮಾಡು, ಹೆಚ್ಚು ಪರಿಚಯ ಮಾಡಿಕೊಳ್ಳು, ಚಟ ಹಚ್ಚು, ರುಚಿ ಹಚ್ಚು, ಮುಗ್ಧ ಗೊಳಿಸು.

**परचार–** पु प्रचार । ಪ್ರಚಾರ.

**परचारना–** सक्रि प्रचार करना । ಪ್ರಚಾರ ಮಾಡು.

**परचून–** पु आटा दाल इत्यादि भोजन की सामग्री। ಹಿಟ್ಟು ಬೇಳೆ ಮುಂತಾದ ಆಹಾರದ ಪದಾರ್ಥಗಳು.

**परचूनि, परचूनी–** पु आटा चावल इत्यादि बेचनेवाला । ಹಿಟ್ಟು ಬೇಳೆ ಮುಂತಾದವುಗಳನ್ನು ಮಾರುವವ.

**परचै–** पु दे 'परचइ'।

**परछत्ती–** स्त्री टाँड, हलका छप्पर । ನಾಗೊಂದಿಗೆ, ಸಾಮಾನು ಇಡುವ ಹಲಿಗೆ, ಚಿಕ್ಕ ಚಪ್ಪರ, ಹಂದರ, ಮಂಚಿಕೆ.

**परछन–** स्त्री वर की आरती आदि उतारने की रीति । ಆರತಿ, ಮದು ಮಗನಿಗೆ ಆರತಿ ಮಾಡುವ ಒಂದು ಪದ್ಧತಿ.

**परछना–** सक्रि वरकी आरती उतारना । ಮದುವಣಿಗನಿಗೆ ಆರತಿ ಮಾಡು, ಇಳಿತೆಗೆ.

**परछाइँ–** स्त्री प्रतिबिंब । ಪ್ರತಿಬಿಂಬ, ನೆರಳು.

**परछालना–** सक्रि साफ करना। ಸ್ವಚ್ಛ ಮಾಡು, ತೊಳೆ.

**परजन, परिजन–** पु. आश्रित जनसमूह, अनुचरवर्ग। ಪರಿವಾರ, ಕುಟುಂಬದ ಜನರು, ಸೇವಕರು, ಅನುಚರರು.

**परजरना–** अक्रि जलना, ईर्ष्या करना। ಸುಡು, ಸಿಟ್ಟಾಗು, ರೇಗು, ಮತ್ಸರ

ಪಡು, ದ್ವೇಷಿಸು.

**परजा**– स्त्री प्रजा, आश्रित जन। ಪ್ರಜೆ, ಆಶ್ರಿತ ಜನರು.

**परजात**– वि दूसरी जाति का, दूसरे से उत्पन्न । ಅನ್ಯಜಾತಿಯ, ಎರಡನೆಯವರಿಂದ ಹುಟ್ಟಿದ.

**परजाय**– पु समानार्थक शब्द, परंपरा, प्रकार। ಪರ್ಯಾಯವಾಚಕ ಶಬ್ದ, ಪರಂಪರೆ, ಕ್ರಮ, ಪ್ರಕಾರ, ಒಲವು.

**परजारना**– सक्रि जलाना । ಸುಡು

**परजौट**– पु वार्षिक किरायेपर जमीन देने की रीति तथा उस का किराया। ಭೂಮಿಯನ್ನು ಬಾಡಿಗೆಯಿಂದ ಕೊಡುವ ರೀತಿ, ಭೂಮಿಯ ಬಾಡಿಗೆ, ನೆಲದ ಬಾಡಿಗೆ.

**परणना**–सक्रि. परिणय करना। ಮದುವೆಯಾಗು.

**परत, पर्त**– स्त्री तह, पुट । ಧರ, ಮಡಿಕೆ, ಪದರು, ಆಚ್ಛಾದನ.

**परतच्छ, परतछ**– वि प्रत्यक्ष। ಪ್ರತ್ಯಕ್ಷವಾದ.

**परतल**– पु लद्दू घोडोंपर रखने का बोरा। ಗೋಣಿ, ನಬರ.

**परता**– पु. दे. 'पड़ता'।

**परताल**– स्त्री दे 'पड़ताल'।

**परती**– स्त्री दे 'पड़ती'।

**परतीत, परतीति**–स्त्री. प्रतीति, विश्वास। ವಿಶ್ವಾಸ, ನಂಬುಗೆ, ಪ್ರತೀತಿ.

**परतेजना**– सक्रि. त्यागना । ತ್ಯಜಿಸು, ಬಿಡು.

**परतौ**– पु किरण, प्रतिच्छाया। ಕಿರಣ, ಪ್ರತಿಬಿಂಬ.

**परथन**– पु सूखा आटा जो रोटी बेलते समय लगता है। ಚಪಾತಿ ಲಟ್ಟಿಸುವಾಗ ಉಪಯೋಗಿಸುವ ಹಿಟ್ಟು.

**परदा, पर्दा**– पु. आड करनेवाला कपड़ा इत्यादि, आड, छिपाव । ಪರದೆ, ತೆರೆ, ಬುರುಕಿ, ಮರೆ, ಮುಸುಕು, ಘೋಷಾ.

—**डालना**= छिपाना । ಮುಚ್ಚು, ಗುಪ್ತವಾಗಿರಿಸು.

—**रखना**= लाज रखना, छिपाव रखना। ಮರ್ಯಾದೆ ಕಾಯ್ದುಕೊಳ್ಳು, ಮುಚ್ಚಿಡು.

—**पड़ना** (अक्लपर) = बुद्धि भ्रष्ट होना। ಬುದ್ಧಿ ಭ್ರಷ್ಟವಾಗು, ಹುಚ್ಚನಾಗು.

—**पडना** (आँखोपर) = असावधान होना। ಭ್ರಮೆಯಾಗು, ಲಕ್ಷ್ಯವಿಲ್ಲದಾಗು.

**परदाज़**– पु सजावट, चित्र आदिके चारों ओर बेलबूटे आदि बनाना। ಶೃಂಗಾರ, ಚಿತ್ರದ ಸುತ್ತಲೂ ನಕ್ಷೆ ತೆಗೆಯುವದು, ಅಲಂಕಾರ.

**परदादा**– पु प्रपितामह । ಮುತ್ತಜ್ಜ (ತಂದೆಯ ಅಜ್ಜ), ಪ್ರಪಿತಾಮಹ.

**परदानशीन**– वि. जो परदेमें रहे। ಪರದೆಯಲ್ಲಿರುವ, ಘೋಷೆಯಲ್ಲಿರುವ.

**परदापोशी**–स्त्री ऐबोंपर पर्दा डालना। ಒಬ್ಬರ ತಪ್ಪನ್ನು ಪ್ರಕಟ ಪಡಿಸದೆ

ಮುಚ್ಚುವದು.

**परदेश**, पु. **परदेशी**–वि दे. ' विदेश '। ' विदेशी '।

**परधान**– पु आच्छादन, कपडा, मंत्री। ಆಚ್ಛಾದನೆ,ಅರಿವೆ, ಬಟ್ಟೆ, ಮಂತ್ರಿ.

**परधाम**–पु. स्वर्गलोक। ಸ್ವರ್ಗಲೋಕ.

**परना**– अक्रि. दे. ' पडना '।

**परनाना**– पु. नानाका पिता। ತಾಯಿಯ ಅಜ್ಜ, ಮುತ್ತಜ್ಜ.

**परनानी**– स्त्री. नानीकी माँ। ತಾಯಿಯ ಅಜ್ಜಿ, ಮುತ್ತಜ್ಜಿ.

**परनाम, परनौत**– पु. प्रणाम। ಪ್ರಣಾಮ, ನಮಸ್ಕಾರ.

**परनाला**– पु **परनाली**– स्त्री मोरी, पनाला। ಮೋರಿ, ಚರಂಡಿ, ಜಲದಾರಿ, ಹರನಾಳಿಗೆ.

**परनी**– स्त्री दे. ' पत्नी '।

**परपंच**– पु प्रपंच, बखेड़ा, चाल। ಪ್ರಪಂಚ,ಜಗತ್ತು,ಜಗಳ, ಮೋಸ, ಕಪಟ.

**परपंचक, परपंची**– वि. चालबाज, बखेडिया। ಮೋಸಗಾರ, ಧೂರ್ತ.

**परपट**– पु. चौरस जमीन। ಸಮತಲವಾದ ಭೂಮಿ, ಬೈಲು.

**परपराना**–अक्रि जीभपर तीक्ष्ण लगना, चुनचुनाना,जलना। ತೀಕ್ಷ್ಣಹತ್ತು, ನೋಯು, ಉರಿಯು

**परपारा**– पु. दूसरी ओरका किनारा। ಎರಡನೆಯ ಮಗ್ಗಲಿನ ತೀರ, ಆಚೆಯ ದಡ.

**परपोता, परपौत्र**– पु. पोतेका पुत्र। ಮೊಮ್ಮಗನ ಮಗ, ಮರಿಮಗ, ಪ್ರಪೌತ್ರ.

**परपोती**– स्त्री. पोतेकी पुत्री। ಮೊಮ್ಮಗನ ಮಗಳು. ಮರಿಮಗಳು.

**परबंध**– पु. दे ' प्रबंध '।

**परबत**– पु. पर्वत। ಪರ್ವತ, ಗುಡ್ಡ.

**परबल**– वि. प्रबल। ಪ್ರಬಲ,ಬಲಿಷ್ಠ, ಉಗ್ರ.

**परबस**– वि पराधीन। ಪರಾಧೀನ, ಪರವಶನಾದ, ವಿವಶ.

**परबसताई**– स्त्री परतंत्रता। ಪಾರತಂತ್ರ್ಯ, ವಿವಶತೆ

**परबाल**– पु प्रवाल, कोपल, आँखकी बरौनी। ಪ್ರವಾಳ, ಹವಳ, ಚಿಗುರೆಲೆ, ಎವೆ, ರೆಪ್ಪೆಯ ಕೂದಲು.

**परबीन**–वि प्रवीण। ಪ್ರವೀಣ,ಚತುರ.

**परबेस**– पु प्रवेश। ಪ್ರವೇಶ,ಗತಿ.

**परबोध**– पु ज्ञान, चेतना, जागना, सात्वना। ಜ್ಞಾನ,ಎಚ್ಚರಿಕೆ,ಬೋಧನೆ, ಧೈರ್ಯ, ಸಮಾಧಾನ.

**परबोधना**– सक्रि समझाना, दिलासा देना, सजग करना। ತಿಳಿಸಿ ಹೇಳು, ಸಮಾಧಾನ ಹೇಳು, ಎಚ್ಚರಿಸು, ಸೂಚಿಸು

**परभात**– पु. प्रभात। ಪ್ರಭಾತ, ಮುಂಜಾವು.

**परभाव**– पु. प्रभाव। ಪ್ರಭಾವ.

**परम**–वि उत्कृष्ट, मुख्य। ಉತ್ಕೃಷ್ಟ, ಉತ್ತಮ, ಮುಖ್ಯ.

**परमल**– पु परिमल, ज्वार या गेहूं का भूना हुआ दाना। ಪರಿಮಳ, ಸುಗಂಧ, ಗೋದಿ ಅಥವಾ ಜೋಳದ ಅರಳು

**परमा**– स्त्री छवि, सौंदर्य, एक रोग। ಕಾಂತಿ, ಶೋಭೆ, ಸೌಂದರ್ಯ, ಪರಮಾ ರೋಗ.

**परमान**– पु सबूत, सीमा, विश्वास। ಆಧಾರ, ಪ್ರಮಾಣ, ಸೀಮೆ,ಅವಧಿ, ವಿಶ್ವಾಸ

**परमारथ, परमार्थ**– पु. मुक्ति। ಪರಮಾರ್ಥ, ಮುಕ್ತಿ, ಮೋಕ್ಷ.

**परयंक, पर्यंक**– पु पलंग। ಪಲಂಗ, ಮಂಚ, ಹಾಸಿಗೆ

**परलउ, परलय, परलै**– पु प्रलय। ಪ್ರಲಯ

**परला**– वि दूसरी तरफका। ಆಚೆಯ ದಡದ.

**परले दर्जेका या सिरेका** = अव्वल नंबरका,चुना हुआ। ಮೊದಲನೆಯ ತರಗತಿಯ, ಆರಿಸಿದ, ಅತ್ಯಂತ ಹೆಚ್ಚಿನ.

**परलोक**– पु. दूसरा लोक, स्वर्गादि। ಎರಡನೆಯ ಲೋಕ, ಸ್ವರ್ಗ ಮುಂತಾದ.

**परवरदिगार**– पु पालनकर्ता, ईश्वर। ರಕ್ಷಿಸುವವ, ದೇವರು, ಸಂರಕ್ಷಕ.

**परवरिश, परवस्ती**–स्त्री. पालन पोषण। ಪಾಲನೆ, ಪೋಷಣೆ, ರಕ್ಷಣೆ.

**परवल**– पु एक तरकारी। ಪಡವಲಕಾಯಿ.

**परवश, परवश्य**– वि पराधीन। ಪರಾಧೀನ, ಪರತಂತ್ರ

**परवशता, परवश्यता**–स्त्री. पराधीनता। ಪರಾಧೀನತೆ, ಪಾರತಂತ್ರ್ಯ

**परवा**– स्त्री. पक्षकी पहली तिथि, परवाह। ಪ್ರತಿಪದೆ, ಪಾಡ್ಯ, ಚಿಂತೆ, ಲಕ್ಷ್ಯ, ಧ್ಯಾನ.

**परवाई**– स्त्री. परवाह। ಚಿಂತೆ,ಕಾಳಜಿ, ಲಕ್ಷ್ಯ.

**परवानगी**– स्त्री. अनुमति। ಅನುಮತಿ, ಪರವಾನಗಿ, ಆಜ್ಞೆ, ಅಪ್ಪಣೆ.

**परवाना**– पु आज्ञापत्र, फतिंगा। ಅನುಮತಿ ಪತ್ರ, ಅಪ್ಪಣೆ ಚೀಟಿ,ಆಜ್ಞಾಪತ್ರ, ದೀಪದ ಹುಳು, ಶಲಭ, ಪತಂಗ.

**परवाल**– पु प्रवाल। ಪ್ರವಾಳ,ಹವಳ.

**परवाह**– स्त्री प्रवाह, चिंता, ध्यान। ಪ್ರವಾಹ, ಚಿಂತೆ, ಲಕ್ಷ್ಯ, ಧ್ಯಾನ.

**परवी**– स्त्री पर्वकाल। ಹಬ್ಬ, ಪರ್ವಕಾಲ.

**परवेख**–पु. मंडल। ಮಂಡಲ, ಸುತ್ತು.

**परवेश**– पु प्रवेश। ಪ್ರವೇಶ, ಒಲವು, ಗತಿ.

**परश, परस**– पु स्पर्शमणि, स्पर्श। ಸ್ಪರ್ಶಮಣಿ, ಸ್ಪರ್ಶ.

**परशु**– पु फरसा। ಕೊಡಲಿ.

**परसंसा**– पु स्तुति। ಪ್ರಶಂಸೆ, ಸ್ತುತಿ.

**परसन, परसन्न**–वि प्रसन्न। ಪ್ರಸನ್ನ.

**परसना**– सक्रि. परोसना, छूना। ಬಡಿ-

ಡು, ಊಟಕ್ಕೆ ಹಾಕು, ಮುಟ್ಟು, ಸ್ಪರ್ಶಿಸು.

**परस पखान–** पु पारस पत्थर। ಸ್ಪರ್ಶ ಮಣಿ, ಒರೆಗಲ್ಲು

**परसा–** पु. परोसा, फरसा। ಒಬ್ಬನು ಊಟ ಮಾಡುವಷ್ಟು ಆಹಾರ, ಎಡೆ, ಕೊಡಲಿ, ಪರಶು.

**परसाना–** सक्रि. स्पर्श कराना, भोजन सामने रखवाना। ಸ್ಪರ್ಶಮಾಡಿಸು, ಊಟಕ್ಕೆ ನೀಡಿಸು.

**परसाल–** अव्य गतवर्ष, अगलेवर्ष। ಹೋದ ವರ್ಷ, ಕಳೆದ ವರ್ಷ, ಮುಂದಿನವರ್ಷ.

**परसिद्ध–** वि. प्रसिद्ध। ಪ್ರಸಿದ್ಧ.

**परसु–** पु. परशु। ಕೊಡಲಿ.

**परसेद–** पु पसीना। ಬೆವರು.

**परसों–** अव्य गत दिनसे पहले या आगामी दिनके बादका दिन। ಮೊನ್ನೆ, ನಾಡಿದು.

**परसौंहा–** वि. छूनेवाला। ಮುಟ್ಟುವ, ಸ್ಪರ್ಶಿಸುವ.

**परस्त–**वि पूजा करनेवाला। ಪೂಜಿಸುವವ, ಉಪಾಸಕ.

**परस्तिश–** स्त्री. पूजा। ಪೂಜೆ, ಆರಾಧನೆ, ಉಪಾಸನೆ

**परस्तिशगाह–** स्त्री. पूजागृह। ಪೂಜಾಗೃಹ, ಮಂದಿರ.

**परस्पर–** क्रिवि आपसमे। ಪರಸ್ಪರ ರಲ್ಲಿ, ತಮ್ಮತಮ್ಮೊಳಗೆ.

**परहरना–** सक्रि. छोडना। ಬಿಡು, ತ್ಯಜಿಸು.

**परहेज़–** पु बुराइयोंसे दूर रहना, संयम। ಪಥ್ಯ, ಸಂಯಮ

**परहेज़गार–** पु परहेज करनेवाला, संयमी। ಪಥ್ಯ ಮಾಡುವವ, ಸಂಯಮಿ.

**परहेलना–** सक्रि. उपेक्षा करना। ತಿರಸ್ಕರಿಸು, ಉಪೇಕ್ಷಿಸು

**परॉठा, परोठा–** पु घी लगाकर सेंकी हुयी रोटी। ತುಪ್ಪ ಸವರಿ ಬೇಯಿಸಿದ ಗೋದಿಯ ರೊಟ್ಟಿ, ಚಪಾತಿ, ಪುರಿ.

**परा–** पु पंक्ति, श्रेणी। ಪಂಕ್ತಿ, ಸಾಲು, ಶ್ರೇಣಿ. वि श्रेष्ठ, उत्तम। ಶ್ರೇಷ್ಠ, ಉತ್ತಮ.

**पराइ, पराई–** वि दूसरेकी। ಎರಡನೆಯವರ.

**पराकाष्टा, पराकोटी–** स्त्री. चरम सीमा। ಚರಮ ಸೀಮೆ, ಕೊನೆ, ಉಚ್ಚಸ್ಥಾನ.

**पराग–**पु पुष्पधूलि। ಪರಾಗ,ಹೂವಿನ ಧೂಳು.

**परागना–** अक्रि. अनुरक्त होना। ಅನುರಕ್ತನಾಗು, ಒಲಿ.

**पराजित–** वि परास्त। ಸೋತ, ಪರಾಜಿತ.

**परात–** स्त्री थाल। ಪರಾತ,ತಾಂಬಾಣ, ಹರಿವಾಣ, ದೊಡ್ಡ ತಟ್ಟೆ

**पराधीन–** वि दूसरेके वशमें। ಎರಡನೆಯವರ ವಶವಲ್ಲಿಯ, ಪರಾಧೀನ.

**परान**– पु. प्राग । ಪ್ರಾಣ.

**पराना**– अक्रि पलायन करना । ಪಲಾಯನ ಮಾಡು, ಓಡಿ ಹೋಗು.

**पराभव**– पु तिरस्कार, हार । ತಿರಸ್ಕಾರ, ಸೋಲು, ಪರಾಭವ.

**पराभूत**– वि परास्त, नष्ट । ಸೋತ, ಹಾಳಾದ

**परामर्श, परामर्शन**– पु. विचार,सलाह, फैसला । ವಿಚಾರ, ಆಲೋಚನೆ, ಸಲಹೆ, ನಿರ್ಣಯ.

**परायण**–वि तत्पर, आसक्त। ತತ್ಪರ, ಆಸಕ್ತ, ತೊಡಗಿದ.

**पराया, पराए**– वि दूसरेका, विदेशी । ಹೆರರ, ಅನ್ಯರ, ಪರರ,ಪರದೇಶದ.

**परार**– पु दे ' पयाल ' ।

**परारब्ध,परालब्ध**– पु. भाग्य। ಭಾಗ್ಯ.

**परावन**– पु. भगदड, पर्व । ಬಹಳ ಜನರ ಓಡಾಟ, ಹಬ್ಬ, ಶುಭದಿನ

**परावर्तन**– पु लौटना, पलटना । ತಿರುಗುವದು, ಪರಾವರ್ತನೆ, ಬದಲು.

**परावर**– वि पूर्व और बादका, सर्व व्यापक, सर्वश्रेष्ठ । ಮೊದಲಿನ ಹಾಗೂ ಕಡೆಯ,ಸಮೀಪ ಹಾಗೂ ದೂರದ, ಸರ್ವವ್ಯಾಪಕ, ಸರ್ವಶ್ರೇಷ್ಠ.

**परावा**– वि. दे ' पराया ' ।

**परास**– पु पलाश । ಮುತ್ತುಗ.

**परास्त**– वि. हारा हुआ । ಸೋತ, ಪರಾಜಿತ.

**परिंद,परिंदा**–पु पक्षी । ಪಕ್ಷಿ ,ಹಕ್ಕಿ.

**परितर**– पु. पलंग, समूह, परिवार, पट्टुका । ಪಲಂಗ, ಮಂಚ,ಹಾಸಿಗೆ, ಸಮೂಹ, ಪರಿವಾರ, ಆಳುಹೋಳುಗಳು, ಪಲ್ಲಿ.

**परिकरमा, परिक्रमा**– स्त्री. प्रदक्षिणा । ಪ್ರದಕ್ಷಿಣೆ, ಸುತ್ತು.

**परिक्रमण**– पु. दे ' परिक्रमा ' ।

**परिखन**– पु रक्षक। ರಕ್ಷಕ, ಕಾವಲುಗಾರ.

**परिखना**–सक्रि. प्रतीक्षा करना,जाँचना। ಪ್ರತೀಕ್ಷಿಸು, ಪರೀಕ್ಷಿಸು, ಪರಕಿಸು.

**परिखा**– स्त्री. खाई । ಕಂದಕ,ಅಗಳತೆ.

**परिगह**– पु आश्रित व्यक्ति, कुटुंबी । ಆಶ್ರಿತ ಜನರು, ಕುಟುಂಬದವರು.

**परिगहना**–सक्रि ग्रहण करना । ಅಂಗೀಕರಿಸು, ಸ್ವೀಕರಿಸು.

**परिग्रह**–पु अंगीकार, विवाह, परिवार। ಅಂಗೀಕಾರ, ಸ್ವೀಕಾರ, ವಿವಾಹ, ಪರಿವಾರ.

**परिचय**– पु जान पहिचान । ಪರಿಚಯ, ಪೂರ್ವಜ್ಞಾನ.

**परिचर**–पु सेवा करनेवाला। ಸೇವಕ.

**परिचरजा, परिचर्या**– स्त्री सेवा । ಸೇವೆ, ಉಪಾಸನೆ.

**परिचारक**–पु. नौकर। ಸೇವಕ, ಆಳು.

**परिचारना**– सक्रि सेवा करना । ಸೇವೆ ಮಾಡು.

**परिचारी**– पु. सेवक । ಸೇವಕ.

**परिचालक**– पु. चलानेवाला । ನಡಿಸುವವ, ವ್ಯವಸ್ಥಾಪಕ.

**परिचालित**– वि. चलाया हुआ। ನಡಿಸಿದ, ವ್ಯವಸ್ಥಿತವಾಗಿ ಸಾಗಿಸಿದ.

**परिचित**– वि. जाना हुआ। ಪರಿಚಯವುಳ್ಳ, ಗೊತ್ತಿದ್ದ, ತಿಳಿದವ.

**परिचिति**– स्त्री. परिचय। ಪರಿಚಯ.

**परिच्छन्न**–वि ढका हुआ। ಮುಚ್ಚಿದ, ಹೊದಿಸಿದ.

**परिच्छिन्न**– वि मर्यादित, विभक्त। ಮರ್ಯಾದಿತ, ಎಲ್ಲೆಗೊಳಪಟ್ಟ, ವಿಭಕ್ತ.

**परिच्छेद**–पु. सीमा, अध्याय। ಸೀಮೆ, ಭಾಗ, ಅಧ್ಯಾಯ.

**परिछाहीं**– स्त्री. प्रतिबिंब। ಪ್ರತಿಬಿಂಬ, ನೆರಳು.

**परिजन**– पु आश्रित जन। ಪರಿವಾರದ ಜನರು, ಆಶ್ರಿತ ಜನರು.

**परिणत**– वि परिपक्व, बदला हुआ, झुका हुआ। ಹಣ್ಣಾದ, ಬದಲಾದ, ಮಣ್ಣಿನ.

**परिणति**–स्त्री परिपाक, रूपांतर, अंत। ಪಕ್ವವಾಗುವದು, ರೂಪಾಂತರ, ಅಂತ.

**परिणय**– पु विवाह। ವಿವಾಹ, ಮದುವೆ

**परिणाम**–पु. नतीजा, अवसान, विकार, विकास। ಪರಿಣಾಮ, ಫಲ, ಕೊನೆ, ಅಂತ, ವಿಕಾರ, ಬದಲಾವಣೆ, ಬೆಳವಣಿಗೆ, ವಿಕಾಸ.

**परिणीत**– वि विवाहित, समाप्त। ವಿವಾಹಿತ, ಸಮಾಪ್ತ, ಮುಗಿದ.

**परिताप**– पु. दुःख, शोक, जलन, भय। ದುಃಖ, ಶೋಕ, ಪಶ್ಚಾತ್ತಾಪ, ದಾಹ, ಉರಿ, ಭಯ.

**परितोष, परितोस**– पु. संतोष। ಸಂತೋಷ, ಹರ್ಷ, ಆನಂದ.

**परित्यक्त**–वि छोडा हुआ। ತ್ಯಜಿಸಿದ, ಬಿಟ್ಟ.

**परित्यक्ता**– स्त्री त्यागी हुयी। ಬಿಡಲ್ಪಟ್ಟವಳು, ತ್ಯಜಿಸಲ್ಪಟ್ಟವಳು. पु छोड़ने या त्यागनेवाला। ಬಿಡುವವ, ತ್ಯಜಿಸುವವ.

**परित्याग**– पु छोड़ना। ಬಿಡುವದು, ತ್ಯಜಿಸುವದು, ಪರಿತ್ಯಾಗ.

**परित्राण**– पु. रक्षा। ರಕ್ಷಣೆ.

**परित्राता**– पु रक्षक। ರಕ್ಷಕ.

**परिध**– पु दे 'परिधि'।

**परिधान**– पु वस्त्र, कपडा पहनना। ಬಟ್ಟೆ, ವಸ್ತ್ರ, ಅರಿವೆ ತೊಟ್ಟುಕೊಳ್ಳುವಿಕೆ.

**परिधि**– स्त्री मंडल, वस्त्र। ಮಂಡಲ, ವರ್ತುಳ, ಸುತ್ತಳತೆ, ಬಟ್ಟೆ, ವಸ್ತ್ರ.

**परिनय**– पु विवाह। ವಿವಾಹ, ಮದುವೆ.

**परिपंच**– पु दे 'परपंच'।

**परिपाक**– पु. प्रौढता, प्रवीणता, पकनेकी क्रिया, पाचन। ಪ್ರೌಢತೆ, ಪ್ರವೀಣತೆ, ಹಣ್ಣಾಗುವದು, ಪಚನ ಕ್ರಿಯೆ.

**परिपाटि, परिपाटी**– स्त्री रीति, प्रणाली। ರೀತಿ, ಪ್ರಣಾಲಿ, ಪದ್ಧತಿ, ಶೈಲಿ,

ಕ್ರಮ.

**परिपालन**– पु. रक्षण । ರಕ್ಷಣೆ, ಪೋ-ಷಣೆ.

**परिपूरन, परिपूरित, परिपूर्ण, परिप्रोत**– वि. संपूर्ण । ಸಂಪೂರ್ಣ, ಪೂರ್ಣವಾಗಿ ತುಂಬಿದ, ಪರಿಪೂರ್ಣ.

**परिप्लुत**–वि डूबा हुआ । ಮುಳುಗಿದ

**परिभव, परिभाव**– पु. अप्रतिष्ठा । ಅವಮಾನ, ತಿರಸ್ಕಾರ.

**परिभाषा**– स्त्री व्याख्या । ವ್ಯಾಖ್ಯೆ, ಪರಿಭಾಷೆ, ಲಕ್ಷಣ.

**परिभूत**– वि पराजित । ಸೋಲಿಸಲ್ಪಟ್ಟ, ಅವಮಾನಿತ.

**परिभ्रमण**– पु. पर्यटन, घूमना । ಪ್ರವಾಸ, ತಿರುಗಾಟ

**परिमल**– पु सुवास, सुगंधित द्रव्य । ಸುವಾಸನೆ, ಸುವಾಸಿಕ ವಸ್ತು.

**परिमाण, परिमान**– पु विस्तार, नाप, घेरा । ಪರಿಮಾಣ, ವಿಸ್ತಾರ, ಅಳತೆ, ತೂಕ, ಸುತ್ತಳತೆ, ಆಕಾರ.

**परिमार्जन**–पु. मार्जनेका काम, संशोधन । ತೊಳೆಯುವದು, ಸಂಶೋಧನೆ.

**परिमार्जित**–वि परिष्कृत । ಪರಿಷ್ಕೃತ, ಸಂಶೋಧಿತ, ತೊಳೆಯಲ್ಪಟ್ಟ.

**परिमित**– वि सीमित, थोडा । ಪರಿಮಿತವಾದ, ಮೇರೆ ನಿಶ್ಚಯಿಸಿದ, ಸ್ವಲ್ಪ.

**परिमिति**– स्त्री. सीमा, नाप । ಸೀಮೆ, ಗಡಿ, ಅಳತೆ, ಅವಧಿ.

**परिमेय**–वि जिसकी नाप तौल हो सके । ಅಳೆಯಲು ತೂಗಲು ಬರುವ.

**परियंक**–पु. पर्यंक । ಪಲಂಗ, ಮಂಚ, ಹಾಸಿಗೆ.

**परियंत**– अव्य. तक । ವರೆಗೆ

**परिरंभना**– सक्रि आलिंगन करना । ಆಲಿಂಗಿಸು, ಅಪ್ಪಿಕೊಳ್ಳು.

**परिलेख**– पु. ढाँचा, चित्र, तूलिका, उल्लेख । ಚೌಕಟ್ಟು, ಆಕಾರ, ಆಕೃತಿ, ಚಿತ್ರ, ಕುಂಚ, ತೂಲಿಕೆ, ಉಲ್ಲೇಖ.

**परिलेखना**– सक्रि ख्याल करना, समझना । ವಿಚಾರ ಮಾಡು, ಯೋಚಿಸು, ತಿಳಿ.

**परिवर्तनीय**–वि छोड़ने योग्य । ತ್ಯಾಜ್ಯ, ಬಿಡಲು ಯೋಗ್ಯವಾದ

**परिवर्तक**– पु बदलनेवाला । ಬದಲಿಸುವವ, ತಿರುಗಿಸುವವ.

**परिवर्तन**– पु फेरफार, चक्कर । ಬದಲಾವಣೆ, ರೂಪಾಂತರ, ಮಾರ್ಪಾಟ, ತಿರುಗುವಿಕೆ.

**परिवर्तित**– वि बदला हुआ । ಬದಲಾದ, ರೂಪಾಂತರ ಹೊಂದಿದ.

**परिवर्द्धित**– वि बढाया हुआ । ಬೆಳೆಸಿದ, ಹೆಚ್ಚಿಸಿದ.

**परिवा**– स्त्री पक्षकी प्रथम तिथि । ಪಾಡ್ಯ, ಪ್ರತಿಪದೆ.

**परिवाद**– पु निंदा । ನಿಂದೆ, ಟೀಕೆ, ದೋಷಕಥನ.

**परिवादी**– वि. निंदक । ನಿಂದಿಸುವವ, ಟೀಕಾಕಾರ.

**परिवार**– पु. कुटुंब, परिजन, समूह, आवरण। ಕುಟುಂಬ, ಪರಿವಾರ, ಸೇವಕರು, ಸಮೂಹ, ಆವರಣ.

**परिवारी**– पु कुटुंबी। ಕುಟುಂಬದಲ್ಲಿರುವವ.

**परिवास**– पु घर। ಮನೆ, ಬಿಡಾರ.

**परिवृत**–वि घिरा हुआ। ಸುತ್ತಲ್ಪಟ್ಟ, ಮುಚ್ಚಲ್ಪಟ್ಟ

**परिवेष्टन**– पु घेरा, आच्छादन। ಪರಿವೇಷ್ಟನೆ, ಸುತ್ತುವದು, ಆಚ್ಛಾದನೆ.

**परिव्राजक**– पु संन्यासी। ಸನ್ಯಾಸಿ, ಯತಿ

**परिशिष्ट**– वि. बचा हुआ। ಉಳಿದ पु किसी पुस्तक आदिका वह भाग जो बादमें जोड़ा गया हो। ಪರಿಶಿಷ್ಟ, ಹಿಂದಿನಿಂದ ಜೋಡಿಸಿದ ಭಾಗ, ಪುರವಣಿ, ಅನುಬಂಧ

**परिशीलन**– पु विचारपूर्वक पढ़ना। ಪರಿಶೀಲನೆ, ವಿಚಾರಪೂರ್ವಕವಾಗಿ ಓದುವದು

**परिशोधित,परिशुद्ध**– वि. अच्छी तरहसे साफ किया गया। ಪರಿಶೋಧಿತ, ಶುದ್ಧ ಮಾಡಲ್ಪಟ್ಟ.

**परिश्रम**– पु मेहनत। ಶ್ರಮ, ಕಷ್ಟ, ಪ್ರಯಾಸ.

**परिश्रमी**– वि मेहनती। ಶ್ರಮ ಪಡುವವ.

**परिषद्**– स्त्री. सभा, समाज। ಪರಿಷತ್ತು, ಸಭೆ, ಸಮೂಹ.

**परिस्तान**–पु. परियों के रहनेका स्थान। ಅಪ್ಸರೆಯರಿರುವ ಸ್ಥಳ.

**परिहत**– वि. मरा हुआ, नष्ट। ಸತ್ತ, ನಷ್ಟವಾದ.

**परिहरना**– सक्रि त्याग करना। ತ್ಯಜಿಸು, ಕೈಬಿಡು.

**परिहार**– पु त्याग, खंडन, लगान की माफी, नि:शुल्क भूमि, पशुओंके चरनेकी सार्वजनिक भूमि, तिरस्कार, लडाई में जीता हुआ धन। ತ್ಯಾಗ, ಪರಿಹಾರ, ನಿವಾರಣೆ, ತೆರಿಗೆ ಬಿಟ್ಟುಕೊಡುವದು, ತೆರಿಗೆಯಿಲ್ಲದ ಭೂಮಿ, ಗೋಮಾಳ, ಸಾರ್ವಜನಿಕ ಹುಲ್ಲುಗಾವಲು, ತಿರಸ್ಕಾರ, ಯುದ್ಧದಲ್ಲಿ ಜಯಿಸಿದ ಹಣ.

**परिहास**– पु हँसी। ಹಾಸ್ಯ, ವಿನೋದ, ಗೇಲಿ, ತಮಾಷೆ, ನಗಚಾಟಿಕೆ

**परी**– स्त्री अप्सरा, परम रूपवती स्त्री। ಅಪ್ಸರೆ, ಅತ್ಯಂತ ಸುಂದರ ಸ್ತ್ರೀ, ಮೋಹಿನಿ.

**परीखना**– सक्रि जाँचना। ಪರೀಕ್ಷಿಸು.

**परीज़ाद**– वि अत्यंत सुंदर। ಅತಿ ಸುಂದರವಾದ.

**परुस, परुष**– वि कठोर, अप्रिय। ಕಠೋರ, ತೀಕ್ಷ್ಣ, ಅಪ್ರಿಯ.

**परुसना**– सक्रि दे. 'परसना'।

**परे**– क्रिवि उस पार, ऊपर, बाहर, बाद। ಆಚೆಗೆ, ಅತ್ತ, ಬೇರೆ, ದೂರ, ಹೊರಗೆ, ನಂತರ

**परेई**– स्त्री. कबूतरी। ಹೆಣ್ಣು ಪಾರಿವಾಳ.

परेखना– सक्रि दे. 'परीखना'। वाट देखना। ಪ್ರತೀಕ್ಷಿಸು, ಹಾದೀ ನೋಡು.

परेखा– पु. परीक्षा, पश्चात्ताप। ಪರೀಕ್ಷೆ, ನಿರೀಕ್ಷಣೆ,ಪಶ್ಚಾತ್ತಾಪ,ಖೇದ

परेता– पु सूत लपटनेका वेलन। ದಾರಸುತ್ತುವ ಉಪಕರಣ,ದಾರದ ಚಕ್ಕಿ.

परेर– पु आकाश। ಆಕಾಶ.

परेवा– पु कबूतर या अन्य तेज उड़ने वाला पक्षी, शीघ्रगामी, पत्रवाहक। ಪಾರಿವಾಳ ಅಥವಾ ವೇಗವಾಗಿ ಹಾರುವ ಪಕ್ಷಿ, ಬೇಗ ಹೋಗುವವ, ಪತ್ರವಾಹಕ, ಓಲೆಕಾರ

परेश, परेस– पु. परमेश्वर। ಪರಮೇಶ್ವರ, ದೇವರು

परेशान–वि व्याकुल। ವ್ಯಾಕುಲ,ವ್ಯಗ್ರ, ವಿಹ್ವಲ, ಕಂಗೆಟ್ಟ, ಪೇಚಾಡುವ.

परेशानी– स्त्री. हैरानी, व्याकुलता। ತ್ರಾಸ, ವ್ಯಾಕುಲತೆ, ಕಾಳಜಿ, ಚಿಂತೆ, ಪೇಚಾಟ.

परेह– पु. वेसनकी पतली कढ़ी। ನಾರು, ಹುಳಿ.

परों– क्रिवि परसों। ಮೊನ್ನೆ,ನಾಡದು.

परोक्ष– पु. अनुपस्थिति। ಗೈರು ಹಾಜರಿ, ಅನುಪಸ್ಥಿತಿ.

परोना– सक्रि दे 'पिरोना'।

परोरना– सक्रि. मंत्र पढ़कर फूंकना। ಮಂತ್ರಪಠಿಸು, ಮಂತ್ರಹಾಕು.

परोसना– सक्रि परसना। ನೀಡು, ಬಡಿಸು, ಊಟಕ್ಕೆ ಹಾಕು.

परोसा– पु एक आदमीके खानेभरका भोजन। ಒಬ್ಬನು ಊಟ ಮಾಡುವಷ್ಟು ಆಹಾರ, ಎಡೆ.

परोसी– पु दे 'पड़ोसी'।

परोहन– पु वह पशु जिसपर सवार होकर यात्रा की जाय। ಹತ್ತಿ ಪ್ರವಾಸ ಮಾಡಲು ಉಪಯೋಗಿಸಲ್ಪಡುವ ಪಶುಗಳು, ಗಾಡಿ, ಚಕ್ಕಡಿ,ವಾಹನ, ಬಂಡಿ.

परोहा– पु. मोट। ಯಾತ, ಮೊಟ್ಟೆ, ಕಪಿಲೆ.

पर्चा– पु दे. 'परचा'।

पर्चाना– सक्रि. दे 'परचाना'।

पर्चून– पु. दे 'परचून'।

पर्जन्य– पु. बादल, इंद्र, विष्णु। ಮೋಡ, ಇಂದ್ರ, ವಿಷ್ಣು.

पर्ण– पु पत्ता। ಎಲೆ.

पर्त– स्त्री दे 'परत'।

पर्दा– पु दे 'परदा'।

पर्वत– पु पहाड़। ಪರ್ವತ.

पर्यंक– पु दे 'परियंक'।

पर्यंत– क्रिवि दे. 'परियंत'।

पर्यटन– पु. भ्रमण। ಭ್ರಮಣ, ಸಂಚಾರ.

पर्यवसान– पु समाप्ति, शामिल होना। ಕೊನೆ, ಸಮಾಪ್ತಿ, ಕೂಡುವದು.

पर्याप्त–वि यथेष्ट, समर्थ। ಯಥೇಷ್ಟ, ಸಾಕಷ್ಟು, ಸಮರ್ಥ.

पर्याय– पु. समानार्थक शब्द, प्रकार,

क्रम, निर्माण। ಒಂದೇ ಅರ್ಥದ ಶಬ್ದ, ಪ್ರಕಾರ, ಕ್ರಮ, ವ್ಯವಸ್ಥೆ, ನಿರ್ಮಾಣ.

**पर्यालोचन**– पु. **पर्यालोचना**– स्त्री समीक्षा, पूरी जॅाच । ವಿಮರ್ಶೆ, ಪರೀಕ್ಷೆ, ಪೂರ್ಣವಾದ ವಿಚಾರಣೆ.

**पर्व**– पु. त्योहार, भाग । ಹಬ್ಬ, ಶುಭ ದಿನ, ಪುಣ್ಯದಿನ, ಭಾಗ.

**पर्वरिश**– स्त्री दे 'परवरिश'।

**पर्वाना**– पु दे. 'परवाना'।

**पर्वाह**– स्त्री दे. 'परवाह'।

**पलंग**– पु वडी चारपाई। ಪಲಂಗ, ಮಂಚ

**पलंग पोश**– पु पलॅगपर बिछाने की चादर। ಮಗ್ಗಲಾಸಿಗೆ, ಗಾದಿಯ ಮೇಲೆ ಹಾಸುವ ಬಟ್ಟೆ.

**पलांगिया**– स्त्री छोटा पलंग। ಚಿಕ್ಕ ಮಂಚ, ಪಲಂಗ.

**पल**– पु क्षण, मास, तराजू, पुआल, छल। ಕ್ಷಣ, ನಿಮಿಷ, ಮಾಂಸ, ತಕ್ಕಡಿ, ಜೋಳದ ಕಡ್ಡಿ, ಸೊಪ್ಪೆ, ಮೋಸ.

**पलक**– स्त्री ऑख के ऊपर का चमडे का परदा, क्षण। ರೆಪ್ಪೆ, ಎವೆ, ಕ್ಷಣ, ನಿಮಿಷ.

—**बिछाना**= प्रेम से स्वागत करना । ಪ್ರೇಮದಿಂದ ಸ್ವಾಗತಿಸು.

—**मारना**= ऑखो से संकेत करना । ಕಣ್ಣು ಹೊಡೆ, ಸಂಕೇತ ಮಾಡು.

—**से पलक न लगना**= नींद न आना। ನಿದ್ದೆ ಕೆಡು, ನಿದ್ರೆ ಹತ್ತದಿರು

**पलक-दरिया**– पु वडा दानी । ದಾನ-ಶೂರ, ಉದಾರ.

**पलका**– पु. पलंग, शय्या। ಪಲಂಗ, ಮಂಚ, ಹಾಸಿಗೆ.

**पलटना**– अकि लौटना, उलट जाना। ತಿರುಗು, ಬದಲಾಗು, ಮಗುಚಿ ಬೀಳು, ಹೊರಳು. सकि दे. 'पलटाना'।

**पलटनियॉं**– वि पलटनमें काम करनेवाला। ಸೈನ್ಯದಲ್ಲಿ ಕೆಲಸ ಮಾಡುವ ಸೈನಿಕ.

**पलटा**– पु वदला, परिवर्तन, मल्लयुद्ध की एक युक्ति, नावमे वह पटरी जिसपर खेनेवाला बैठता है। ವಿನಿಮಯ, ಸೇಡು, ಫಲ, ಪರಿವರ್ತನೆ, ಬದಲು, ಕುಸ್ತಿಯ ಒಂದು ಯುಕ್ತಿ, ನಾವೆಯಲ್ಲಿ ಹುಟ್ಟು ಹೊಡೆಯುವವನು ಕೂಡ್ರುವ ಹಲಿಗೆ.

—**खाना**= परिस्थिति का वदल जाना। ವೇಳೆ ತಿರುಗು, ಕಾಲ ಬದಲಾಗು.

—**लेना**= वदला लेना। ಸೇಡುತೀರಿಸಿ-ಕೊಳ್ಳು.

**पलटाना**– सकि फिराना, वदलाना । ತಿರುಗಿಸು, ಬದಲಿಸು, ಮಗುಚು.

**पलटे**– क्रिवि वदलेमें । ಪ್ರತಿಯಾಗಿ, ಬದಲಾಗಿ.

**पलडा, पलरा**– पु तराजू का पल्ला। ತಕ್ಕಡಿಯ ತಟ್ಟೆ.

**पलथी**– स्त्री दोनो पॉवो को मोड़कर

और एक को दूसरेपर रखकर वैठने की स्थिति। ಚಪ್ಪಳಕಾಲು ಹಾಕಿ ಕೂಡ್ರುವಿಕೆ, ಅಪ್ಪಾಳಿ ಚಪ್ಪಾಳಿ ಹಾಕಿ ಕೂಡ್ರುವಿಕೆ, ಪದ್ಮಾಸನ.

**पलना**– अक्रि. पोषित होना। ಪೋಷಿಸಲ್ಪಡು, ಜೋಕೆ ಮಾಡಲ್ಪಡು, ತಿಂದುಂಡು ದೊಡ್ಡವನಾಗು, ಬೆಳೆ, ಬಲಿ. पु. बच्चो का खटोला। ತೊಟ್ಟಿಲು.

**पलनाना, पलानना**– सक्रि. कसकर या जोतकर तैयार करना। ಕುದುರೆಗೆ ಜೀನು ಹಾಕಿ ಕೂಡ್ರಲು ಸಿದ್ಧ ಪಡಿಸು, ಹೂಡು, ಬಿಗಿ.

**पलल**– पु मास, कीचड, मैल, शव, राक्षस, पत्थर, शैवाल, तिलका चूर्ण। ಮಾಂಸ, ಕೆಸರು, ಹೊಲಸು, ಶವ, ರಾಕ್ಷಸ, ಕಲ್ಲು, ಪಾಚಿ, ಶೈವಾಲ, ಎಳ್ಳಿನ ಚೂರ್ಣ.

**पलवल**– पु दे. 'परवल'।

**पलवा**– पु अंजलि, ऊख के ऊपरी भाग। ಬೊಗಸೆ, ಅಂಗೈ, ಕಬ್ಬಿನ ಮೇಲ್ಭಾಗ, ಸೋಗೆ.

**पलवाना**– सक्रि. दूसरे से पालन पोषण कराना। ಪಾಲನೆ ಪೋಷಣೆ ಮಾಡಿಸು.

**पलवार**–पु नावविशेष। ಒಂದು ತರದ ನಾವೆ, ಡೋಣಿ.

**पलवारी**– पु मल्लाह। ಅಂಬಿಗ.

**पलवैया**– पु. पालनेवाला। ರಕ್ಷಿಸುವವ, ಪಾಲಕ.

**पलस्तर**– पु. चूने आदि का लेप। ಪ್ಲಾಸ್ಟರ, ಲೇಪ, ಗಿಲಾವು, ಗಚ್ಚು.

**पलहना**– अक्रि. लहलहाना। ನಳನಳಿಸು, ಚಿಗುರೊಡೆ, ಕೊನರು.

**पलहा**– पु पल्लव। ಪಲ್ಲವ, ಚಿಗುರೆಲೆ, ತಳಿರು.

**पला**–पु पलड़ा, अंचल, किनारा, पल। ತಕ್ಕಡಿಯ ತಟ್ಟೆ, ಸೆರಗು, ಅಂಚು, ಪಲ, ಕ್ಷಣ, ನಿಮಿಷ.

**पलान**– पु जीन। ಜೀನು, ಹಲ್ಲಣ.

**पलानना**– सक्रि दे. 'पलनाना'। आक्रमण के लिये तैयार होना। ಆಕ್ರಮಣ ಮಾಡಲು ಸಿದ್ಧನಾಗು.

**पलाना**–अक्रि. भागना। ಓಡು, ಅಂಜಿ ಓಡು, ಪಲಾಯನ ಮಾಡು

**पलानि, पलानी**– स्त्री छप्पर, जीन। ಚಪ್ಪರ, ಛಾವಣಿ, ಜೀನು, ಹಲ್ಲಣ

**पलायक**– पु भगोड़ा। ಓಡಿ ಹೋಗುವವ, ಹೇಡಿ.

**पलायन**– पु भागना। ಪಲಾಯನ, ಓಡಿ ಹೋಗುವಿಕೆ.

**पलाश, पलास**– पु किंशुक, टेसू। ಮುತ್ತುಗ ಗಿಡ ಅಥವಾ ಎಲೆ

**पलिका**– पु पलँग। ಮಂಚ.

**पलित**– वि वृद्ध, सफेद। ಮುದುಕ, ವೃದ್ಧ, ಬಿಳಿಯ (ಕೂದಲು). पु बालों का पकना, गरमी, कीचड। ಕೂದಲು ಬೆಳ್ಳಗಾಗುವದು, ಕಾವು, ಕೆಸರು.

**पलीत**– पु. भूत। ದೆವ್ವ, ಭೂತ वि.

दुष्ट, धूर्त । ದುಷ್ಟ, ಧೂರ್ತ
**पलीता–** पु. **पलीती–** स्त्री. वह बत्ती जिस से तोप के रंजकमें आग लगाते है । ತೋಪು ಅಥವಾ ತುಬಾಕಿ ಹೊತ್ತಿಸಲು ಉಪಯೋಗಿಸುವ ಬತ್ತಿ.
**पलीद–** वि. गंदा, अपवित्र, नीच । ಹೊಲಸು,ಅಪವಿತ್ರ, ನೀಚ,ದುಷ್ಟ.
**पलुआ, पलुवॉ–** पु. पाला हुआ । ಸಾಕಿದ,ಜೋಕೆ ಮಾಡಿದ(ಪ್ರಾಣಿ)
**पलुहना–** अक्रि पल्लवित होना। ಚಿಗುರು, ಪಲ್ಲವಿತವಾಗು ಅಂಕುರಿಸು.
**पलुहाना–** सक्रि पल्लवित करना । ಚಿಗುರುವಂತೆ ಮಾಡು, ಶೋಭಿಸುವಂತೆ ಮಾಡು.
**पलेड़ना–** सक्रि धक्का देना । ನೂಕು, ದೂಡು, ಒತ್ತು.
**पलेथन, पलोथन–** पु सूखा आटा जो रोटी बेलते समय काममें आता है । ರೊಟ್ಟಿ ಅಥವಾ ಹಪ್ಪಳ ಲಟ್ಟಿಸುವಾಗ ಉಪಯೋಗಿಸುವ ಅಕ್ಕಿಯ ಹಿಟ್ಟು.
**पलोटना–** सक्रि (पैर) दबाना । ಮೆತ್ತಗೆ ತುಳಿ, ಕಾಲು ಒತ್ತು, ಸೇವೆ ಮಾಡು. अक्रि छटपटाना । ತಳಮಳಿಸು, ನರಳಾಡು, ಉರುಳಾಡು.
**पलोथन–** पु. दे. 'पलेथन' ।
**पलोसना–** सक्रि धोना, फुसलाना । ತೊಳೆ, ಸ್ವಚ್ಛಮಾಡು, ಒಗೆ, ಪುಸಲಾಯಿಸು, ಉಬ್ಬಿಸು.
**पल्लव–** पु. कोपल, विस्तार, चंचलता । ಚಿಗುರು, ತಳಿರು, ವಿಸ್ತಾರ, ಚಂಚಲತೆ.
**पल्लवना–** अक्रि. पल्लवित होना । ಚಿಗುರು, ಅಂಕುರಿಸು.
**पल्लवित–** वि. पल्लवयुक्त, विस्तृत । ಚಿಗುರಿದ, ಹಸರು ಮುರಿಯುವ, ರೋಮಾಂಚಗಳೆದ್ದ, ವಿಸ್ತಾರವಾದ.
**पल्ला–** पु. पलड़ा, किवाड, अंचल, तरफ, दूरी, कैंची का एक भाग, तीन मन का बोझा, अन्न बाधने का टाट या बोरा । ತಕ್ಕಡಿಯ ತಟ್ಟೆ, ಪಡಕು, ಕದ, ಸೆರಗು, ಪಕ್ಕ, ಮಗ್ಗಲು, ದೂರ, ಅಂತರ, ಕತ್ತರಿಯ ಒಂದು ಎಲೆ, ಮೂರು ಮಣದ ತೂಕ, ಧಾನ್ಯ ತುಂಬುವ ಚೀಲ.
—**छूटना**= छुटकारा पाना । ಸೆರಗು ಹರಿ, ತ್ರಾಸ ದೂರಾಗು
—**पसारना**= याचना करना । ಸೆರಗೊಡ್ಡು, ಬೇಡಿಕೊಳ್ಳು.
**पल्लेपड़ना**= मिलना। ದೊರೆ, ಕೊರಳಲ್ಲಿ ಬೀಳು.
—**बांधना**= नियुक्त करना, व्याह करना, तह करना । ನಿಯುಕ್ತ ಮಾಡು, ಮದುವೆ ಮಾಡು, ಮಡಿಕೆಮಾಡು, ನಿರಿಗೆ ಮಾಡು.
**पल्ली–** स्त्री छोटा गॉव, झोपड़ी, छिपकली । ಚಿಕ್ಕ ಊರು, ಹಳ್ಳಿ,

ಗುಡಿಸಲು, ಹಲ್ಲಿ.
पल्लू– पु चौड़ी गोट, पल्ला। ಗೋಟು, ಅಂಚು, ನೆರಗು, ಪಟ್ಟಿ.
पल्लेदार–पु. गल्ला ढोने या तोलनेवाला। ಧಾನ್ಯ ಹೊರುವವ, ತೂಕಮಾಡುವವ.
पल्लेदारी– स्त्री. अन्न तौलने या ढोने का काम। ಧಾನ್ಯ ಹೊರುವ ಅಥವಾ ತೂಗುವ ಕೆಲಸ.
पल्लौ– पु. पल्लव, बोरा या गोन। ಪಲ್ಲವ, ಚಿಗುರೆಲೆ,ಧಾನ್ಯತುಂಬುವ ಚೀಲ, ಗೋಣಿ ಚೀಲ.
पवन– पु. हवा, साँस। ಹವೆ, ಶ್ವಾಸ. वि. पावन। ಪವಿತ್ರ.
पवनी–स्त्री नाई, धोबी, चमार इत्यादि जातियों की प्रजा। ನಾವಲಿಗ, ಅಗಸ, ಮೋಚಿ ಮುಂತಾದ ಜಾತಿಯ ಜನರು.
पवाँरना– सक्रि फेंकना। ಒಗೆ, ಬಿಸಾಡು
पवाई– स्त्री एक पाव का जूता, चक्की का एक पाट। ಒಂದು ಕಾಲಿನ ಕೆರವು, ಒಂಟಿ ಎಕ್ಕಡ, ಬೀಸುವ ಕಲ್ಲಿನ ಒಂದು ಭಾಗ.
पवाड़ा– पु दे 'पँवाड़'।
पवाना– सक्रि भोजन कराना। ಊಟ ಮಾಡಿಸು, ಊಟಕ್ಕೆ ಹಾಕು, ತಿನ್ನಿಸು
पवित्रता– स्त्री. शुद्धता। ಪವಿತ್ರತೆ, ಶುದ್ಧತೆ, ಸ್ವಚ್ಛತೆ.
पशम, पश्म, पसम– स्त्री बढ़िया मुलायम ऊन, तुच्छ वस्तु। ಉತ್ತಮ ಪ್ರತಿಯ ಮೃದುವಾದ ಉಣ್ಣೆ, ತುಚ್ಛ ವಸ್ತು.
पशमीना, पश्मीना– पु. एक तरह का ऊन या ऊनी कपड़ा। ಒಂದುತರದ ಉಣ್ಣೆ ಅಥವಾ ಉಣ್ಣೆಯ ಬಟ್ಟೆ.
पशुता– स्त्री पशुत्व, मूर्खतन। ಪಶುತ್ವ, ಮೂರ್ಖತನ.
पश्चात्– क्रिवि पीछेसे। ಹಿಂದಿನಿಂದ, ಆಮೇಲೆ, ತರುವಾಯ, ಬಳಿಕ.
पषारना, पषालना– सक्रि. धोना। ತೊಳೆ, ಒಗೆ, ಸ್ವಚ್ಛಮಾಡು.
पसंद– वि. इच्छानुकूल। ಇಷ್ಟ,ಒಪ್ಪುವ, ಸೇರುವ. स्त्री अभिरुचि। ಅಭಿರುಚಿ, ಒಪ್ಪಿಗೆ.
पस– अव्य इसलिये, पीछे, अंतमें। ಆದ್ದರಿಂದ, ಹಿಂದಿನಿಂದ, ಕೊನೆಗೆ, ಬಳಿಕ, ತರುವಾಯ.
पसनी– स्त्री. अन्नप्राशन। 'ಅನ್ನಪ್ರಾಶನ' ಸಮಾರಂಭ.
पसपा– वि पीछे हटनेवाला। ಹಿಂದೆಗೆಯುವವ, ಹಿಂದೆ ಸರಿಯುವವ.
पसर– पु. फैलाव, आधि अंजली, आक्रमण। ವಿಸ್ತಾರ, ಪ್ರಸಾರ, ಅರ್ಧ ಬೊಗಸೆ, ಬೊಗಸೆಯತಗ್ಗು, ಆಕ್ರಮಣ.
पसरना– अक्रि. फैलना। ಹಬ್ಬು,ಪಸರಿಸು, ಹರಡು, ವಿಸ್ತರಿಸು.
पसरहट्टा– पु पंसारियों की दूकानों का

बाजार। ಕಿರಾಣಿ ಅಂಗಡಿಗಳ ಬೀದಿ

**पसराना**– सक्रि फैलवाना। ಹರಡಿಸು, ಎರಡನೆಯವರಿಂದ ವಿಸ್ತರಿಸು.

**पसरौहा**– पु फैलनेवाला। ವಿಸ್ತರಿಸುವ, ಹಬ್ಬುವ, ಹರಡುವ.

**पसली**– स्त्री पंजर की हड्डी। ಬರಿಕೆಯ ಎಲುವು, ಪಕ್ಕೆಯೆಲುವು.

**—फड़कना**= जोश आना। ಆವೇಶ ಬರು, ಉತ್ಸಾಹಿತನಾಗು

**पसा**– पु अंजली। ಬೊಗನೆ.

**पसाउ**– पु अनुग्रह। ಅನುಗ್ರಹ, ಕೃಪೆ.

**पसाना**– सक्रि मॉड निकालना। ಅಕ್ಕಿಯ ಗಂಜಿ ತೆಗೆ, ಬಸಿ, ತಿಳಿಸುರಿ अक्रि प्रसन्न होना। ಪ್ರಸನ್ನನಾಗು.

**पसार, पसारा**– पु फैलाव, प्रपंच। ಪ್ರಸಾರ, ವಿಸ್ತಾರ, ಉದ್ದಗಲ, ಪ್ರಪಂಚ, ಮಾಯೆ.

**पसारना**– सक्रि फैलाना। ಹರಡು, ಹಬ್ಬಿಸು, ಚಾಚು.

**पसाव**– पु मॉड, प्रसाद। ಅಕ್ಕಿಯ ಗಂಜಿ, ಪ್ರಸಾದ, ಅನುಗ್ರಹ.

**पसावन**– पु मॉड इत्यादि। ಗಂಜಿ ಅಥವಾ ಬಸಿದ ವಸ್ತು.

**पसीजना**– अक्रि. पसीना निकलना, दयार्द्र होना। ಬೆವರು ಬರು, ಮನಸ್ಸು ಕರಗು, ದಯೆ ಹುಟ್ಟು.

**पसीना**– पु प्रस्वेद। ಬೆವರು, ಸ್ವೇದ.

**पसुरी, पसुली**– स्त्री. दे. 'पसली'।

**पसूजना**– सक्रि. सीना। ಹೊಲಿ.

**पसेउ, पसेव**– पु दे 'पसीना'।

**पसेरी**– स्त्री दे 'पंसेरी'।

**पसेव**– पु दे 'पसेउ'।

**पसोपेश**– पु दुविधा। ಹಿಂದು ಮುಂದು, ಅನುಮಾನ, ತೊಡಕು

**पस्त**– वि. हारा हुआ, थका हुआ। ಸೋತ, ದಣಿದ, ಕುಂದಿದ, ಕುಗ್ಗಿದ.

**पस्त-हिम्मत**– वि कायर। ಎದೆಗುಂದಿದ, ಧೈರ್ಯಗುಂದಿದ, ಹೇಡಿ.

**पहँ**– अव्य पास, से। ಸಮೀಪ, ಹತ್ತಿರ, ಮಾರ್ಗವಾಗಿ.

**पहँसुल**–स्त्री साग काटनेका एक औजार। ಈಳಿಗೆ.

**पहचान**– स्त्री परिचय, चिह्न। ಪರಿಚಯ, ಗುರುತು, ಚಿಹ್ನೆ, ಲಕ್ಷಣ.

**पहचानना**–सक्रि चीन्हना, गुण दोषादि जानना। ಗುರುತಿಸು, ಪರಿಚಯ ಮಾಡಿಕೊಳ್ಳು. ಪರೀಕ್ಷಿಸು.

**पहटना**– सक्रि धार तेज करना, पीछा करना। ಮಸೆ, ಬೆನ್ನುಹತ್ತು, ಅಟ್ಟು, ತರುಬು.

**पहनना, पहिनना**– सक्रि शरीरपर धारण करना। ಉಡು, ತೊಡು, ಧರಿಸು.

**पहनवाना**–सक्रि 'पहनाना' का प्रे रूप।

**पहनाई**– स्त्री. पहननेका काम या ढग, पहनानेकी मजदूरी। ತೊಡುವಿಕೆ, ಧರಿಸುವಿಕೆ, ಉಡುವಿಕೆ, ತೊಡಿಸುವ ಕೂಲಿ

**पहनाना**– सक्रि वस्त्रादि धारण कराना।

ಬಟ್ಟೆ, ಆಭರಣ ಮುಂತಾದವುಗಳನ್ನು ತೊಡಿಸು.

पहनाव,पहनावा– पु पोशाक, वेशभूष। ಉಡಿಗೆ ತೊಡಿಗೆ, ವೇಷಭೂಷಣೆ.

पहपट– पु. निंदा, गोरगुल, धोखा। ನಿಂದೆ, ಗದ್ದಲ, ಗಲಭೆ, ಮೋಸ, ಕಪಟ.

पहपटबाज़– पु गोरगुल करनेवाला, शरारती, धोखेबाज। ಗದ್ದಲ ಮಾಡುವವ, ಗಲಾಟೆ ಖೋರ, ನಿಂದೆ ಮಾಡುವವ, ದುಷ್ಟ,ಮೋಸಗಾರ.

पहर– पु. तीन घंटेका समय, युग। ಪ್ರಹರ, ಮೂರುತಾಸು, ಯುಗ.

पहरना– अक्रि. दे 'पहनना'।

पहरा– पु. रखवाली, पहरेमें रहनेकी स्थिति, युग, समय। ಕಾವಲು, ರಕ್ಷಣೆ, ಪಹರೆ ಬಂಧನ, ಸೆರೆ, ಕೈದು, ಯುಗ, ಸಮಯ.

पहराइत– पु. पहरा देनेवाला। ಕಾವಲುಗಾರ, ಪಹರೆ ಮಾಡುವವ.

पहराना– सक्रि दे 'पहनाना'।

पहरावा– पु दे 'पहनावा'।

पहरी, पहरुआ, पहरू– पु. पहरेदार, रक्षक। ಕಾವಲುಗಾರ, ರಕ್ಷಕ.

पहल– पु, बगल, तह, पुरानी रुई। ಮಗ್ಗಲು, ಮಡಿಕೆ, ಥರ, ಹಳೆಯ ಅರಳೆ, ಹತ್ತಿ.

पहलदार– वि जिसमें पहल हो। ಮಗ್ಗಲುಗಳುಳ್ಳ, ಪಾರ್ಶ್ವಗಳುಳ್ಳ

पहलवान– पु मल्ल। ಜಟ್ಟಿ, ಮಲ್ಲ, ಪೈಲವಾನ.

पहला– वि पहला। ಮೊದಲಿನ, ಆರಂಭದ, ಒಂದನೆಯ. पु. पुरानी रुई। ಹಳೆಯ ಅರಳೆ.

पहलू–पु. पार्श्व, बाजू, पक्ष। ಪಾರ್ಶ್ವ, ಮಗ್ಗಲು, ದಿಶೆ, ಪಕ್ಷ, ಹೊರಮೈ.

पहलू-तिही– स्त्री. उपेक्षा। ಉಪೇಕ್ಷೆ, ದುರ್ಲಕ್ಷ್ಯ.

पहले– अव्य. आरंभमें, आगे। ಮೊದಲು, ಆರಂಭದಲ್ಲಿ, ಪೂರ್ವದಲ್ಲಿ.

—पहल = सबसे पहले। ಎಲ್ಲಕ್ಕೂ ಮೊದಲು, ಸರ್ವ ಪ್ರಥಮ,ಮೊಟ್ಟ ಮೊದಲು.

पहलौठा, पहलौंठा–वि जो पहली बार गर्भसे उत्पन्न हो। ಮೊದಲು ಹುಟ್ಟಿದ (ಶಿಶು),ಜ್ಯೇಷ್ಠ, ಚೊಚ್ಚಲು.

पहलौठी– स्त्री प्रथम प्रसव। ಪ್ರಥಮ ಪ್ರಸವ, ಚೊಚ್ಚಲ ಬಸುರು.

पहाड, पहार– पु. पर्वत, भारी ढेर, कठिण कार्य। ಪರ್ವತ, ಗುಡ್ಡ, ದೊಡ್ಡ ರಾಶಿ, ಕಠಿಣ ಕೆಲಸ.

पहाडा– पु गुणनसूची। ಅಂಕಮಗ್ಗಿ, ಮಗ್ಗಿ ಕೋಷ್ಟಕ.

पहाड़िया, पहाड़ी– वि. पहाडका। ಪರ್ವತ ಸಂಬಂಧದ, ಗುಡ್ಡಗಾಡ, ಪರ್ವತದಲ್ಲಿರುವ. पु छोटा पहाड। ಚಿಕ್ಕ ಪರ್ವತ, ಗುಡ್ಡ, ಬೆಟ್ಟ.

पहिचान– स्त्री दे. 'पहचान'।

पहिनना, पहिनाना–सक्रि.दे 'पहनना'। 'पहनाना।

**पहियाँ**–अव्य पास । ಹತ್ತಿರ, ಸಮೀಪ.
**पहिया**– पु चक्का । ಗಾಲಿ, ಚಕ್ರ.
**पहिरना, पहिराना**– दे 'पहरना'। 'पहराना'।
**पहिला, पहिले**–वि दे 'पहला', 'पहले'।
**पहुंच**– स्त्री. पैठ, शक्ति, जानकारी । ಪ್ರವೇಶ, ಶಕ್ತಿ, ವಿಸ್ತಾರ, ತಿಳಕೊಳ್ಳುವ ಶಕ್ತಿ, ಗ್ರಾಹಕ ಶಕ್ತಿ
**पहुंचना**–अक्रि चलकर उपस्थित होना, प्रवेश करना, समझना, प्राप्त होना । ತಲುಪು, ಮುಟ್ಟು, ಸೇರು, ಪ್ರವೇಶಿಸು, ತಿಳಿ, ಅರಿ, ಗ್ರಹಿಸು, ಪ್ರಾಪ್ತವಾಗು.
**पहुंचा**–पु. कलाई । ಮಣಿಬಂಧ, ಮಣಿಕಟ್ಟು, ಕೈಹರಡು.
**पहुंचाना**– सक्रि ले जाना, भेजना, अनुभव करना । ತಲುಪಿಸು, ಕರೆದುಕೊಂಡು ಹೋಗು, ಪ್ರವೇಶ ಮಾಡಿಸು, ಕಳುಹಿಸು, ಅನುಭವ ಮಾಡಿಸು.
**पहुंची**– स्त्री कलाई का एक आभूषण । ಪೋಚೆ, ಮಣಿಕಟ್ಟಿನಲ್ಲಿ ಧರಿಸುವ ಒಂದು ಆಭರಣ.
**पहु**– स्त्री. पौ, किरण । ಮುಂಜಾವು, ಬೆಳಗು, ಕಿರಣ.
**पहुनई, पहुनाई**–स्त्री आथित्य । ಅತಿಥಿ ಸತ್ಕಾರ, ಆದರ ಸತ್ಕಾರ.
**पहुना**– पु अतिथि । ಅತಿಥಿ.
**पहुप**– पु. फूल । ಹೂವು, ಪುಷ್ಪ.
**पहुम, पहुमी**– स्त्री. पृथ्वी । ಪೃಥ್ವಿ.

**पहेरी, पहेली**–स्त्री गूढ प्रश्न । ಒಗಟು, ಬಿಕ್ಕಟ್ಟು, ಸಮಸ್ಯೆ.
**पॉ, पॉइ, पॉऊ**– पु. पैर । ಕಾಲು, ಪಾದ.
**पॉक**– पु पंक । ಕೆಸರು.
**पॉख, पॉखड़ा**– पु पंख । ರೆಕ್ಕೆ.
**पॉखडी, पांखुरी**– स्त्री पुष्पदल । ಹೂವಿನ ರೇಕು, ಪುಷ್ಪದಲ.
**पॉखी**– पु पक्षी, फतिंगा । ಪಕ್ಷಿ, ದೀಪದ ಹುಳು, ಪತಂಗ.
**पांग**– पु कछार । ನದಿ ಮುಳುಗುವ ಭೂಮಿ, ನದಿ ಇಳಿದಾಗ ಕಾಣುವ ಭೂಮಿ.
**पांगा, पांगानोन**– पु समुद्र के जल से निकाला हुआ नमक । ಕಡಲುಪ್ಪು, ಸಮುದ್ರದ ಲವಣ.
**पॉगुर**– वि लॅगडा । ಕುಂಟ.
**पॉच**– वि चार और एक । ಐದು, ಪಂಚ.
**पॉचों अँगुलियॉ घीमे होना** = सब प्रकारका सुख मिलना । ಎಲ್ಲ ತರದ ಸುಖ ಸಿಗು, ದೈವ ತೆರೆ, ಬಹಳ ಲಾಭವಾಗು.
**पांचै**– स्त्री पंचमी । ಪಂಚಮಿ ತಿಥಿ
**पॉजना**– सक्रि वर्तनमें टॉका लगाना । ಬೆಸಿಗೆ ಹಾಕು, ಬೆಸೆ.
**पॉजर**– पु. ठठरी, पसली, पार्श्व । ಅಸ್ಥಿ ಪಂಜರ, ಬರಿಕೆಯ ಎಲವು, ಪಕ್ಕೆ ಎಲುಬು, ಪಾರ್ಶ್ವ, ಮಗ್ಗಲು.
**पॉजी**– स्त्री नदीका सूख जाना । ನದಿ

ಒಣಗುವದು, ಕಾಲು ಹೊಳೆ.
पांडक– पु दे ' पंडुक्र '।
पांडर– पु. कुंद, सफेद रंग, कोई सफेद वस्तु। ಒಂದು ಜಾತಿಯ ಮಲ್ಲಿಗೆ ಹೂ, ಬಿಳಿ ಬಣ್ಣ, ಬಿಳಿಯ ವಸ್ತು.
पांडुर– वि पीला, सफेद। ಹಳದಿ, ಬಿಳಿಯ. पु सफेद कोढ। ಬಿಳುವು, ತೊನ್ನು.
पांडुलिपि, पांडुलेख– पु हस्तप्रति। ಕರಡು ಪ್ರತಿ, ಹಸ್ತ ಪ್ರತಿ.
पांडे–पु ब्राह्मणोंकी एक जाति, रसोइया, अध्यापक। ಬ್ರಾಹ್ಮಣರ ಒಂದು ಜಾತಿ, ಅಡಿಗೆಯವ, ಅಧ್ಯಾಪಕ, ಶಿಕ್ಷಕ, ಉಪಾಧ್ಯಾಯ.
पांत, पांति, पाँती– स्त्री पंक्ति, समूह। ಪಂಕ್ತಿ, ಸಾಲು, ಸಮೂಹ
पांथ– पु पथिक। ದಾರಿಕಾರ, ಪ್ರವಾಸಿಕ.
पांथनिवास– पु. पांथशाला– स्त्री सराय। ಧರ್ಮಶಾಲೆ.
पायँता– पु खाटका वह भाग जिधर पैर किये जाते है। ಮಂಚದ ಕಾಲು ಕಡೆ ಭಾಗ.
पांय– पु पाँव। ಕಾಲು, ಪಾದ,
पांव– पु पैर, चरण। ಪಾದ, ಅಡಿ, ಕಾಲು.
—उखडना = पैर फिसलना, भाग जाना। ಜಾರು, ಚ್ಯುತನಾಗು, ಓಡಿ ಹೋಗು.
—फूलना = थक जाना। ದಣಿ.
—तलेसे मिट्टी निकल जाना=
—तलेसे ज़मीन खिसक जाना=
भय या दुःख के कारण सुध बुध खो जाना। ಭಯ ಅಥವಾ ದುಃಖ ದಿಂದ ಎಚ್ಚರದಪ್ಪು, ನಾಕು ಸಾಕಾಗಿ ಹೋಗು.
—भारी होना = गर्भ रहना। ಬಸುರಾಗು.
पाँवडा– पु. पैर रखनेके लिये फैलाया हुआ कपडा। ಕಾಲು ಇಡಲು ಹಾಸಿದ ಬಟ್ಟೆ.
पाँवडी– स्त्री खडाऊ, जूता। ಮೆಟ್ಟು, ಜೋಡು, ಪಾದರಕ್ಷೆ.
पाँवर– वि. पामर, नीच। ಪಾಮರ, ಮೂರ್ಖ, ನೀಚ
पाँवरि, पाँवरी– स्त्री जूता खडाऊ, सीढी, ड्योढ़ी। ಮೆಟ್ಟು, ಜೋಡು, ಪಾದರಕ್ಷೆ, ಸೋಪಾನ, ಪಾವಟಿಗೆ, ಹೊಸ್ತಿಲು, ಬಾಗಿಲು.
पाँस– स्त्री. खाद। ಗೊಬ್ಬರ.
पाँसना– सकि खेत में खाद डालना। ಗೊಬ್ಬರ ಹಾಕು.
पाँसा– पु चौपड़ खेलनेके चौपहल टुकडे। ಪಾಶ, ಕವಡೆ.
पाँसी–स्त्री. डोरीका बना जाल। ಹಗ್ಗದ ಜಾಲ, ಬಲೆಯ ಚೀಲ.
पाँसु– पु. धूलि, रज। ಧೂಳಿ, ರಜ.
पाँसुरी– स्त्री. दे ' पसली '।
पाँही– क्रिवि पास, निकट। ಹತ್ತರ, ನಿಕಟ, ಸಮೀಪ.

पा, पाइ– पु पॉव, चरग । ಕಾಲು, ಪಾದ.

पाइक– पु दूत, पैदल सैनिक, मल्ल । ದೂತ, ಕಾಲಾಳು, ಕಾಲುಸೈನಿಕ, ಮಲ್ಲ, ಜಟ್ಟಿ.

पाइतरी– स्त्री दे 'पॅयॅता' ।

पाई– स्त्री पैसेका तीसरा भाग, लकीर, घेरेमें नाचना, पूर्णविराम या चतुर्थांश सूचक, छोटी खडी रेखा, एक कीडा। ಪೈ, ಕಾಸು, ದುಡ್ಡಿನ ಮೂರನೆಯ ಭಾಗ, ಅಡ್ಡ ಗೆರೆ, ಪೂರ್ಣವಿರಾಮ ಅಥವಾ ಚತುರ್ಥಾಂಶ ಸೂಚಕ ಚಿಹ್ನೆ, ಒಂದು ಹುಳು.

पाउ– पु चौथाई ।ನಾಲ್ಕನೆಯ ಭಾಗ.

पाक– पु पकानेकी क्रिया, पकवान, पचना। ಅಡಿಗೆ ಮಾಡುವ ಕೆಲಸ, ಪಕ್ವಾನ್ನ, ಪಚನ ಕ್ರಿಯೆ.

पाक– वि शुद्ध, पवित्र । ಶುದ್ಧ, ಪವಿತ್ರ, ಸ್ವಚ್ಛ, ಪುನೀತ.

पाक दामन– वि पतिव्रता । ಪತಿವ್ರತೆ, ಸತಿ

पाक दामनी– स्त्री सतीत्व । ಪಾತಿವ್ರತ್ಯ, ಸತೀತ್ವ.

पाकना–अक्रि पकना। ಕುದಿ,ಬೇಯು, ಹಣ್ಣಾಗು.

पाकशाला–स्त्री रसोई घर । ಅಡಿಗೆಯ ಮನೆ.

पाका– पु. फोडा, जखम । ಹುಣ್ಣು, ಗುಳ್ಳೆ, ಗಾಯ. वि पक्व । ಪಕ್ವ, ಹಣ್ಣಾದ.

पाकी– स्त्री पवित्रता । ಪಾವಿತ್ರ್ಯ, ಶುದ್ಧತೆ, ಶುಚಿ.

पाकीज़गी– स्त्री पवित्रता । ಪಾವಿತ್ರ್ಯ, ಶುದ್ಧತೆ, ನೈರ್ಮಲ್ಯ, ಸ್ವಚ್ಛತೆ.

पाकीज़ा– वि पवित्र । ಶುದ್ಧ, ಸ್ವಚ್ಛ, ಪವಿತ್ರ, ನಿರ್ಮಲ.

पाक्षिक– वि पक्षमें एक बार होनेवाला, पक्ष संबंधी । ಪಕ್ಷದಲ್ಲಿ ಒಂದು ಸಾರೆ ಆಗುವ, ಪಕ್ಷ ಸಂಬಂಧದ.

पाखंड– पु छल, मिथ्या धर्म, ढोग । ಕಪಟ, ಮೋಸ, ನಟನೆ, ಸೋಗು.

पाख– पु पक्ष । ಪಕ್ಷ, ೧೫ ದಿನ

पाखर– स्त्री लोहेकी झूल । ಆನೆ ಅಥವಾ ಕುದುರೆಗಳಿಗೆ ಹೊದಿಸುವ ಕಬ್ಬಿಣದ ಕವಚ.

पाखा– पु कोना, पाख, पंख, चौड़ाई-वाली दीवारोका ऊपर उठा हुआ त्रिकोणाकार भाग । ಮೂಲೆ, ಪಕ್ಷ, ೧೫ ದಿನ, ರೆಕ್ಕೆ, ಮೇಲೆ ಹಾಯ್ದಿರುವ ತ್ರಿಕೋಣಾಕಾರದ ಅಗಲು ಗೋಡೆಯ ಭಾಗ.

पाख़ाना– पु मल, मलत्यागका स्थान । ಮಲ, ಪಾಯಖಾನೆ,ಶೌಚಕೂಪ.

पाग– स्त्री पगडी, चाशनी । ಪೇಟಾ, ರುಮಾಲು, ಮುಂಡಾಸ, ಸಕ್ಕರೆ ಪಾಕ

पागना– सक्रि चाशनीमें डुबाना, तन्मय करना । ಪಾಕದಲ್ಲಿ ಅದ್ದು, ತನ್ಮಯನಾಗು.

पागल– वि. बावला, मूर्ख । ಹುಚ್ಚ,

ಉನ್ಮತ್ತ, ಮೂರ್ಖ, ಮರುಳ, ಪೆದ್ದ.

पागलखाना– पु. पागलोंका चिकित्सालय । ಹುಚ್ಚರ ಆಸ್ಪತ್ರೆ.

पागलपन– पु. उन्माद, विक्षिप्तता । ಹುಚ್ಚು, ಉನ್ಮಾದ, ಮೂರ್ಖತನ.

पागालिनी– स्त्री पगली । ಹುಚ್ಚಿ.

पागुर– पु. जुगाली । ಚರ್ವಣ, ಮೆಲುಕು ಹಾಕುವಿಕೆ.

पागुराना– अक्रि. चर्वण करना । ಮೆಲುಕು ಹಾಕು, ಮೆಲ್ಲು, ಅಗಿ.

पाचक–पु. रसोइया, पचानेवाली ओपधी, पाचन की अग्नि । ಅಡಿಗೆಯವ, ಪಾಚಕ ಔಷಧ, ಪಚನಕ್ರಿಯೆಯ ಅಗ್ನಿ.

पाचन– पु. पचने या पकाने की क्रिया। ಪಚನಕ್ರಿಯೆ, ಕುದಿಸುವಿಕೆ, ಅಡಿಗೆ ಮಾಡುವಿಕೆ.

पाचिका– स्त्री. रसोई करनेवाली । ಅಡಿಗೆಯವಳು.

पाछ– क्रिवि पीछे । ಹಿಂದೆ पु. पिछला भाग । ಹಿಂಭಾಗ. स्त्री हलका घाव, चीरा । ಚಿಕ್ಕ ಗಾಯ, ಕಡಿತ, ಕಚ್ಚು.

पाछना– सक्रि चीरना, टीका लगाना । ಸೀಳು, ಕಚ್ಚು ಹಾಕು, ರಸ ತೆಗೆ.

पाछल, पाछिल– वि पिछला। ಹಿಂದಿನ, ಮೊದಲಿನ, ಪೂರ್ವದ.

पाछा– पु. पिछला भाग । ಹಿಂಭಾಗ.

पाछी, पाछू. पाछे– क्रिवि पीछे । ಹಿಂದೆ, ನಂತರ.

पाज– पु पार्श्व । ಪಾರ್ಶ್ವ, ಪಗ್ಗಲು.

पाजामा– पु सुथना । ಚೊಣ್ಣ, ಇಜಾರು, ಷರಾಯಿ, ಪಾಯಿಜಾಮೆ.

पाजी– वि. दुष्ट । ದುಷ್ಟ, ನೀಚ. पु. प्यादा, रक्षक । ಕಾಲ್ನಡಿಗೆಯ ಸೈನಿಕ, ಕಾಲಾಳು, ರಕ್ಷಕ.

पाज़ेब– पु. पैर का एक गहना । ನೂಪುರ.

पाटंबर– पु रेशमी वस्त्र । ರೇಶ್ಮೆಬಟ್ಟೆ.

पाट– पु. रेशम, वस्त्र, पत्थर, चक्की का पत्थर, पीढ़ा, सिंहासन । ರೇಶ್ಮೆ, ಬಟ್ಟೆ, ಕಲ್ಲು, ಬೀಸುವ ಕಲ್ಲಿನ ಕಲ್ಲು, ಕೂಡ್ರುವ ಮಣೆ, ಸಿಂಹಾಸನ, ಪೀಠ.

पाटन– पु. छत । ಚಪ್ಪರ, ಛಾವಣಿ, ಹೊದಿಕೆ, ಹೊದಿಸುವಿಕೆ.

पाटना–सक्रि छत छाना, गड्ढा भरना। ಚಪ್ಪರ ಹೊದಿಸು, ಛಾವಣಿ ಹೊದಿಸು, ಹೂಳು, ತಗ್ಗು ತುಂಬು, ಸರಿ ಮಾಡು.

पाटला– पु पट्ठा, एक प्रकार का सोना। ಪಟಲ, ತಟ್ಟೆ, ಒಂದು ತರದ ಬಂಗಾರ, ಸುವರ್ಣ.

पाटव– पु. पटुता, आरोग्य। ಸ್ವಾಸ್ಥ್ಯ, ಪ್ರೌಢತೆ, ಆರೋಗ್ಯ.

पाटवी– रेशमी, पटरानी से उत्पन्न । ರೇಶ್ಮೆಯ, ಪಟ್ಟದ ರಾಣಿಯಿಂದ ಹುಟ್ಟಿದ.

पाटा– पु पीढ़ा । ಮಣೆ, ಹಲಿಗೆ,

ಪೀಠ, ಆಸನ

**पाटी**– स्त्री. पंक्ति, रीति, तख्ती, पाठ, चारपाई की पट्टी, बालों की पटियाँ। ಪಂಕ್ತಿ, ರೀತಿ, ಪರಿಪಾಠಿ, ಹಲಗೆ, ಪಾಟಿ, ಪಾಠ, ಮಂಚದ ಪಟ್ಟಿ, ಬೈತ್ತಲೆ.

**—पढना**= शिक्षा पाना। ಓದು ಕಲಿ, ಶಿಕ್ಷಣ ಹೊಂದು.

**पाठ**– पु. सबक, अध्ययन, अध्याय। ಪಾಠ, ಅಭ್ಯಾಸ, ಅಧ್ಯಯನ, ಅಧ್ಯಾಯ, ಪರಿಚ್ಛೇದ.

**—पढाना**= स्वार्थ साधन के लिये किसी को बहकाना। ಸ್ವಾರ್ಥ ಸಾಧನೆಗಾಗಿ ಎರಡನೆಯವರನ್ನು ಪುಸಲಾಯಿಸು, ಅಡ್ಡ ಮಾರ್ಗ ಹಿಡಿಸು, ಕಿವಿ ತುಂಬು.

**पाठक**– पु पढनेवाला, पढानेवाला। ವಾಚಕ, ಓದುವವ, ಓದಿಸುವವ.

**पाठन**– पु अध्यापन। ಕಲಿಸುವದು, ಅಧ್ಯಾಪನ.

**पाठना**– सक्रि. पढ़ाना। ಕಲಿಸು, ಓದಿಸು.

**पाठशाला**– स्त्री. मदरसा। ಶಾಲೆ, ವಿದ್ಯಾಲಯ.

**पाठांतर**– पु. अन्य पाठ। ಅನ್ಯಪಾಠ, ಬೇರೆಪಾಠ.

**पाठा**– पु मोटा ताजा आदमी। ಗಟ್ಟಿ ಮುಟ್ಟ ತರುಣ ಮನುಷ್ಯ. वि पंडित, हृष्टपुष्ट। ಪಂಡಿತ, ಸುಪುಷ್ಟ, ಗಟ್ಟಿಮುಟ್ಟ, ಬಲಿತ, ಕೊಬ್ಬಿದ.

**पाटिका**– स्त्री पढनेवाली। ಕಲಿಯುವವಳು.

**पाठी**– पु पाठ करनेवाला। ಪಾಠಕ, ಓದುವವ, ವಿದ್ಯಾರ್ಥಿ.

**पाठ्य**–वि. पढने योग्य, जो पढाया जाय। ಓದಲು ಯೋಗ್ಯವಾದ, ಓದಿಸಲ್ಪಡುವ.

**पाड**– पु किनारा, बांध, कटघरा, फॉसी का तख्ता, मचान। ಅಂಚು, ದಂಡೆ, ಸೆರಗು, ಗಡಿದುರ್ಗ, ಒಡ್ಡು, ಕಟಾಂಜನ, ಶೂಲಕ್ಕೇರಿಸುವ ಹಲಿಗೆ, ಎತ್ತರವಾದ ಆಸನ.

**पाड़ा**– पु एक मछली, मुहल्ला। ಒಂದು ತರದ ಮೀನ, ಓಣಿ, ಪೇಟೆ.

**पाढ**–पु पीढा, खेत की मचान। ಮಣೆ, ಬಡಿಗರು- ಕಮ್ಮಾರರು- ಅಕ್ಕಸಾಲಿಗರು ಕೂತು ಕೆಲಸ ಮಾಡುವ ಮಣೆ, ಪೀಠ, ಒಕ್ಕಲಿಗರು ಹೊಲ ಕಾಯಲು ಎತ್ತರವಾಗಿ ಕಟ್ಟಿದ ಮಂಚಿಕೆ स्त्री किनारा। ಅಂಚು, ದಂಡೆ.

**पाढत**– पु. पढने की क्रिया या भाव, मंत्र। ಓದುವಿಕೆ, ಮಂತ್ರ

**पाढी**– स्त्री सूत की लच्छी, यात्रियो का पार उतारने की नाव। ದಾರದ ಉಂಡೆ, ಯಾತ್ರಿಕರನ್ನು ದಾಟಿಸುವ ದೋಣಿ.

**पाणि, पाणी**– पु. हाथ। ಕೈ.

**पाणिग्रहण**– पु विवाह। ವಿವಾಹ, ಮದುವೆ.

पात– पु पत्ता, पतन। ಪತ್ರ, ಎಲೆ, ಪತನ, ನಾಶ.

पातक– पु पाप। ಪಾಪ

पातकी– पु पापी। ಪಾಪಿಷ್ಟ.

पातर, पातल– स्त्री पत्तल, वेश्या। ಊಟದೆಲೆ, ವೇಶ್ಯೆ. वि नीच, पतला। ನೀಚ, ಕ್ಷುದ್ರ, ತೆಳುವಾದ.

पातरि, पातरी–स्त्री पत्तल। ಊಟದೆಲೆ.

पातावा, पायतावा– पु पैरोंमें पहननेका मोजा। ಕಾಲು ಚೀಲ.

पाति, पाती– स्त्री पत्ती, चिट्ठी, पातिव्रत्य। ಎಲೆ, ಪತ್ರ, ಪಾತಿವ್ರತ್ಯ पु प्रभु, स्वामी। ಪ್ರಭು, ಒಡೆಯ

पातुर, पातुरनी, पातुरी– स्त्री वेश्या। ವೇಶ್ಯೆ.

पात्र– पु बर्तन, आधार, नट, पत्ता। ಪಾತ್ರೆ, ಆಧಾರ, ಅಧಿಕಾರಿ, ನಟ, ಎಲೆ

पात्रता– स्त्री पात्रत्व– पु योग्यता। ಯೋಗ್ಯತೆ.

पाथ– पु मार्ग, जल, आकाश, सूर्य, वायु। ಮಾರ್ಗ, ನೀರು, ಆಕಾಶ, ಸೂರ್ಯ, ಹವೆ, ವಾಯು.

पाथना– सक्रि थोपना, ठोक पीटकर सुडौल बनाना। ಒಡೆ, ಬಡೆದು ಆಕಾರ ಕೊಡು, ಕುಳ್ಳು ಹಚ್ಚು, ಸಗಣಿ ತಟ್ಟು.

पाथेय– पु रास्तेका कलेवा। ಪ್ರವಾಸದ ಆಹಾರ.

पाथोज– पु कमल। ಕಮಲ

पाथोद, पाथोधर– पु मेघ। ಮೇಘ, ಮೋಡ.

पाद– पु चरण, चौथा भाग, पद्यका चौथा भाग, किरण, अधोवायु। ಚರಣ, ಪಾದ, ನಾಲ್ಕನೆಯಭಾಗ, ಪದ್ಯದ ಒಂದು ಚರಣ, ಹೂಸು, ಅಪಾನ ವಾಯು

पादत्र, पादत्राण– पु जूता। ಕೆರವು, ಮೆಟ್ಟು, ಪಾಪೋಸು

पादना– अक्रि अपानवायु त्याग करना। ಹೂಸು ಬಿಡು.

पादप– पु. पेड। ಗಿಡ.

पादप्रक्षालन– पु पॉव धोना। ಕಾಲು ತೊಳೆದುಕೊಳ್ಳುವದು

पादाति, पादातिक– पु पैदल सिपाही। ಕಾಲ್ನಡಿಗೆಯ ಸೈನಿಕ, ಕಾಲಾಳು.

पादाश– स्त्री परिणाम। ಪರಿಣಾಮ, ಕೊನೆ, ಫಲಿತಾಂಶ.

पाधा–पु पुरोहित, आचार्य, अध्यापक। ಪುರೋಹಿತ, ಆಚಾರ್ಯ, ಉಪಾಧ್ಯಾಯ, ಅಧ್ಯಾಪಕ.

पान– पु. तांबूल, पत्ता, प्राण, पीनेकी क्रिया, पीनेकी वस्तु, पानी, कटोरा, रक्षण। ತಾಂಬೂಲ, ಎಲೆ, ಪ್ರಾಣ, ಕುಡಿತ, ಕುಡಿಯುವ ವಸ್ತು(ಮದ್ಯ ಸರಾಯಿ ಮುಂ), ನೀರು, ಬಟ್ಟಲು, ರಕ್ಷಣೆ.

—पत्ता = छोटीसी भेंट। ಚಿಕ್ಕ ಉಡುಗೊರೆ, ಚಿಕ್ಕ ಕಾಣಿಕೆ.

—फूल = सामान्य भेंट। ಸಾಮಾನ್ಯ

ಕಾಣಿಕೆ.

**—लेना** = प्रतिज्ञा करना । ಪ್ರತಿಜ್ಞೆ ಮಾಡು.

**पानगोष्टी**– स्त्री. शराबियोंका समूह । ಕುಡುಕರ ಸಮೂಹ.

**पानदान**– पु पानडब्बा । ವೀಳೆದೆಲೆ ಪೆಟ್ಟಿಗೆ.

**पानही**– पु. जूता । ಜೋಡು, ಕೆರವು, ಮೆಟ್ಟು, ಪಾವುೋಸು.

**पाना**–सक्रि प्राप्त करना, पास पहुंचना, समझना, भोजन करना, देखना, भोगना । ಪಡೆ, ಹೊಂದು, ದೊರಕಿಸು, ಸಿಗು, ಹತ್ತರ ಹೋಗು, ಸಮೀಪಿಸು, ತಿಳಿ, ಅರಿ, ಊಟ ಮಾಡು, ನೋಡು, ಅನುಭವಿಸು.

**पानागार**– पु जहाँ बहुतसे लोग मिलकर मद्य पीते हैं । ಬಹಳ ಜನರು ಕೂಡಿ ಮದ್ಯ ಕುಡಿಯುವ ಸ್ಥಳ.

**पानि**– पु. पाणि, पानी, चमक । ಕೈ, ನೀರು, ಕಾಂತಿ, ಹೊಳಪು.

**पानिप**–पु. आब, तेज, जल । ಕಾಂತಿ, ತೇಜ, ನೀರು.

**पानिय**– पु पानी । ನೀರು. वि. रक्षणीय । ರಕ್ಷಣೀಯ, ರಕ್ಷಿಸಲು ಯೋಗ್ಯವಾದ.

**पानी**– पु जल, वर्षा, रस, वीर्य, चमक, प्रतिष्ठा, स्वाभिमान, हिम्मत, पाणि । ನೀರು, ಜಲ, ಮಳೆ, ದ್ರವ ಪದಾರ್ಥ, ರಸ, ವೀರ್ಯ, ಕಾಂತಿ, ತೇಜ, ಪ್ರತಿಷ್ಠೆ, ಗೌರವ, ಸ್ವಾಭಿಮಾನ, ಧೈರ್ಯ, ಕೈ.

**—उतारना** = बेइज्जत करना । ಅವಮಾನ ಮಾಡು.

**—के मोल** = बहुत सस्ता । ಬಹಳ ಅಗ್ಗ.

**—पी पीकर कोसना**=लगातार कोसना। ಯಾವಾಗಲೂ ನಿಂದೆ ಮಾಡು, ಶಪಿಸು.

**—लगना**=जलवायुसे स्वास्थ्य बिगडना। ನೀರು ಹತ್ತು, ಹವೆ ನೀರುಗಳ ಪರಿಣಾಮವಾಗಿ ಆರೋಗ್ಯ ಕೆಡು.

**—फेर देना**= पूर्ण रूपसे नष्ट कर देना । ಪೂರ್ಣವಾಗಿ ನಾಶ ಮಾಡು.

**पानीदार**– वि. जिसमे चमक हो, अबरूदार, साहसी । ಕಾಂತಿಯುಕ್ತ, ಪ್ರತಿಷ್ಠಿತ, ಗೌರವವುಳ್ಳ, ಆತ್ಮಾಭಿಮಾನಿ, ಸಾಹಸಿ.

**पानीदेवा**–वि तर्पण या पिंड देनेवाला, वंश या कुलका, पुत्र । ತರ್ಪಣ ಕೊಡುವವ, ವಂಶದವ, ವಂಶಸ್ಥ, ಪುತ್ರ, ಮಗ.

**पानूस**– पु फानूस । ಕವಲೊಡೆದ ಕಾಜಿನ ದೀಪಸ್ತಂಭ.

**पापड, पापर**– पु मूंग आदिके आटेके बनी पतली रोटीके सदृश वस्तु । ಹಪ್ಪಳ.

**—बेलना**= बडे परिश्रमका कार्य करना, दु:खके दिन बिताना । ದಣಿ ಕಾರ್ಯ ಮಾಡು, ಕಷ್ಟದಿಂದ ದಿನ ಕಳೆ

पापा–पु एक कीड़ा, बच्चो का पिता को संबोधित करनेका शब्द । ನುಸಿ, ಅಪ್ಪ, ತಂದೆ

पापी– वि. पापिष्ट, दुष्ट । ಪಾಪಿಷ್ಠ, ದುಷ್ಟ

पापोश– पु. जूता । ಜೋಡು, ಕೆರವು, ಪಾಪೋಸು, ಎಕ್ಕಡ

पाबंद– वि बाध्य, बंधा हुआ, कैद । ಬಾಧ್ಯ, ಕಟ್ಟಲ್ಪಟ್ಟ, ನಿಯಮಿತ, ಪರಾಧೀನ.

पाबंदी– स्त्री बाध्यता, लाचारी, पालन । ಬಂಧನ, ಕಟ್ಟು, ವಿವಶತೆ

पामर–वि नीच, मूर्ख । ನೀಚ, ದುಷ್ಟ, ಮೂರ್ಖ.

पामरी– स्त्री. उपरना । ಹೊದ್ದುಕೊಳ್ಳುವ ರೇಷ್ಮೆ ಬಟ್ಟೆ, ವಲ್ಲಿ.

पामाल– वि बरबाद, पद दलित । ಹಾಳಾದ, ನಾಶವಾದ, ತುಳಿಯಲ್ಪಟ್ಟ.

पांय, पाय– पु पाँव, चरण । ಕಾಲು, ಪಾದ, ಚರಣ

पायंता– पु पायंती–स्त्री. दे 'पाँयता' ।

पायदाज– पु पाव पोंछनेका बिछावन । ಕಾಲು ಒರೆಸುವ ಚಾಪೆ ಅಥವಾ ಬಟ್ಟೆ.

पाय– पु दे 'पाँय' ।

पायक– पु दूत, पैदल सैनिक, मल्ल । ದೂತ, ದಾಸ, ಕಾಲಾಳು, ಜಟ್ಟಿ, ಮಲ್ಲ.

पायखाना– पु दे 'पाखाना' ।

पायजामा– पु दे 'पाजामा' ।

पायज़ेब– पु पाय का एक गहना । ನೂಪುರ, ಕಾಲಂದುಗೆ.

पायगा–पु रकाब । ರಿಕಾಬು, ಕುದುರೆ ಸವಾರನು ಕಾಲಿಟ್ಟುಕೊಳ್ಳುವ ಅರ್ಧಚಂದ್ರಾಕಾರ ಬಳೆ.

पायतख्त– पु. राजधानी । ರಾಜಧಾನಿ.

पायतन– पु. दे 'पैताना' ।

पायताबा– पु दे 'पातावा' ।

पायदार– वि मजबूत, दृढ़ । ಗಟ್ಟಿಯಾದ, ಬಾಳಿಕೆ ಬರುವ, ದೃಢವಾದ, ತಾಳಿಕೆಯ.

पायना– सक्रि हतियारपर सान देना । ಕತ್ತಿಯನ್ನು ಸಾಣೆ ಹಿಡಿ, ಮಸೆ.

पायपोश– पु. जूता । ಕೆರವು, ಎಕ್ಕಡ, ಪಾಪೋಸು, ಮೆಟ್ಟು.

पायमाल– वि पददलित, विनष्ट । ಪದದಲಿತ, ತುಳಿಯಲ್ಪಟ್ಟ, ಹಾಳಾದ, ಧ್ವಂಸವಾದ.

पायमाली–स्त्री दुर्गति, नाश । ದುರ್ಗತಿ, ನಾಶ, ವಿನಾಶ, ಹಾಳು, ಧ್ವಂಸ.

पायरा– पु एक प्रकार का रकाब, एक तरह का कबूतर । ಅಂಜೋಲೆ, ರಿಕಾಬು, ಒಂದು ತರದ ಪಾರಿವಾಳ.

पायल– स्त्री. नूपुर, बांस की सीढी । ನೂಪುರ, ಪೈಂಜಣ, ಕಾಲಂದುಗೆ, ಬಿದಿರಿನ ನಿಚ್ಚಣಿಕೆ.

पायस्ता– पु. पड़ोस । ನೆರೆ, ಅಕ್ಕಪಕ್ಕ.

पाया– पु खंबा, पद, सीढी, खाट व चौकी का आधार । ಕಂಬ, ಸ್ಥಂಭ,

ಸ್ಥಿರವಾಗು, ನೆಡಲ್ಪಡು, ಸ್ಥಾಪಿತವಾಗು.

**रुपमनी**– स्त्री सुंदर स्त्री, रूपवनी। ಸುಂದರ ಸ್ತ್ರೀ.

**रुपया, रुपैया**–पु. चाँदी का एक सिक्का, धन। ರೂಪಾಯಿ, ಹಣ, ಧನ.

**रुपहरा, रुपहला**–वि चाँदी के रंग का, चाँदी के योग से बना हुआ। ಬೆಳ್ಳಿಯ ಬಣ್ಣದ, ಬೆಳ್ಳಿಯಿಂದ ಮಾಡಿದ, ಬೆಳ್ಳಿಯಿಂದ ತಯಾರಿಸಿದ

**रुबाई**– स्त्री एक तरह की कविता। ಒಂದು ತರದ ಹಾಡು, ಕವಿತೆ.

**रुमांचित**–वि रोमांचित। ರೋಮಾಂಚಿತ.

**रुमाल**– पु दे 'रूमाल'।

**रुमाली**– स्त्री एक तरह का लंगोट। ಲಂಗೋಟಿ.

**रुराई**– स्त्री. सुंदरता। ಸೌಂದರ್ಯ.

**रुरुआ, रुरुवा**– पु. एक तरह का उल्लू। ಗೂಗೆ, ಗೂಬೆ.

**रुरुक्षु**– वि. रूखा। ಶುಷ್ಕ, ಒಣಗಿದ, ರುಕ್ಷ.

**रुलना**– अक्रि व्यर्थ मारे मारे फिरना। ವ್ಯರ್ಥವಾಗಿ ತಿರುಗಾಡು.

**रुलाई, रुवाई**– स्त्री. रोने की क्रिया या भाव। ಅಳುವಿಕೆ, ಅಳು, ಶೋಕ.

**रुलाना**– सक्रि. रोने में लगाना, तंग करना। ಅಳುವಂತೆ ಮಾಡು, ಅಳಿಸು, ರೋದಿಸು, ತ್ರಾಸಕೊಡು.

**रुलासा, रुवासा**– वि. रोता हुआ सा। ಅಳುತ್ತಿರುವಂಥ, ಅಳುವಂತೆ ಮುಖಮುದ್ರೆಯುಳ್ಳ.

**रुवा**– पु सेमल के फूल का घूआ। ಬೂರಲ ಹತ್ತಿ, ದೂದಿ ಹತ್ತಿ.

**रुवाब**– पु दे 'रुआब'।

**रुषित**– वि रुष्ट, दुःखी। ಕ್ರೋಧಿತ, ಸಿಟ್ಟಾದ, ದುಃಖಿತ.

**रुष्ट**– वि. दे 'रुषित'।

**रुष्टपुष्ट**– वि मोटाताजा। ಹೃಷ್ಟ-ಪುಷ್ಟ, ಗಟ್ಟಿಮುಟ್ಟ

**रुसना**– अक्रि रूठना। ಸಿಟ್ಟಾಗು, ಕ್ರೋಧಿತನಾಗು, ಕೋಪಗೊಳ್ಳು.

**रुसवा**–वि. निंदित, बदनाम। ನಿಂದಿತ, ಕಲಂಕಿತ, ಅಪಮಾನಿತ.

**रुसवाई**–स्त्री बदनामी, निंदा। ಕಲಂಕ, ಅಪಕೀರ್ತಿ, ನಿಂದೆ, ಅಪಮಾನ.

**रुस्तम**– पु. ईरान का एक वीर, बडा वीर। ಇರಾಣ ದೇಶದ ಒಬ್ಬ ವೀರ, ದೊಡ್ಡ ವೀರ.

**रुहठि**– स्त्री रूठना। ಸಿಟ್ಟು, ಕ್ರೋಧ.

**रुँगटा**– पु. दे 'रोंगटा'।

**रुंदना**–सक्रि. कुचलना। ತುಳಿ,ಮೆಟ್ಟು.

**रुंधना**– सक्रि घेरना, छेकना। ಸುತ್ತು ಹಾಕು, ಬೇಲಿ ಹಾಕು, ಅಡ್ಡ ಮಾಡು, ತಡೆ.

**रू**–पु. मुख, सामना। ಮುಖ,ಎದುರು, ಮುಂಭಾಗ. स्त्री. कारण, सतह, आशा। ಕಾರಣ, ಪಾತಳಿ, ಬುಡ, ತಳ, ಆಶೆ.

**रूई**– स्त्री. कपास के फल के भीतर का

घूआ जिससे कपड़े वनते हैं। ಅರಳೆ, ಹತ್ತಿ.

**रूईदार**– वि. जिसमें रूयी भरी गयी हो। ಅರಳೆ ತುಂಬಿದ.

**रूख, रूखड़ा**– वि. रूक्ष। ಒಣಗಿದ, ಶುಷ್ಕ. पु. पेड़। ಗಿಡ, ಮರ.

**रूखना**– अक्रि दे 'रूठना'।

**रूखा**– वि सूखा, स्नेहहीन, कठोर। ಒಣಗಿದ, ಬತ್ತಿದ, ಸ್ನೇಹಹೀನ, ನೀರಸ, ಕಠೋರ, ಕರ್ಕಶ.

**रूखापन**– पु. दे. 'रुखाई'।

**रूझना**– अक्रि दे 'रुझना'।

**रूठ, रूठनि**– स्त्री. रूठने की क्रिया या भाव। ಸಿಟ್ಟು, ಕೋಪ, ಅಪ್ರಸನ್ನತೆ.

**रूठना**–अक्रि रुष्ट होना, अप्रसन्न होना। ಸಿಟ್ಟಾಗು, ಅಪ್ರಸನ್ನನಾಗು, ಮುನಿ

**रूड, रूडा**– वि श्रेष्ट, उत्तम। ಶ್ರೇಷ್ಠ, ಉತ್ತಮ.

**रूढ़ि**– स्त्री. प्रथा, प्रसिद्धि, वृद्धि, चढ़ने का भाव। ರೀತಿ, ವ್ಯವಹಾರ, ರೂಢಿ, ಪ್ರಸಿದ್ಧಿ, ವೃದ್ಧಿ, ಏರುವಿಕೆ.

**रूदाद**– स्त्री. हालत, ब्यौरा, विवरण। ಸ್ಥಿತಿ, ರೀತಿ, ಸಮಾಚಾರ, ವೃತ್ತಾಂತ, ತಪಶೀಲು, ವಿವರಣೆ.

**रूप**– पु. सुंदरता, आकार, आकृति, चाँदी। ಸೌಂದರ್ಯ, ಆಕಾರ, ಆಕೃತಿ, ಬೆಳ್ಳಿ. वि अनुरूप, रूपवान्। ಅನುರೂಪ, ಸದೃಶ, ಸುಂದರ.

**रूपगर्विता**–स्त्री. वह नायिका जिसे अपने रूप का गर्व हो। ತನ್ನ ಸೌಂದರ್ಯದ ಗರ್ವವುಳ್ಳ ನಾಯಿಕೆ.

**रूपजीविनी**–स्त्री. वेश्या। ವೇಶ್ಯೆ, ಸೂಳೆ.

**रूपवत, रूपव, रूपवान्**– वि. सुंदर। ಸುಂದರ.

**रूपसी**–स्त्री. रूपवती स्त्री। ಸುಂದರ ಸ್ತ್ರೀ.

**रूपा**– स्त्री. चाँदी। ಬೆಳ್ಳಿ.

**रूपी**– वि. समान, सुंदर। ಸಮಾನ, ಸದೃಶ, ಸುಂದರ.

**रूपोश**– वि. गुप्त। ಗುಪ್ತ, ಅಡಗಿದ, ಮುಖ ಮುಚ್ಚಿಕೊಂಡ.

**रूबकार**– पु. सामने उपस्थित करने का भाव, अदालत का आज्ञापत्र। ಮುಂದಿರಿಸುವಿಕೆ, ನ್ಯಾಯಾಲಯದ ಆಜ್ಞೆ, ಅಪ್ಪಣೆ, ಸಮನ್ಸ್.

**रूबकारी**– स्त्री. मुकदमे की पेशी या सुनवायी। ಮೊಕದ್ದಮೆಯನ್ನು ನ್ಯಾಯಾಧೀಶರ ಮುಂದಿಡುವಿಕೆ.

**रू-बरू**–क्रिवि. सामने, सम्मुख। ಎದುರಿಗೆ, ಸಮಕ್ಷಮವಾಗಿ, ಮುಖಾಮುಖಿ, ಸಮ್ಮುಖದಲ್ಲಿ.

**रूम**– पु तुर्की देश। ತುರ್ಕಸ್ತಾನ.

**रूमना**– अक्रि. हिलना, झूमना। ಅಲ್ಲಾಡು, ತೂಗಾಡು, ಜೋಲಾಡು

**रूमाल**– पु. मुँह पोंछने का कपड़ा। ಕೈವಸ್ತ್ರ, ಕರವಸ್ತ್ರ.

**रूमाली**– स्त्री. दे 'रुमाली'।

**रूर**– वि. दग्ध, तप्त। ದಗ್ಧ, ಸುಟ್ಟ, ತಪ್ತವಾದ.

**रूरना**– अक्रि शोर मचाना। ಗದ್ದಲ ಮಾಡು, ಒದರು, ಚೀರಾಡು,

ಕೂಗಾಡು, ಅರಚು.

**रूरा–** वि अच्छा, सुदर । ಒಳ್ಳೆಯ, ಸುಂದರ, ಅಂದವಾದ.

**रूस–** पु. एक देश । ರಶಿಯಾದೇಶ.

**रूसना–** अक्रि दे. 'रूठना'।

**रूसी–** वि. रूस संबंधी, रूस का । ರಶಿಯಾ ದೇಶಸಂಬಂಧದ,ರಶಿಯಾ ದೇಶದ. स्त्री चमड़ेपर छिलके के रूपमें जमा हुआ मैल। (ಚರ್ಮದ) ಹೊಟ್ಟು, ಚುಂಡು.

**रूह–**स्त्री आत्मा, सार । ಆತ್ಮ,ಜೀವ, ಜೀವಾಳ, ಸಾರ, ಸತ್ವ

**रूहना–**अक्रि आरूढ होना, छा जाना । ಏರು, ಹತ್ತು, ಕವಿ. सक्रि घेरना । ಸುತ್ತು.

**रूहानी–** वि. आत्मिक । ಆತ್ಮಿಕ, ಆತ್ಮ ಸಂಬಂಧದ.

**रेंकना–** अक्रि गधे का बोलना। (ಕತ್ತೆ) ಒದರುವದು, ಕತ್ತೆಯಂತೆ ಅರಚು.

**रेंगटा–** पु गधे का बच्चा । ಕತ್ತೆಯ ಮರಿ.

**रेंगना–** अक्रि. पेट के बल चलना, धीरे धीरे चलना । ಹೊಟ್ಟೆಹೊಸೆ,ಅಂಬೆ ಗಾಲಿಕ್ಕು, ಹರಿದಾಡು, ತೆವಳು, ಸಾವಕಾಶವಾಗಿ ನಡೆ.

**रेंगाना–** सक्रि. धीरे धीरे चलाना । ಸಾವಕಾಶವಾಗಿನಡಿಸು,ಅಂಬೆಗಾ- ಲಿಕ್ಕಿಸು, ಹರಿದಾಡಿಸು, ತೆವಳಿಸು.

**रेंट, रेंटा–**पु. नाक का मल। ಸಿಂಬಳ, ಮೂಗಿನಲ್ಲಿಯ ಹೊಲಸು.

**रेंड–** पु एरंड । ಔಡಲಗಿಡ, ಹರಳು- ಗಿಡ.

**रेंडी–** स्त्री. रेंड का बीज । ಔಡಲ ಬೀಜ, ಹರಳುಬೀಜ

**रे–** अव्य अरे। ಎ! ಎಲೋ! ಲೋ!

**रेख–** स्त्री. लकीर, चिह्न, उभरती हुयी मूँछ। ರೇಖೆ, ರೆಗೆ, ಚಿಹ್ನೆ, ಹೊಸ ದಾಗಿ ಒಡೆಯುತ್ತಿರುವ ಮೀಸೆಯ ಚಿಹ್ನೆ, ಚಿಗುರು ಮೀಸೆ.

**रेखना–** सक्रि (रेखा) खींचना, खरोचना । ಗೆರೆ ಎಳೆ, ಚಿಹ್ನೆ ಮಾಡು, ಕೆತ್ತು.

**रेखा–** स्त्री. लकीर । ಗೆರೆ,ರೇಖೆ,ಗೀರು, ಚಿಹ್ನೆ, ಗುರುತು.

**रेखित–** वि अंकित । ಗೆರೆಹಾಕಿದ, ಚಿಹ್ನೆ ಮಾಡಿದ,ಗುರುತು ಹಾಕಿದ.

**रेग–** स्त्री. बालू, धूल । ಉಸುಕು, ಮಳಲು, ಮರಳು, ಧೂಳು.

**रेगिस्तान–** पु. बालू का मैदान। ಉಸು ಕಿನಬೈಲು, ಮರುಭೂಮಿ, ಮಳಲು ಗಾಡು.

**रेचक–**वि. दस्त लानेवाला। ವಿರೇಚಕ, ಭೇದಿಕರ.

**रेचन–** पु. कोष्टशुद्धि, रेचक औषधि । ಹೊಟ್ಟೆ ಜಾಡಿಸುವದು,ಜುಲಾಬು, ಭೇದಿಯ ಔಷಧ,ವಿರೇಚನ,ಭೇದಿ.

**रेचना–** सक्रि. अधोवायु या मल को बाहर निकालना । ಹೂಸುಬಿಡು, ಭೇದಿಯನ್ನುಂಟುಮಾಡು.

**रेज़गारी, रेज़गी–** स्त्री रुपये के छोटे

सिक्के । ಚಿಲ್ಲರೆ ನಾಣ್ಯ, ತುಂಡು, ಚೂರು.

रेज़ा–वि छोटा टुकडा। ಚಿಕ್ಕತುಂಡು, ಚೂರು.

रेत– स्त्री. वालू । ಉಸುಕು, ಮಳಲು. पु वीर्य, पारा, जल । ವೀರ್ಯ, ಪಾರಜ, ನೀರು.

रेतना– सक्रि. रेतीसे घिसना, रगड कर काटना । ಅರದಿಂದ ತಿಕ್ಕು, ತಿಕ್ಕು, ಹೆರೆ.

रेतला– वि. दे. 'रेतीला'।

रेता– स्त्री. वालू । ಉಸುಕು, ಮಳಲು

रेतिया– पु. रेतनेवाला । ಅರದಿಂದ ತಿಕ್ಕುವವ, ಉಜ್ಜುವವ.

रेतियाना– सक्रि दे 'रेतना'।

रेती– स्त्री. रेतने का औजार, नदी या समुद्र के किनारे की वलुई जमीन । ಅರ,ಅರ್ನ, ನದಿ ಅಥವಾ ಸಮುದ್ರ ತೀರದ ಉಸುಕಿನ ಭೂಮಿ,ಮಳಲು ಗಾಡು, ಮಳಲುದಿನ್ನೆ.

रेतीला– वि वालुकामय । ಮಳಲಿನ, ಮಳಲುಳ್ಳ, ಉಸುಕುಳ್ಳ,ಮರಳಿನ

रेनु– पु. धूल, वालू, अत्यंत लघु परिमाण। ಧೂಳು, ಉಸುಕು,ಕಣ, ಅತ್ಯಂತ ಚಿಕ್ಕ ಪರಿಮಾಣ. स्त्री. पृथ्वी । ಪೃಥ್ವಿ.

रेनुका– स्त्री. दे. 'रेनु'।

रेल– स्त्री भीड, रेलगाडी । ದಟ್ಟಣಿ, ಆಧಿಕ್ಯ, ರೇಲುಗಾಡಿ, ಹೊಗೆಬಂಡಿ.

रेलटेल– स्त्री दे. 'रेलपेल'।

रेलना– सक्रि. आगे को ठेलना, खूब खा जाना । ನೂಕು, ತಳ್ಳು,ದಬ್ಬು, ದೂಡು, ತುರುಕು, ಬಹಳ ತಿನ್ನು. अक्रि अधिक होना । ಹೆಚ್ಚಾಗು, ಅಂಚುಮುಟ ತುಂಬು, ಕಿಕ್ಕಿರಿ

रेलठेल, रेलपेल–स्त्री. भीड़, आधिक्य। ದಟ್ಟಣಿ, ಗದ್ದಲ, ನೂಕುನುಗ್ಗಾಟ, ಆಧಿಕ್ಯ.

रेला–पु धक्का, वहाव, वेग, आधिक्य। ನೂಕಾಟ,ನುಗ್ಗಾಟ,ಧಕ್ಕಾಮುಕ್ಕಿ, ಪ್ರವಾಹ, ವೇಗ,ಆಧಿಕ್ಯ,ವಿಪುಲತೆ.

रेवड– पु भेड़ वकरी का झुंड़। ಕುರಿ ಆಡುಗಳ ಗುಂಪು, ಕುರಿ ಹಿಂಡು.

रेवडी– स्त्री एक मिठाई । ಸಕ್ಕರೆ ಎಳ್ಳುಗಳಿಂದ ಮಾಡಿದ ಒಂದು ಮಿಠಾಯಿ.

रेवती– स्त्री एक नक्षत्र, वलदेवजी की स्त्री। ಒಂದು ನಕ್ಷತ್ರ, ಬಲದೇವನ ಹೆಂಡತಿ.

रेवा– स्त्री. नर्मदा नदी, रति, दुर्गा । ನರ್ಮದಾ ನದಿ,ರತಿದೇವಿ,ದುರ್ಗಾ-ದೇವಿ.

रेशम– पु. पाट। ರೇಷ್ಮೆ.

रेशमी– वि. रेशम का । ರೇಷ್ಮೆಯ.

रेशा– पु. महीन सूत, तंतु । ತೆಳುವಾದ ನೂಲು, ಎಳೆ, ತಂತು, ನಾರು.

रेह– स्त्री खारी मिट्टी, राख, रेखा । ಉಪ್ಪು ಮಣ್ಣು, ಸವುಳು ಮಣ್ಣು, ಬೂದಿ, ಗೆರೆ, ರೇಖೆ.

रेहन– पु वंधक । ಅಡವು, ಒತ್ತೆ,

ಈಡು, ಗಿರವಿ.

**रेहननामा**– पु. रेहन लिखी शर्तों का कागज । ಅಡವಿನ ಕರಾರು ಬರೆದ ಕಾಗದ, ಅಡಮಾನ ಪತ್ರ.

**रैंट**– पु. दे. 'रेंट'।

**रैदास**– पु. एक साधु, एक जाति । ಒಬ್ಬ ಸಾಧು, ಮೊಚ್ಚಿಗಾರ, ಚಮ್ಮಾರ, ಸಮಗಾರ.

**रैन; रैनि**–स्त्री. रात। ರಾತ್ರಿ, ಇರುಳು.

**रैयत**–स्त्री. प्रजा । ಪ್ರಜೆ, ರೈತ, ಕೃಷಿಕ.

**रैयाराव**– पु. छोटा राजा । ಚಿಕ್ಕ ಅರಸು, ಸರದಾರ.

**रैल**– स्त्री. समूह । ಸಮೂಹ.

**रोंगटा**– पु. रोआँ । ರೋಮಾಂಚ, ಮುಳ್ಳು, ಕೂದಲು.

**रोंगटी**– स्त्री. बेइमानी । ಅಪ್ರಾಮಾಣಿಕತೆ, ಮೋಸ, ಅನ್ಯಾಯ.

**रोंठा**– पु. कच्चे आम की सुखाई हुयी फाँक । ಮಾವಿನ ಕಾಯಿಯ ಬಾಳಕ.

**रोंव, रोंआँ**– पु. रोम, शरीरपर के छोटे छोटे बाल । ರೋಮ, ದೇಹದ ಮೇಲಿನ ಚಿಕ್ಕ ಕೂದಲು.

**रोआब**– पु दे. 'रोव'।

**रोक**–स्त्री. बाधा, मनाही। ಬಾಧೆ, ಅಡ್ಡಿ, ನಿಷೇಧ, ವಿರೋಧ, ತಡೆ.

**रोकटोक**– स्त्री. बाधा, निषेध । ಬಾಧೆ, ಅಡ್ಡಿ, ನಿಷೇಧ, ಪ್ರತಿಬಂಧ.

**रोकड़**– स्त्री. नकदी । ನಗದು, ಹಣ, ಧನ, ರೊಕ್ಕ.

**रोकड़िया**– पु. खजानची । ನಗದಿ ಗುಮಾಸ್ತ, ಸರಾಫ, ಖಜಾನದಾರ.

**रोकना**– अक्रि. ठहराना, बाधा डालना, वशमें लाना, स्थगित करना, बंद करना, मनाही करना। ನಿಲ್ಲಿಸು, ಅಡ್ಡಿ ಮಾಡು, ವಶದಲ್ಲಿ ತೆಗೆದುಕೋ, ಸ್ಥಗಿತ ಮಾಡು, ಗತಿ ಕಡಿಮೆ ಮಾಡು, ನಿಷೇಧಿಸು, ನಿರೋಧಿಸು.

**रोग**– पु. बीमारी, झंझट । ರೋಗ, ಜಡ್ಡು, ಅಸ್ವಸ್ಥತೆ, ವ್ಯಾಧಿ, ತೊಡಕು, ಗೊಂದಲ.

**रोगग्रस्त**– वि. व्याधि-पीड़ित। ರೋಗ ಪೀಡಿತ, ಅಸ್ವಸ್ಥ.

**रोगदई, रोगदैया**– स्त्री बेइमानी । ಅನ್ಯಾಯ, ಅಪ್ರಾಮಾಣಿಕತೆ, ತಗಲು, ಮೋಸ.

**रोग़न**– पु. पालिश। ಮಿರುಗೆಣ್ಣೆ, ಗಚ್ಚಿ ಎಣ್ಣೆ, ಪಾಲಿಶ್, ವಾರ್ನಿಶ್.

**रोगिया, रोगिहा, रोगी**– पु बीमार आदमी। ರೋಗಿ, ಅಸ್ವಸ್ಥ ಮನುಷ್ಯ, ವ್ಯಾಧಿಸ್ಥ, ಕಾಯಿಲೆಯವ.

**रोचक**– वि. मनोरंजक, रुचिकारक । ಮನೋರಂಜಕ, ರುಚಿಸುವ, ಒಳ್ಳೆಯ, ಸ್ವಾದಿಷ್ಟ.

**रोचकता**– स्त्री. मनोहरता । ಸ್ವಾರಸ್ಯ, ಮನೋಹರತೆ.

**रोचन**– पु रोली, प्याज। ಶ್ರೀಚೂರ್ಣ, ರಂಜಕ, ಈರುಳ್ಳಿ, ಉಳ್ಳೇಗಡ್ಡೆ. वि. रुचनेवाला, शोभा देनेवाला, प्रिय लगनेवाला। ರುಚಿಸುವ, ಮನೋ-

ರಂಜಕ, ಪ್ರಿಯಕರ.

**रोचना**– स्त्री. श्रेष्ठ स्त्री, आकाश. गोरोचन, रक्त कमल । ಶ್ರೇಷ್ಠ ಸ್ತ್ರೀ; ಆಕಾಶ, ಗೋರೋಚನ, ಹಳದಿ ಬಣ್ಣದ ಒಂದು ಸುಗಂಧಿತ ಪದಾರ್ಥ, ಕೆಂಪು ಕಮಲ.

**रोचि**– स्त्री. शोभा, किरण । ಶೋಭೆ, ಕಾಂತಿ, ಕಿರಣ.

**रोज़**–पु. दिन । ದಿನ अव्य. प्रतिदिन । ಪ್ರತಿದಿನ.

**रोज**– पु रोना । ಅಳುವಿಕೆ, ವಿಲಾಪ.

**रोज़गार**– पु. व्यवसाय, व्यापार । ಉದ್ಯೋಗ, ವ್ಯವಸಾಯ, ವೃತ್ತಿ, ಕಸಬು, ವ್ಯವಹಾರ, ವ್ಯಾಪಾರ.

**रोज़गारी**– स्त्री. व्यवसायी, व्यापारी । ಉದ್ಯೋಗಿ, ವ್ಯಾಪಾರಸ್ಥ.

**रोज़नामचा**– पु. दिनचर्या लिखने की वही । ಡಾಯರಿ, ದಿನಂಪ್ರತಿಯ ಲೆಕ್ಕದ ಪುಸ್ತಕ, ದಿನವಹಿ.

**रोज़मर्रा**– अव्य. प्रतिदिन । ಪ್ರತಿದಿನ, ನಿತ್ಯ. पु बोलचाल । ಸಾಮಾನ್ಯ ಭಾಷೆ, ಬಳಕೆಯ ಭಾಷೆ, ವ್ಯವಹಾರದ ಭಾಷೆ.

**रोजा**– पु उपवास । ಮುಸಲ್ಮಾನರ ಒಂದು ವ್ರತ, ಉಪವಾಸ.

**रोज़ाना**–क्रिवि हर रोज़ । ದಿನಂಪ್ರತಿ, ಯಾವಾಗಲೂ. वि. प्रतिदिन का । ದಿನಂಪ್ರತಿಯ.

**रोज़ी**–स्त्री जीविका, नित्य का भोजन । ಜೀವನ ನಿರ್ವಾಹದ ಸಾಧನೆ, ಉದ್ಯೋಗ, ವೃತ್ತಿ, ಕಸಬು, ನಿತ್ಯದ ಆಹಾರ.

**रोज़ीना**– पु दैनिक मज़दूरी । ದಿನದ ಕೂಲಿ, ದಿನದ ಗಳಿಕೆ.

**रोझ**– पु नीलगाय । ಬಿಳಿಯ ಎರಳೆ.

**रोट**–पु मोटी रोटी, साना हुआ आटा । ಗೋದಿಯ ದಪ್ಪ ರೊಟ್ಟಿ, ನಾದಿದ ಕಣಕ.

**रोटा**–पु पिसा हुआ । ಅರೆದ, ಬೀಸಿದ, ಹಿಟ್ಟಾದ.

**रोटिहा**–पु. वह सेवक जो केवल भोजन-पर काम करता है । ಊಟಕ್ಕೆ ಕೆಲಸ ಮಾಡುವ ಆಳು.

**रोटी**– स्त्री. चपाती, जीविका । ರೊಟ್ಟಿ, ಚಪಾತಿ, ಜೀವನ ನಿರ್ವಾಹದ ಸಾಧನ.

**रोटीकपडा**= भोजन और वस्त्र । ಅನ್ನ-ವಸ್ತ್ರ.

**रोटी तोडना** = मुफ्त का खाना, घर पड़े पड़े रहना । ಪುಕ್ಕಟೆಯ ಆಹಾರ ತಿಂದಿರು, ನಿರುದ್ಯೋಗಿಯಾಗಿರು, ಕೂತು ತಿನ್ನು.

**रोडा**– पु कंकड । ಹರಳು, ಕಲ್ಲಿನ ಚೂರು, ಇಟ್ಟಿಗೆಯ ಚೂರು.

**—अटकाना** = बाधा डालना । ಅಡ್ಡಿ ಮಾಡು, ತೊಡಕು ಹಾಕು, ವಿಘ್ನತರು.

**रोदन**– पु. रोना । ಅಳುವಿಕೆ, ವಿಲಾಪ.

**रोदसी**– स्त्री. पृथिवी, स्वर्ग । ಪೃಥ್ವಿ, ಸ್ವರ್ಗ.

**रोदा**– पु चिल्ला। ಹೆದೆ, ಬಿಲ್ಲಿನದಾರ.

**रोध, रोधन**– पु रुकावट, दमन। ಅಡ್ಡಿ, ತಡೆ, ದಮನ.

**रोधना**– सक्रि रोकना, दबाना। ತಡೆ, ಅಡ್ಡಿ ಮಾಡು, ಒತ್ತಿಡು, ಅಡಗಿಸು, ದಮನ ಮಾಡು.

**रोधित**– वि रोका हुआ। ಅಡ್ಡಿ ಮಾಡಿದ, ತಡೆ ಹಿಡಿದ.

**रोना**– अक्रि. रोदन करना, पछताना। ಅಳು, ಕಣ್ಣೀರು ಸುರಿಸು, ಪಶ್ಚಾತ್ತಾಪ ಪಡು. पु दुख। ದುಃಖ. वि. रोनेवाला। ಅಳುತ್ತಿರುವ, ದುಃಖ ಪಡುವ.

**रोना-धोना, रोना पीटना** = अतिविलाप करना। ಗೋಳಾಡು, ಬಹಳ ಅಳು, ಎದೆ ಬಡೆದ-ಕೊಂಡು ಅಳು.

**रोनी-धोनी**– स्त्री रोनेवाली। ಅಳುವವಳು, ಶೋಕಿಸುತ್ತಿರುವವಳು. स्त्री शोक। ಶೋಕ, ದುಃಖ, ಪ್ರಳಾಪ.

**रोपक**– पु. स्थापित करनेवाला। ಸ್ಥಾಪಿಸುವವ, ನೆಡುವವ

**रोपण**– पु रोपने की क्रिया। ಸ್ಥಾಪನೆ, ನೆಡುವಿಕೆ, ಬಿತ್ತುವಿಕೆ.

**रोपना**– सक्रि. लगाना, बोना, स्थापित कराना, रोकना। ಹಚ್ಚು, ನೆಡು, ಬೀಜ ಬಿತ್ತು, ಸ್ಥಾಪಿಸು, ಅಡ್ಡಿ ಮಾಡು.

**रोपनी, रोपाई**– स्त्री. धान आदि पौधे रोपने का काम। ನಾಟಿಹಾಕುವಿಕೆ, ಸಸಿ ಹಾಕುವಿಕೆ.

**रोपित**– वि स्थापित। ಸ್ಥಾಪಿತ, ನೆಟ್ಟ, ಹಚ್ಚಿದ.

**रोब**–धाक, आतंक। ಪ್ರಭಾವ, ಆಢ್ಯತೆ, ವರ್ಚಸ್ಸು, ಅಂಜಿಕೆ.

**रोबदार**– वि. प्रभावशाली। ಪ್ರಭಾವವುಳ್ಳ, ಆಢ್ಯತೆಯ, ಪ್ರತಾಪಿ.

**रोम**– पु रोआँ, छिद्र, जल, ऊन। ದೇಹದ ಮೇಲಿನ ಕೂದಲು, ಛಿದ್ರ, ನೀರು, ಉಣ್ಣೆ.

**रोमपाट**– पु ऊनी कपडा। ಉಣ್ಣೆಯ ಅರಿವೆ.

**रोमांचित**–वि पुलकित। ರೋಮಾಂಚಿತ, ಪುಲಕಿತ.

**रोयाँ**– पु. दे. 'रोम'।

**रोर**– स्त्री कोलाहल, गरीबी, विपत्ति। ಕೋಲಾಹಲ, ಗದ್ದಲ, ಒದರಾಟ, ಬಡತನ, ವಿಪತ್ತು. वि प्रबल, दुष्ट। ಪ್ರಬಲ, ವೇಗದ, ದುಷ್ಟ.

**रोरी**– स्त्री. चहलपहल, दौड़धूप, रोली। ಕೋಲಾಹಲ, ಗದ್ದಲ, ಗಲಭೆ, ಓಡಾಟ, ಶ್ರೀಚೂರ್ಣ. वि. अच्छा, सुंदर। ಒಳ್ಳೆಯ, ಸುಂದರ.

**रोल**– स्त्री कोलाहल। ಕೋಲಾಹಲ, ಗದ್ದಲ, ಅಬ್ಬರ. पु. प्रवाह। ಪ್ರವಾಹ, ಸೆಳವು.

**रोली**–स्त्री. एक लाल रंग। ಶ್ರೀಚೂರ್ಣ, ರಂಜಕ.

**रोवनहार, रोवनिहार**– वि. रोनेवाला। ಅಳುವವ, ಶೋಕಿಸುವವ.

**रोवांसा**– वि. रोने ही वाला। ಅಳು

ಸಮೀಪಿಸಿದ, ಅಳಲು ಸಿದ್ಧನಾದ, ಅಳು ಮೋರೆಯ, ಅಳುಬುರುಕ.

रोशन–वि प्रकाशित, जाहिर। ಪ್ರಕಾಶಿತ, ಪ್ರಜ್ವಲಿತ, ಪ್ರಕಟ, ಪ್ರಸಿದ್ಧ.

रोशनदान– पु गवाक्ष । ಬೆಳಕಿಂಡಿ, ಗವಾಕ್ಷಿ.

रोशनाई–स्त्री. रोशनी, स्याही। ಬೆಳಕು, ಪ್ರಕಾಶ, ಮಸಿ, ಶಾಯಿ.

रोशनी– स्त्री. प्रकाश, उजेला, ज्ञान । ಪ್ರಕಾಶ, ಬೆಳಕು, ಜ್ಞಾನ.

रोष– पु क्रोध, द्वेष। ಸಿಟ್ಟು, ಕ್ರೋಧ, ರೋಷ, ದ್ವೇಷ.

रोषी–वि. क्रोधी। ಕ್ರೋಧಿತ, ಸಿಟ್ಟಾದ, ಸಿಡುಕು ಸ್ವಭಾವದ.

रोस– पु दे 'रोष'।

रोहण– पु चढ़ाई, अंकुरित होना । ಆರೋಹಣ, ಏರುವಿಕೆ, ಹತ್ತುವಿಕೆ, ಮೇಲೆ ಏಳುವಿಕೆ, ಚಿಗುರುವಿಕೆ.

रोहना– अक्रि चढना। ಏರು, ಹತ್ತು. सक्रि चढाना। ಎತ್ತು, ಹತ್ತಿಸು.

रोहिणी– स्त्री. बलदेव की माता, गाय, बिजली, एक नक्षत्र । ಬಲದೇವನ ತಾಯಿ, ಆಕಳು, ವಿದ್ಯುತ್ತು, ಮಿಂಚು, ಒಂದು ನಕ್ಷತ್ರ.

रोहित– वि लाल। ಕೆಂಪು.

रोहिताश्व– पु. अग्नि, हरिश्चंद्र का पुत्र। ಅಗ್ನಿ, ಹರಿಶ್ಚಂದ್ರನ ಮಗ.

रोही– पु चढनेवाला । ಏರುವವ, ಹತ್ತುವವ. पु. एक अस्त्र, पीपल का पेड़। ಒಂದು ಅಸ್ತ್ರ, ಅರಳೆಯ ಗಿಡ.

रौंद, रौंदन– पु. रौंदने या मर्दन करने की क्रिया। ತುಳಿಸುವಿಕೆ, ಮರ್ದನ, ಮೆಟ್ಟುವಿಕೆ.

रौंदना– सक्रि. पैरो से कुचलना, खूब पीटना। ತುಳಿ, ಬಹಳ ಬಡಿ, ಮೆಟ್ಟು.

रौंदवाना–सक्रि. कुचलवाना । ತುಳಿಸು, ಮೆಟ್ಟಿಸು.

रौ– स्त्री. प्रवाह, वेग, चाल, धुन । ಪ್ರವಾಹ, ಸೆಳೆತ, ಹೊಯಿಲು, ವೇಗ, ಚಲನೆ, ಉತ್ಸಾಹ, ಹುಮ್ಮಸ್ಸು, ಹುಚ್ಚು. पु आवाज। ಧ್ವನಿ.

रौज़न– पु झरोखा। ಬೆಳಕಿಂಡಿ.

रौज़ा– पु समाधि, बाग । ಸಮಾಧಿ, ತೋಟ, ಉದ್ಯಾನ.

रौताइन-- स्त्री. रावत की स्त्री । ಸರದಾರನ ಹೆಂಡತಿ, ಅರಸಿ.

रौताई– स्त्री. स्वामित्व । ಸ್ವಾಮಿತ್ವ, ಅರಸುತನ.

रौद्र– वि. भयानक, क्रोधपूर्ण। ಭಯಾನಕ, ಉಗ್ರ, ಭಯಂಕರ.

रौनक– स्त्री. शोभा, कांति, चहलपहल। ಶೋಭೆ, ಕಾಂತಿ, ಸೌಂದರ್ಯ, ಸಡಗರ.

रौप्य– वि चांदीका। ಬೆಳ್ಳಿಯ. पु चॉदी। ಬೆಳ್ಳಿ.

रौर– पु. दे. 'रोर'।

रौरव–पु. एक नरक का नाम। ಒಂದು ನರಕದ ಹೆಸರು. वि. घोर, भयंकर, चंचल, धूर्त। ಘೋರ, ಭಯಂಕರ,

ಭೀಷಣ, ಚಂಚಲ, ಧೂರ್ತ.

रौरा–सर्व आपका। ತವ್ಮ, दे. 'रोरा'।

रौराना– अक्रि शोर करना । ಗದ್ದಲ ಮಾಡು, ಒದರಾಡು, ಬಡಬಡಿಸು, ಹರಟು.

रौरे– सर्व आप। ತಾವು.

रौला– पु. शोरगुल। ಗದ್ದಲ, ಕೋಲಾಹಲ.

रौशन– वि दे 'रोशन'।

रौस– स्त्री. चालढाल । ರೀತಿ, ನೀತಿ, ನಡತೆ, ಪದ್ಧತಿ.

रौहाल– स्त्री. घोडे की एक जाति, घोडे की एक चाल। ಕುದುರೆಯ ಒಂದು ಜಾತಿ, ಕುದುರೆಯ ಒಂದು ನಡಿಗೆ.

# ल

लंक– स्त्री. लंका, कमर । ಲಂಕಾ, ಸೊಂಟ, ನಡವು, ಕಟಿ.

लंकलाट–पु एक तरह का मोटा कपडा। ಒಂದು ತರದ ದಪ್ಪ ಅರಿವೆ.

लंका– स्त्री भारत के दक्षिण में एक द्वीप। ಲಂಕಾ, ಸಿಂಹಲದ್ವೀಪ.

लक्रूर– पु दे 'लंगूर'।

लग– वि लॅगड़ा। ಕುಂಟ. पु. लंगड़ापन, काछ। ಕುಂಟತನ, ಕಚ್ಚೆ.

लगड़–पु. लंगर। ಲಂಗರು. वि पंगु। ಕುಂಟ.

लॅगड़ा– वि. जिसका एक पैर टूटा या बेकार हो। ಕುಂಟ.

लॅगडाना– अक्रि लंगडाकर चलना। ಕುಂಟು, ಕುಂಟುತ್ತ ನಡೆ.

लंगर– पु. एक बहुत भारी लोहे का काँटा जिससे पानी में बड़ी नाव, जहाज आदि रुकते हैं, लटकती हुयी कोई भारी चीज, लोहे की वजनी जंजीर, गरीबों को बाँटा जानेवाला भोजन, मल्ल की लंगोट। ಲಂಗರು, ಹಗ್ಗ ಅಥವಾ ತಾರಿನಿಂದ ಕಟ್ಟಲ್ಪಟ್ಟು ಜೋತಾಡುವ ಭಾರವಾದ ವಸ್ತು, ಗುದ್ದೆ, ಕಬ್ಬಿಣದ ಭಾರವಾದ ಸರಪಳಿ, ಬಡವರಿಗೆ ನೀಡುವ ಆಹಾರ, ಜಟ್ಟಿಯ ಚಡ್ಡಿ. वि अधिक भारका, ढीठ। ಬಹಳ ಭಾರವಾದ, ದಿಟ್ಟ, ತುಂಟ, ಉದ್ಧಟ.

लॅगरई, लंगराई, लेगरी–स्त्री. शरारत। ದುಷ್ಟತನ, ತುಂಟತನ.

लंगरखाना– पु. सत्र। ಧರ್ಮಸತ್ರ, ಅನ್ನಛತ್ರ.

लंगूर– पु. दुम, वंदर। ಬಾಲ, ಮಂಗ, ಕೋತಿ.

लंगूरफल– पु नारियल । ತೆಂಗಿನ ಕಾಯಿ.

लंगूल– पु. दुम । ಬಾಲ, ಪುಚ್ಛ.

लंगोट, लंगोटा– पु एक विशेष प्रकार का सिला हुआ कपड़ा जिसे व्यायाम करते समय कमर में कसते हैं। ಚಡ್ಡಿ, ಲಂಗೋಟಿ.

लंगोटी– स्त्री कौपीन । ಕೌಪೀನ, ಲಂಗೋಟಿ.

लंघन– पु. लाँघने की क्रिया, उपवास । ದಾಟುವಿಕೆ, ಹಾರುವಿಕೆ, ಉಪವಾಸ, ಲಂಘನ.

लंघना–सक्रि लाँघना। ದಾಟು,ಮೀರು, ಉಲ್ಲಂಘಿಸು, ಅತಿಕ್ರಮಿಸು.

लंज– पु दुम । ಬಾಲ.

लंठ– वि उजड्ड । ಮೂರ್ಖ, ದಡ್ಡ.

लंडूरा– वि. विना पूँछ का । ರೆಕ್ಕೆಗಳಿಲ್ಲದ, ರೆಕ್ಕೆ ಕತ್ತರಿಸಿಹೋದ.

लंतरानी– स्त्री. डींग । ಬಡಾಯಿ,ಆತ್ಮಸ್ತುತಿ, ಬುರುಡೆ.

लंप-- पु. चिराग । ದೀಪ, ಲ್ಯಾಂಪು.

लंपट– वि कामी, छली । ಲಂಪಟ, ವ್ಯಭಿಚಾರಿ, ಮೋಸಗಾರ,ಪಟಿಂಗ.

लंब– पु समकोण बनानेवाली लंबी रेखा । ಲಂಬ. पु लंबा । ಉದ್ದ. ಎತ್ತರವಾದ.

लंबतड़ंग– वि. अधिक लंबा । ಬಹಳ ಉದ್ದ ಅಥವಾ ಎತ್ತರವಾದ.

लंबन– पु. सहारा । ಆಧಾರ.

लंबा– वि. ऊँचा, दीर्घ, बड़ा । ಎತ್ತರವಾದ,ಉದ್ದವಾದ, ನೀಳ, ದೊಡ್ಡ.

लंबाई– स्त्री. लंबापन । ಉದ್ದಳತೆ, ಎತ್ತರ, ನೀಳ.

लंबान– पु. दे. 'लंबाई'।

लंबी– वि. स्त्री. 'लंबा' का स्त्री रूप।
—तानना=लेटकर सो जाना। ಮಲಗಿ ನಿದ್ರೆ ಹೋಗು.

लंबोतरा– वि लंबे आकार का । ಉದ್ದವಾದ, ನೀಳವಾದ.

लंबोदर–पु. गणेश । ಗಣೇಶ, ಗಣಪತಿ.

लकटी– स्त्री दे. 'लकुटी'।

लकड़बग्घा– पु एक जंगली जानवर । ಕತ್ತೆಕಿರುಬ.

लकड़हारा– पु जो लकड़ी द्वारा अपनी जीविका चलाता हो । ಕಟ್ಟಿಗೆ ಮಾರಿ ಜೀವಿಸುವವ,ಕಟ್ಟಿಗೆ ಕಡಿಯುವವ

लक्कड़ा– पु. लकड़ी का मोटा कुंदा । ಕಟ್ಟಿಗೆಯ ದೊಡ್ಡ ತುಂಡು,ಕೊಳೆ, ಕೊರಡು, ದಿಮ್ಮಿ.

लकड़ी– स्त्री काष्ठ, ईंधन, लाठी । ಕಟ್ಟಿಗೆ, ಉರುವಲು, ಮರದ ತುಂಡು, ಕೋಲು.

लक़ब– पु उपाधि । ಪದವಿ,ಬಿರುದು, ಅಭಿದಾನ.

लक़लक़– पु सारस पक्षी । ಸಾರಸ ಪಕ್ಷಿ, ಕೊಕ್ಕರೆ. वि. बहुत दुबला पतला, क्षीण । ಬಡಕಲಾದ, ಅಶಕ್ತ, ಸಣಕಲಾದ, ಕ್ಷೀಣ.

लक़्वा– पु. एक वातरोग । ಅರ್ಧಾಂಗ ವಾಯು, ಪಕ್ಷವಾತ,ಪಾರ್ಶ್ವವಾತ.

लकसी– स्त्री फल आदि तोडने की लागी। ಕೊಕ್ಕೆಗೋಲು, ದೋಟಿ-ಗೋಲು.

लकीर–स्त्री. रेखा, पंक्ति। ಗೆರೆ,ರೇಖೆ, ಸಾಲು, ಪಂಕ್ತಿ.

—का फकीर = पुराने ढंगपर चलने-वाला। ಹಳೆಯ ಪದ್ಧತಿಯಂತೆ ನಡೆಯುವವ, ಅಂಧಾನುಕರಣ ಮಾ-ಡುವವ.

—पीटना = पुरानी प्रथा पर चलना। ಹಳೆಯ ಪದ್ಧತಿಯಂತೆ ವರ್ತಿಸು, ಅಂಧಾನುಕರಣ ಮಾಡು.

लकुच– पु बडहर। ಒಂದು ಕಾಡು ಜಾತಿಯ ಹಣ್ಣು.

लकुट, लकुटी– स्त्री. छड़ी, लाठी। ಬೆತ್ತ, ಕೋಲು, ಡೊಣ್ಣೆ,ಸೋಟಾ.

लक्कड़– पु दे 'लकडा'।

लक्का– पु. एक तरह का कबूतर। ಒಂದು ತರದ ಪಾರಿವಾಳ.

लक्खी– वि लाख के रंगका। ಅರಗಿನ ಬಣ್ಣದ. पु लखपती, एक तरह का घोडा। ಲಕ್ಷಾಧೀಶ, ಒಂದು ತರದ ಕುದುರೆ.

लक्ष– पु. उद्देश, निशाना। ಉದ್ದೇಶ, ಗುರಿ. वि. लाख। ಲಕ್ಷ.

लक्षण– पु. आसार, चिह्न, परिणाम। ಲಕ್ಷಣ, ಚಿಹ್ನೆ, ಪರಿಣಾಮ.

लक्ष्मी– स्त्री. विष्णुपत्नि, शोभा, संपत्ति, गृहिणी। ಲಕ್ಷ್ಮಿ, ವಿಷ್ಣು ಪತ್ನಿ, ಶೋಭೆ, ಧನ, ಸಂಪತ್ತು,ಗೃಹಿಣಿ.

लक्ष्मीपुत्र– पु धनी। ಶ್ರೀಮಂತ.

लक्ष्य– पु उद्देश, निशाना। ಉದ್ದೇಶ, ಗುರಿ.

लखन– पु. लक्ष्मण। ಲಕ್ಷ್ಮಣ. स्त्री लखने की क्रिया। ನೋಡುವಿಕೆ, ತಿಳಿಯುವಿಕೆ.

लखना–सक्रि देखना, ताड़ना। ನೋ-ಡು, ತಿಳಿ, ಊಹಿಸು, ಅರಿ.

लखपती– पु. लाख रुपयावाला। ಲಕ್ಷಾಧೀಶ.

लखलखा– पु मूर्छा दूर करनेवाली एक सुगंधित वस्तु। ಮೂರ್ಛೆಯನ್ನು ಹೋಗಲಾಡಿಸುವ ಒಂದು ಸುಗಂ-ಧಿತ ಪದಾರ್ಥ.

लखलुट–वि अपव्ययी। ದುಂದುಗಾರ, ಅಪವ್ಯಯ ಮಾಡುವವ.

लखाउ, लखाव– पु लक्षण, चिह्न। ಲಕ್ಷಣ, ಚಿಹ್ನೆ, ಗುರುತು.

लखाना-अक्रि दिखाई पड़ना। ಕಾಣು, ತೋರು, ದೃಷ್ಟಿಗೋಚರವಾಗು. सक्रि. दिखलाना। ತೋರಿಸು, ತಿಳಿಸು.

लखिमी– स्त्री दे 'लक्ष्मी'।

लखिया– पु. लखनेवाला। ನೋಡು-ವವ, ದರ್ಶಕ, ಲಕ್ಷಿಸುವವ.

लखी– पु. लाख के रंग का घोड़ा। ಅರಗಿನ ಬಣ್ಣದ ಕುದುರೆ.

लखेरा– पु चूड़ियाँ बनानेवाला। ಬಳೆ ತಯಾರಿಸುವವ.

लखौट– स्त्री. लाख की चूड़ी। ಅರಗಿನ

ಬಳೆ.

**लखौटा–** पु. लेख, लिखावट, एक सुगंधित लेप, सिंधूर रखने की डब्बी। ಲೇಖ, ಬರೆವಣಿಗೆ, ಗಂಧದ ಅಂಗಲೇಪ, ಅಂಗರಾಗ, ಕುಂಕುಮದ ಡಬ್ಬಿ. स्त्री लाख की चूडी। ಅರಗಿನ ಬಳೆ.

**लखौरी–** स्त्री. एक प्रकार की पतली ईंट, भ्रमरी का घर, किसी देवता को लाख पत्तियाँ या फल चढ़ाना। ಒಂದು ತರದ ಚಿಕ್ಕ ಇಟ್ಟಂಗಿ, ಇಟ್ಟಿಗೆ, ಭ್ರಮರದ ಮನೆ, ಲಕ್ಷಾರ್ಚನೆ,ದೇವರಿಗೆ ಲಕ್ಷ ಎಲೆ ಅಥವಾ ಹಣ್ಣುಗಳನ್ನು ಏರಿಸುವಿಕೆ.

**लग–** स्त्री लगन, प्रेम, पतली छडी। ಪ್ರೇಮ, ಆಸಕ್ತಿ, ತೆಳುವಾದ ಕೋಲು. क्रिवि पास, पर्यंत, तक। ಹತ್ತಿರ, ಸಮೀಪದಲ್ಲಿ, ವರೆಗೆ, ತನಕ. अव्य. लिये, साथ, संग। ಓಸ್ಕರ, ಸಲುವಾಗಿ, ಸಂಗಡ, ಜೊತೆಯಲ್ಲಿ.

**लगढग–** क्रिवि. दे ‘ लगभग ’।

**लगन, लगनि–** स्त्री लगाव, प्रेम, संबंध, धुन। ಸಂಬಂಧ,ಸೇರಿಕೆ,ಹೊಂದಿಕೆ, ಅಕ್ಕರೆ, ಮೋಹ, ಪ್ರೀತಿ, ಪ್ರೇಮ, ಹುಚ್ಚು. पु शुभ मुहूर्त। ಶುಭ ಮುಹೂರ್ತ.

**लगनपत्री–** स्त्री. विवाह की तिथिपत्री। ಲಗ್ನಪತ್ರಿಕೆ, ಲಗ್ನದ ಕರೆಯೋಲೆ.

**लगनवट–** स्त्री प्रेम, लगन। ಪ್ರೀತಿ, ಆಸಕ್ತಿ.

**लगना–** अकि जुड़ना, मिलना, प्रवृत्त होना, व्यय होना, चढ़ाया जाना, असर होना, चिह्नित होना, प्रतीत होना, जान पड़ना, पीडा उत्पन्न करना, उगना, स्थापित होना, साथ होना, निश्चित स्थानपर पहुंचना, टकराना, जलन उत्पन्न करना। ಕೂಡು, ಒಂದೆಡೆ ಸೇರು, ಮಿಳಿತವಾಗು, ಸಿಗು, ಕೂಡು, ಹೊಂದಿಕೊಳ್ಳು, ಪ್ರವೃತ್ತನಾಗು, ಸೇರು, ಖರ್ಚಾಗು, ಖರ್ಚು ಹಿಡಿ, ಏರಿಸಲ್ಪಡು, ಪ್ರಭಾವವಾಗು, ಕಲೆ ಬೀಳು,ಚಿಹ್ನೆ ಆಗು, ತಿಳಿ,ಗೊತ್ತಾಗು, ಅರಿ, ಪೀಡೆಯಾಗು, ತ್ರಾಸವಾಗು, ನಾಟು, ಸ್ಥಾಪಿತವಾಗು, ಸಂಗಡ ಇರು, ಬೆನ್ನು ಹತ್ತು, ನಿಶ್ಚಿತ ಸ್ಥಳವನ್ನು ಮುಟ್ಟು, ಗುರಿ ಮುಟ್ಟು, ತಲುಪು, ತಾಗು, ಡಿಕ್ಕಿ ಹೊಡೆ, ಉರಿ, ನೋವಾಗು.

**लगनि–** स्त्री. दे ‘ लगन ’।

**लगनी–** स्त्री. छोटी थाली। ಚಿಕ್ಕ ತಾಟು, ತಟ್ಟೆ.

**लगभग–** क्रिवि. अंदाज़न, करीब। ಸುಮಾರು, ಅಜಮಾಸು, ಸಮೀಪ ಸಮೀಪ, ಹೆಚ್ಚುಕಡಿಮೆ.

**लगर–** पु एक शिकारी पक्षी। ಒಂದು ಬೇಟೆಯ ಪಕ್ಷಿ.

**लगलग–** वि. बहुत नाज़ुक। ಸುಕುಮಾರ, ನಾಜೂಕಾದ, ಮೃದು-

ವಾದ.

**लगव**– वि. व्यर्थ, असत्य । ವ್ಯರ್ಥ, ಅಸತ್ಯ.

**लगवाना**– सक्रि किसीसे लगाने का काम कराना । ಹಚ್ಚಿಸು, ತಗಲಿಸು, ಲೇಪಿಸು.

**लगवार**– पु. उपपति । ಉಪಪತಿ, ಜಾರ.

**लगातार**–क्रिवि निरंतर, सिलसिले से। ಯಾವಾಗಲೂ, ನಿರಂತರ, ಎಡೆಬಿಡದೆ, ಕ್ರಮವಾಗಿ.

**लगान**–पु. भूमिकर। ತೆರಿಗೆ,ಭೂಮಿಯ ಕರ, ಕಂದಾಯ.

**लगाना**– सक्रि जोड़ना, मिलाना,आरोपित करना,खर्च करना, प्रवृत्त करना, लेप करना, बंद करना, चढ़ाना, दुहना, धारण करना, सम्मिलित करना, बिछाना, फैलाना, चिह्नित करना, सान धरना, पास लाना, बदले में देना, तत्पर करना, दाम आकना, छुआना, जलाना, क्रम में रखना, चोट पहुंचाना, स्थापित करना, सड़ाना, चुनना, वृक्ष जमाना, काम में लाना, दॉव पर रखना। ಕೂಡಿಸು,ಜೋಡಿಸು, ಇಡು,ಹಾಕು, ಸಂಧಿಸು, ಸೇರಿಸು,ಹೊರಿಸು, ಆರೋಪ ಕೊಡು, ಖರ್ಚು ಮಾಡು, ವ್ಯಯ ಮಾಡು, ಸವರು, ಲೇಪಿಸು, ಬಳಿ, ಮೆತ್ತು, ಮುಚ್ಚು, ಒಂದು ಮಾಡು, ಏರಿಸು, ಹಿಂಡು,ಧರಿಸು, ಸಮ್ಮಿಲಿತ ಮಾಡು,ಅಂಟಿಸು, ಹಾಸು, ಹರವು, ಚಿಹ್ನೆ ಹಾಕು, ಗುರ್ತು ಮಾಡು, ಸಾಣೆ ಹಿಡಿ, ಸಮೀಪ ತರು, ಬದಲಾಗಿ ಕೊಡು, ಪ್ರವೃತ್ತಿಸು, ತೊಡಗಿಸು, ಬೆಲೆ ಹಚ್ಚು, ಕ್ರಯ ಕಟ್ಟು,ಮುಟ್ಟಿಸು,ಸ್ಪರ್ಶಿಸು, ತಗಲಿಸು, ಸುಡು,ಕ್ರಮವಾಗಿರಿಸು, ಅಣಿ ಮಾಡು, ಹೊಡೆ, ಬಡಿ,ಜಡಿ, ಸ್ಥಾಪಿಸು,ನೆಡು,ಕೊಳೆಸು, ಆರಿಸು, ಗಿಡ ನೆಡು, ಸಸಿ ಹಚ್ಚು, ಉಪಯೋಗಿಸು, ಬಳಸು, ಆಟದಲ್ಲಿ ಇಡು,(ಜೂಜಿನಲ್ಲಿ)ರೊಕ್ಕ ಹಚ್ಚು.

**लगाम**– स्त्री बाग, नियंत्रण । ಕಡಿವಾಣ, ಲಗಾಮು, ನಿಯಂತ್ರಣ, ಕಟ್ಟು.

**लगाय**– स्त्री लगन, प्रीति । ಪ್ರೀತಿ, ಪ್ರೇಮ, ಹೊಂದಿಕೆ, ಪ್ರವೃತ್ತಿ.

**लगार**– स्त्री लगन, सिलसिला, बंधेज । ಪ್ರೀತಿ, ಪ್ರೇಮ, ಸಂಬಂಧ. ಕ್ರಮ, ಕಟ್ಟು, ಕಟ್ಟಳೆ, ನಿಯಮ. पु भेद लेने को भेजा गया व्यक्ति । ಗುಪ್ತ ಚಾರ.

**लगालगी**– स्त्री. लगन, स्नेह । ಸ್ನೇಹ, ಪ್ರೇಮ, ಸಂಬಂಧ, ಅನುರಾಗ.

**लगाव**– पु **लगावन**– स्त्री. संबंध । ಸಂಬಂಧ, ಸಂಪರ್ಕ, ಸೇರಿಕೆ, ಸ್ನೇಹ.

**लगावट**–स्त्री प्रीति,प्रेम-संबंध । ಪ್ರೀತಿ, ಸ್ನೇಹ, ಪ್ರೇಮ ಸಂಬಂಧ.

**लगावना**– सक्रि. दे. ' लगाना ' ।

**लगि**– अव्य दे. 'लग'। पु लगन, लग्गी । ಪ್ರೇಮ, ಸಂಬಂಧ, ಕೋಲು, ಡೊಣ್ಣೆ.

**लगी**– स्त्री दे 'लग्गी'।

**लगुड**– पु. डंडा । ಕಟ್ಟಿಗೆ, ಕೋಲು, ಡೊಣ್ಣೆ, ಲಾಠಿ.

**लगूर, लगूल**– पु. दुम । ಬಾಲ.

**लगे**– अव्य. लिये, साथ, संग। ಓಸ್ಕರ, ಸಂಗಡ, ಜೊತೆಗೆ.

**लग्गा**– पु लंबा बाँस, कार्यारंभ। ಉದ್ದವಾದ ಬಿದಿರ ಕೋಲು, ಕಾರ್ಯಾರಂಭ.

**लग्गी, लग्घी**–स्त्री. बाँस की लंबी छडी। ಉದ್ದವಾದ ಬಿದಿರು,ಕೋಲು,ಗಳ, ದೋಟಿ.

**लग्घड**– पु वाज, लकडबग्घा । ಗಿಡಗ, ಡೇಗೆ, ಕತ್ತೆಕಿರುಬ.

**लग्घा**-पु **लग्घी** –स्त्री दे 'लग्गा' 'लग्गी'।

**लग्न**–पु मुहूर्त, राशिका उदय, विवाह। ಮುಹೂರ್ತ, ರಾಶಿಯ ಉದಯ, ಲಗ್ನ, ವಿವಾಹ. स्त्री. दे 'लगन'। वि. लगा हुआ । ಕೂಡಿದ, ಹೊಂದಿಕೆಯಾದ, ಹತ್ತಿದ.

**लघिमा**– स्त्री. लघुता, एक सिद्धि । ಲಘುತ್ವ,ಕಡಿಮೆತನ,ಒಂದು ಸಿದ್ಧಿ.

**लघु**– वि. छोटा, हलका, थोड़ा, नीच । ಚಿಕ್ಕ, ಸಣ್ಣ, ಹಗುರಾದ, ಸ್ವಲ್ಪ, ನೀಚ.

**लघुता**– स्त्री. **लघुत्व**– पु छोटाई, नीचता, हलकापन । ಲಘುತ್ವ,ಚಿಕ್ಕತನ, ನೀಚತನ, ಕ್ಷುದ್ರತನ, ತುಚ್ಛತೆ, ಹಗುರತನ.

**लच, लचक**– स्त्री लचकने की क्रिया झुकाव । ಬಾಗುವಿಕೆ, ಮಣಿಯುವಿಕೆ, ಮಣಿತ, ಮುರುಕ.

**लचकना**– अक्रि. झुकना । ಬಾಗು, ಮಣಿ, ಬಳುಕು.

**लचकनि**– स्त्री. दे. 'लचक'।

**लचकाना**– सक्रि. झुकाना । ಬಗ್ಗಿಸು, ಮಣಿಸು, ಕೊಂಕಿಸು, ಅದುರಿಸು.

**लचकीला, लचलचा**– वि. लचकने योग्य । ಬಾಗುವ, ಮಣಿಯುವ, ಅದುರುವ

**लचन**– स्त्री दे 'लचक'।

**लचना**– अक्रि. दे. 'लचकना'।

**लचर**– वि. तर्कहीन, निर्बल । ತರ್ಕ-ಹೀನ, ನಿರ್ಬಲ.

**लचाना**– सक्रि झुकाना, नीचा करना । ಬಾಗಿಸು, ಮಣಿಸು, ಕೊಂಕಿಸು, ಬಳುಕಿಸು.

**लचार**– वि दे 'लाचार'।

**लचीला**–वि लचकीला । ಸಹಜವಾಗಿ ಬಾಗುವ,ಮಣಿಯುವ,ಬಳುಕುವ.

**लच्छ**– पु. उद्देश, बहाना, लाख । ಉದ್ದೇಶ, ಗುರಿ, ನೆವ, ಸೋಗು, ಲಕ್ಷ (ಎಣಿಕೆ).

**लच्छण, लच्छन**– पु लक्षण, लक्ष्मण । ಲಕ್ಷಣ, ಚಿಹ್ನೆ, ಲಕ್ಷ್ಮಣ.

**लच्छा**– पु. एक जेवर, सूत का गुच्छा । ಒಂದು ಆಭೂಷಣ, ಸೂಲಿನ

ಗೊಂಡೆ, ನೂಲಿನ ಬಳೆ, ಕಂಡಿಕೆ, ನೂಲಿನ ಉಂಡೆ.

लच्छि,लच्छिमी– स्त्री. लक्ष्मी। ಲಕ್ಷ್ಮಿ.

लच्छित– वि देखा हुआ, लक्ष्य किया हुआ। ನೋಡಿದ, ಗುರಿ ಹಿಡಿದ

लच्छी– स्त्री. छोटा लच्छा, लक्ष्मी। ದಾರದ ಚಿಕ್ಕ ಉಂಡೆ, ಕಂಡಿಕೆ, ಲಕ್ಷ್ಮಿ. पु घोड़े का एक भेद। ಕುದುರೆಯ ಒಂದು ಜಾತಿ

लच्छेदार– वि लच्छोंवाला, मजेदार। ನೂಲು ನೂಲಾದ, ಎಳೆಗಳುಳ್ಳ, ಗೊಂಡೆಗಳುಳ್ಳ, ರುಚಿಸುವ, ಮನ ರಂಜಕ,ಸ್ವಾರಸ್ಯವಾದ, ಇಂಪಾದ.

लछन– पु लक्षण। ಲಕ್ಷಣ.

लछना– सक्रि. लखना। ನೋಡು, ಲಕ್ಷಿಸು.

लछमन– पु. लक्ष्मण। ಲಕ್ಷ್ಮಣ.

लछमी,लछिमी– स्त्री लक्ष्मी। ಲಕ್ಷ್ಮಿ.

लछारा– वि. लंबा, बड़ा। ಉದ್ದವಾದ, ದೊಡ್ಡ.

लज– स्त्री. दे 'लाज'।

लजना– अक्रि लज्जित होना। ನಾಚು, ಲಜ್ಜಿತನಾಗು

लजनी– स्त्री. लजालू पौधा। ಮುಟ್ಟಿದರೆ ಮುನಿ, ನಾಚಿಕೆ ಬಳ್ಳಿ.

लजवाना– सक्रि शर्मिन्दा करना। ನಾಚಿಸು, ಲಜ್ಜಿಸು, ನಾಚಿಕೆ ಪಡಿಸು.

लजाधुर– पु. दे. 'लजनी'। वि. लज्जावान्। ಲಜ್ಜೆಯುಳ್ಳ, ನಾಚಿಕೆಯುಳ್ಳ.

लजाना– सक्रि लज्जित करना। ನಾಚಿಸು, ನಾಚಿಕೆ ಪಡಿಸು. अक्रि लज्जित होना। ನಾಚು, ನಾಚಿಕೆ ಪಡು, ಸಂಕೋಚ ಪಡು.

लजालू– पु. लजावर नाम का पौधा। ನಾಚಿಕೆ ಬಳ್ಳಿ, ಮುಟ್ಟಿದರೆ ಮುನಿ. वि. लज्जायुक्त। ಲಜ್ಜೆಯುಳ್ಳ, ನಾಚಿಕೆಯುಳ್ಳ.

लजियाना– अक्रि. लजाना। ನಾಚಿಸು, ನಾಚು, ಲಜ್ಜಿತನಾಗು.

लजीला, लजोर– वि लज्जाशील। ನಾಚಿಕೆಯುಳ್ಳ,ನಾಚುವ, ಸಂಕೋಚವುಳ್ಳ, ಲಜ್ಜೆಯುಳ್ಳ.

लजुरी– स्त्री. रस्सी। ಹಗ್ಗ.

लजोर– वि. दे. 'लजीला'।

लजोहा, लजौहा, लजौना– वि लज्जावान्, लजीला। ನಾಚಿಕೆಯುಳ್ಳ, ಲಜ್ಜೆಯುಳ್ಳ,ನಾಚುವ, ಲಜ್ಜಿಸುವ.

लज़्ज़त– स्त्री. स्वाद, मजा। ರುಚಿ, ಸವಿ, ಸ್ವಾದ.

लज्जाजनक, लज्जाप्रद– वि. लज्जा उत्पन्न करनेवाला। ನಾಚಿಕೆಯ, ನಾಚಿಸುವ, ಹೇಸಿಕೆಯ, ಅಪಮಾನದ.

लज्जावान्, लज्जाशील– वि दे. 'लजीला'।

लज्जाशून्य, लज्जाहीन–वि. निर्लज्ज। ನಿರ್ಲಜ್ಜ, ನಾಚಿಕೆಗೇಡಿ, ನಾಚಿಕೆ ಇಲ್ಲದವ.

**लज्जित**– त्रि शर्मिन्दा । ನಾಚಿದ, ನಾಚಿಕೆಗೊಂಡ.

**लट**– पु. पागल, चोर । ಹುಚ್ಚ, ಕಳ್ಳ. स्त्री. बालों का गुच्छा, सूतका गुच्छा, लपट, एक प्रकार की बेंत । ಜುಟ್ಟು, ಶಿಖೆ, ಕೇಶಪಾಶ, ಜಡೆಗಟ್ಟಿದ ಕೂದಲು, ನೂಲಿನ ಉಂಡೆ, ಜ್ವಾಲೆ, ಅಗ್ನಿ ಶಿಖೆ, ಒಂದು ತರದ ಬೆತ್ತ.

**लटक**– स्त्री लचक, नखरा । ಮಣಿತ, ಬಾಗುವಿಕೆ, ಬಳುಕುವಿಕೆ,ಮುರುಕ, ಒಯ್ಯಾರ, ಹಾವಭಾವ.

**लटकन**– पु. लटकनेवाली वस्तु, झुमका, लुभानेवाली चाल, लटकने की क्रिया या भाव, एक वृक्ष । ಜೋಲಾಡುವ ವಸ್ತು, ನೇತಾಡುವ ವಸ್ತು,ನತ್ತು, ಮುತ್ತಿನ ಗೊಂಡೆ, ಮುರುಕ, ಒಯ್ಯಾರ, ಜೋಲಾಡುವಿಕೆ, ನೇತಾಡುವಿಕೆ.

**लटकना**–अक्रि. झूलना,टँगना,लचकना। ಜೋಲಾಡು, ನೇತಾಡು, ಜೋತಾಡು, ಓಲಾಡು, ಬಳುಕು, ಜೋಲು ಬೀಳು, ತೂಗಾಡು, ಮಣಿ, ಬಾಗು.

**लटकवाना**– सक्रि 'लटकना' का प्रे रूप ।

**लटका**– पु. गति, चाल, हावभाव, टोटका, किसी रोग की शांति का छोटा प्रयोग । ಗತಿ, ರೀತಿ, ನಟನೆ, ಒಯ್ಯಾರ,ಬಿಂಕ, ತಂತ್ರ, ಮಾಟ, ಜಾದು, ಮದ್ದು, ಔಷಧ.

**लटकाना**–सक्रि लटकने में प्रवृत्त करना, टाँगना । ಜೋಲಾಡಿಸು, ನೇತಾಡಿಸು, ತೂಗಾಡಿಸು, ತೂಗು ಹಾಕು. अक्रि.-दे 'लटकना'।

**लटकीला, लटकौहा**–वि लटकनेवाला । ನೇತಾಡುವ, ಜೋಲಾಡುವ,ತೂಗಾಡುವ.

**लटना**–अक्रि. थककर गिर जाना, लड़खड़ाना, ढीला पड़ना, शिथिल होना, दुर्बल होना,ललचाना,आसक्त होना। ದಣಿ, ಬಳಲು, ಬಳಲಿ ಬಿದ್ದು ಬಿಡು, ತೂರಾಡು, ಬಳುಕಾಡು, ಅಲ್ಲಾಡು, ಸಡಿಲವಾಗು, ದುರ್ಬಲನಾಗು, ಅಶಕ್ತನಾಗು, ಸೊರಗು, ಬಾಡು, ಹಂಬಲಿಸು, ಆಶೆ ಪಡು, ಹಾತೊರೆ, ಆಸಕ್ತನಾಗು, ಮೋಹಿಸು.

**लटपट,लटपटा**–वि शिथिल,लड़खडाता हुआ, टूटा फूटा, जो क्रम में न हो, थककर गिरा हुआ, अशक्त, जिसमें परत पडी हो । ಶಿಥಿಲವಾದ, ಸಡಿಲವಾದ,ಮುಗ್ಗರಿಸುವ, ಅಲ್ಲಾಡುವ, ಬಳುಕುವ, ಮುರುಕಲಾದ, ಕ್ರಮವಿಲ್ಲದ,ದಣಿದ, ಬಳಲಿ ಬೆಂಡಾದ, ಅಶಕ್ತ, ದುರ್ಬಲ, ಬಾಡಿದ,ಸೊರಗಿದ, ಸುಕ್ಕುಗಟ್ಟಿದ, ನಿರಿಗೆಯಾದ.

**लटपटान**– स्त्री. लचक, लड़खड़ाहट । ಬಳುಕುವಿಕೆ,ಬಾಗುವಿಕೆ, ಜೋಲಾಡುವಿಕೆ, ಅಲ್ಲಾಡುವಿಕೆ, ತತ್ತರಿಸುವಿಕೆ.

**लटपटाना**– अक्रि लड़खडाना, अनुरक्त होना, विचलित होना । ಬಳಕು, ತತ್ತರಿಸು, ತೂರಾಡು, ಓಲಾಡು, ಅನುರಕ್ತನಾಗು, ಗಾಬರಿಯಾಗು.

**लटा**– वि दुबला, तुच्छ । ದುರ್ಬಲ, ತುಚ್ಛ, ನೀಚ.

**लटापटी**– स्त्री. लटपटाने की क्रिया या भाव, भिडंत । ತತ್ತರಿಸುವಿಕೆ, ಓಲಾಡುವಿಕೆ, ಮುಗ್ಗರಿಸುವಿಕೆ, ಲಟಾಪಟಿ, ಜಗಳ, ಹೊಡೆದಾಟ.

**लटापोट**– वि मुग्ध । ಮುಗ್ಧ, ಮರುಳಾದ, ಮೋಹಿತ.

**लटिया**– स्त्री. सूत आदि की लच्छी । ನೂಲು ಮುಂತಾದವುಗಳ ಚಿಕ್ಕ ಉಂಡೆ.

**लटी**– स्त्री बुराई, मिथ्या कथन, वेश्या, भगतिन । ಕೆಡಕು, ಸುಳ್ಳುವಾರ್ತೆ, ವೇಶ್ಯೆ, ಸೂಳೆ, ಸನ್ಯಾಸಿನಿ.

**लटुआ**– पु एक खिलौना । ಬೊಗರೆ, ಬುಗುರಿ.

**लट्टू, लट्टू**– पु दे 'लटुआ' । वि मुग्ध । ಮುಗ್ಧ, ಮೋಹಿತ.

**लटूरी**– स्त्री. सिर के बालों का लटकता हुआ गुच्छा, केश । ಹೆಳಲು, ಕೇಶಪಾಶ, ಜಡೆ.

**लट्टू**– पु. दे. 'लट्टू'।

**—होना**= मोहित होना । ಮೋಹಿಸು, ಅನುರಕ್ತನಾಗು, ಮನಸೋಲು.

**लट्ठ**– पु. बड़ी लाठी, सोटा । ಬಡಿಗೆ, ದೊಡ್ಡ ಕೋಲು. वि. उजड्ड । ಮೂರ್ಖ.

**लट्ठा**–पु लकड़ी का मोटा लंबा टुकड़ा, मारकीन । ತೊಲೆ, ತೆಪ್ಪ, ದಿಮ್ಮಿ, ದೂಲ, ಒಂದು ತರದ ಬಟ್ಟೆ.

**लठिया**– स्त्री. छोटी लाठी । ಚಿಕ್ಕ ಬಡಿಗೆ.

**लठियाना**– सक्रि. लाठी से मारना । ದೊಣ್ಣೆಯಿಂದ ಹೊಡೆ.

**लठैत**– पु लट्ठबाज । ಲಾಠೀ ವರಸೆ ಬಲ್ಲವ.

**लडंत**– पु मुठभेड, मुकाबला । ಜಗಳ, ಯುದ್ಧ, ವಿರೋಧ, ಹೋರಾಟ, ಪ್ರತಿಭಟನೆ.

**लड**– स्त्री दे. 'लडी'।

**लडकई**–स्त्री लड़कपन–पु. बाल्यावस्था, चंचलता, नादानी । ಬಾಲ್ಯ, ಹುಡುಗತನ, ಚಿಕ್ಕಂದು, ಚಾಂಚಲ್ಯ, ಅಜ್ಞಾನ, ತಿಳಿವಳಿಕೆಯಿಲ್ಲದಿರುವಿಕೆ.

**लडकपन**– पु. बाल्यावस्था, चंचलता । ಬಾಲ್ಯ, ಹುಡುಗತನ, ಚಾಂಚಲ್ಯ.

**लड़का**– पु. पुत्र, बालक । ಮಗ, ಬಾಲಕ, ಹುಡುಗ

**लड़काई**– स्त्री दे 'लडकई'।

**लड़कावाला**– पु संतान । ಸಂತಾನ, ಮಕ್ಕಳು ಮರಿ.

**लडकिनी,लडकी**– स्त्री बेटी, बालिका । ಮಗಳು, ಹುಡುಗಿ, ಬಾಲಿಕೆ.

**लड़कौरी**–स्त्री. वह स्त्री जिसकी गोद मे बच्चा हो । ತೊಡೆಯ ಮೇಲೆ ಕೂಸು ಇರುವ ಸ್ತ್ರೀ, ಸಂತಾನವತಿ,

ಮಕ್ಕಳ ತಾಯಿ.

लडखड़ाना–अक्रि. डगमगाना। ಬಳಕು, ತತ್ತರಿಸು, ಓಲಾಡು, ಹೊರಳಾಡು, ಅಲ್ಲಾಡು.

लडखडी– स्त्री लडखड़ाने की क्रिया। ಬಳುಕುವಿಕೆ, ತತ್ತರಿಸುವಿಕೆ, ಓಲಾಡುವಿಕೆ.

लडना– अक्रि युद्ध करना, झगडना। ಯುದ್ಧ ಮಾಡು, ಕಾದು, ಜಗಳ ಮಾಡು.

लडबड़ाना– अक्रि दे. 'लड़खड़ाना'।

लडबावर, लडबौरा– वि, लड़को जैसा, नासमझ, मूर्ख । ಹುಡುಗರಂಥ, ಹುಡುಗಾಟಿಕೆಯ, ತಿಳಿವಳಿಕೆಯಿಲ್ಲದ, ಮೂರ್ಖ, ಅಜ್ಞಾನಿ, ಹೆಡ್ಡ.

लड़ाई– स्त्री. युद्ध, झगडा, विवाद। ಯುದ್ಧ, ಜಗಳ, ವಾದವಿವಾದ.

लडाका– वि. बहादुर, कलहकारी । ವೀರ, ಯುದ್ಧಪ್ರಿಯ, ಜಗಳಗಂಟ.

लडाकू– वि दे. 'लड़ाका'। लड़ाई के काम का । ಯುದ್ಧದಲ್ಲಿ ಉಪಯೋಗ ಬೀಳುವ.

लडाना– सक्रि भिडाना, कलह के लिये उद्यत करना, लाड-प्यार करना । ಯುದ್ಧ ಮಾಡಿಸು, ಜಗಳ ಹಚ್ಚು, ಹೋರಾಡಿಸು, ಹೊಡೆದಾಡಿಸು, ಲಲ್ಲೆಮಾಡು, ಪ್ರೀತಿ ಮಾಡು, ಮುದ್ದಾಡು.

लडायता– वि दे 'लडैता'।

लडियाना–सक्रि लड़ी बनाना, पिरोना। ಸರ ಪೋಣಿಸು, ಮಾಲೆ ಕಟ್ಟು.

लड़ी– स्त्री. लड, पंक्ति, सिलसिला । ಮಾಲೆ, ಎಳೆ, ಸರ, ಲಡಿ, ಪಂಕ್ತಿ, ಕ್ರಮ.

लडीला–वि प्यारा। ಪ್ರಿಯ, ಮುದ್ದು

लडुआ, लड्डुया– पु. लड्डू। ಉಂಡೆ, ಲಾಡು, ಲಡ್ಡು.

लडैता– वि. लड़नेवाला, दुलारा । ಯುದ್ಧ ಮಾಡುವವ, ವೀರ, ಪ್ರಿಯ, ಪ್ರೀತಿಯ, ಮುದ್ದು.

लड्डू– पु. गेंद के आकार की मिठाई। ಉಂಡೆ, ಲಡ್ಡು, ಲಾಡು.

लड़्याना– सक्रि. अधिक प्यार करना। ಬಹಳ ಪ್ರೀತಿಸು, ಲಲ್ಲೆ ಮಾಡು.

लढ़ा– पु लढिया– स्त्री बैलगाड़ी । ಚಕ್ಕಡಿ, ಎತ್ತಿನ ಗಾಡಿ, ಚಕ್ಕಬಂಡಿ.

लत– स्त्री. दुर्व्यसन । ದುರ್ವ್ಯಸನ, ಚಟ, ಚಾಳಿ.

लतखोर, लतखोरा– वि लात खानेवाला, कमीना। ಹೊಡೆತ ತಿನ್ನುವವ, ತುಚ್ಛ, ನೀಚ. पु. पायंदाज, चौखट, दास । ಕಾಲು ಒರೆಸುವ ಚಾಪೆ, ಚೌಕಟ್ಟು, ದಾಸ, ಸೇವಕ.

लतमर्दन– पु. पैरों से रौंदना। ಕಾಲಿನಿಂದ ತುಳಿಯುವಿಕೆ.

लतर– पु. बेल। ಬಳ್ಳಿ, ಲತೆ.

लता– स्त्री. बेल। ಬಳ್ಳಿ, ಲತೆ.

लताकुंज, लतागृह–पु लताओं से छाया हुआ स्थान। ಬಳ್ಳಿಯಿಂದ ಆಚ್ಛಾದಿತವಾದ ಸ್ಥಾನ.

लताभवन,लतामंडप–पु दे. 'लताकुंज'।

लताड़– स्त्री. फटकार। ಬೆದರಿಕೆ, ಅವಮಾನ, ತಿರಸ್ಕಾರ, ನಿಂದೆ.

लताड़ना– सक्रि कुचलना, लात मारना, थकाना, व्यग्र करना। ತುಳಿ,ಹೊಡೆ, ಕಾಲಿನಿಂದ ಒದೆ, ದಣಿಸು, ತ್ರಾಸ ಕೊಡು, ಪೀಡಿಸು, ಧಿಕ್ಕರಿಸು

लताफ़त– स्त्री कोमलता, स्वाद, उत्तमता। ಕೋಮಲತೆ, ಸ್ವಾದ, ಮಾಧುರ್ಯ, ಉತ್ಕೃಷ್ಟತೆ.

लतिका– स्त्री. छोटी लता। ಚಿಕ್ಕಬಳ್ಳಿ, ಲತೆ.

लतियाना– सक्रि लातो से मारना। ಕಾಲಿನಿಂದ ಒದೆ, ತುಳಿ, ಮೆಟ್ಟು.

लतीफ़– वि बढ़िया, मजेदार, सुंदर। ಒಳ್ಳೆಯ, ಉತ್ತಮ, ಸ್ವಾದಿಷ್ಟ, ರುಚಿಸುವ, ಸುಂದರ.

लतीफ़ा– पु चुटकुला। ನಗೆಚಾಟಿಕೆ, ನಗೆಮಾತು, ಹಾಸ್ಯ, ಗೇಲಿ.

लत्ता– पु. धज्जी। ಚಿಂದಿ, ಅರಿವೆಯ ತುಂಡು, ಬಟ್ಟೆಯ ಚೂರು, ಬೊಂತೆ.

लत्ती– स्त्री. धज्जी, पादप्रहार। ಚಿಂದಿ, ಅರಿವೆಯ ತುಂಡು, ಬಟ್ಟೆಯ ಚೂರು, ಒದೆತ, ಪಾದಪ್ರಹಾರ.

लथड़पथड़, लथपथ– वि. भीगा हुआ। ತೊಯ್ದ,ಒದ್ದೆಯಾದ,ಮುಣುಗಿದ

लथाड़–स्त्री. फटकार, भर्त्सना, पराजय। ಬೆದರಿಕೆ, ಮೂದಲಿಸುವಿಕೆ, ತಿರಸ್ಕಾರ, ಪರಾಜಯ, ಸೋಲು.

लथाड़ना, लथेड़ना– सक्रि कीचड़ आदि से तराबोर करना, भूमिपर पटककर घसीटना, हराना,फटकारना, थकाना। ಕೆಸರಿನಿಂದ ಮಲಿನ ಮಾಡು, ಎಳೆದು ಮಲಿನ ಮಾಡು, ಭೂಮಿಯ ಮೇಲೆ ಕೆಡಹಿ ಎಳೆ, ಸೋಲಿಸು, ಬೆದರಿಸು, ಗದರಿಸು, ಮೂದಲಿಸು, ಜಂಕಿಸು, ದಣಿಸು.

लदना– अक्रि भारयुक्त होना, बोझा भरा जाना, परिपूर्ण होना, कैदी होना। ಹೊರಿಸಲ್ಪಡು,ಹೊರಲ್ಪಡು, ಭಾರಯುಕ್ತವಾಗು, ಹೇರಲ್ಪಡು, ತುಂಬಲ್ಪಡು, ಶಿಕ್ಷೆಯಾಗು.

लदवाना– सक्रि लादने का काम दूसरे से कराना। ಹೇರಿಸು,ಹೊರಿಸಿಕೊಳ್ಳು

लदाउ, लदाऊ– पु दे 'लदाव'।

लदाना– सक्रि. लादने का काम दूसरे से कराना। ಹೇರಿಸು, ಹೊರಿಸಿ-ಕೊಳ್ಳು.

लदाव– पु. लादने की क्रिया या भाव, भार, विना शहतीर की जोड़ाई या पटाव। ಹೇರುವಿಕೆ, ಹೊರಿಸುವಿಕೆ, ಹೇರಾಟ, ಭಾರ, ಅಟ್ಟ, ಮಾಳಿಗೆ, ನಾಟ ಅಥವಾ ದೂಲಗಳಿಲ್ಲದ ಚಪ್ಪರ, ಬರೇ ಇಟ್ಟಿಗೆಯಿಂದ ಕಟ್ಟಿದ ಅಟ್ಟ.

लदावना–सक्रि. लदवाना, माल लादकर ले जाना। ಹೇರಿಸು,ಹೇರಿಸಿಕೊಳ್ಳು, ಹೇರಿ ಸಾಗಿಸು.

लद्दुआ, लद्दू– वि. बोझ ढोनेवाला,

जिसपर भार रक्खा जावे । ಭಾರ ಹೊರುವವ, ಭಾರ ಹೊರುವ ಪ್ರಾಣಿ.

लद्धड़–वि. आलसी । ಆಲಸಿ,ನ್ಯೈಗಳ್ಳ ಸೋಮಾರಿ.

लद्धना– सक्रि पाना । ದೊರಕಿಸು, ಗಳಿಸು.

लपक– स्त्री क्रांति, लपट, फुरती । ಕಾಂತಿ, ಹೊಳಪು, ಜ್ವಾಲೆ, ವೇಗ.

लपकना– अक्रि झपटना, शीघ्रतासे जाना । ಏರಿ ಹೋಗು, ಆಕ್ರಮಣ ಮಾಡು, ಎರಗು, ಧಾವಿಸು, ಬೇಗನೆ ಹೋಗು.

लपकी– स्त्री. एक प्रकार की सीधी सिलाई । ಒಂದುತರದ ಹೊಲಿಗೆ.

लपझप–स्त्री. तेजी, चंचलता, चालाकी । ಚುರುಕುತನ, ಚಾಂಚಲ್ಯ, ಗಡಿಬಿಡಿ, ಅವಸರ. वि. चंचल, फुरतीला । ಚಂಚಲ,ತೀವ್ರ,ಚುರುಕಾದ, ವೇಗವುಳ್ಳ

लपट– स्त्री. लौ, हवा की लहर, आँच, गंध । ಜ್ವಾಲೆ, ಅಗ್ನಿಶಿಖೆ, ಹವೆಯ ತೆರೆ, ಉಷ್ಣತೆ, ಕಾವು, ನೆಕೆ, ಧಗೆ, ವಾಸನೆ, ಗಂಧ.

लपटना– अक्रि. आलिंगन करना, उलझना, फँसना, घिरा जाना । ಆಲಿಂಗಿಸು, ಅಂಟಿಕೊಳ್ಳು, ಸುತ್ತಿಕೊಳ್ಳು, ತೊಡಕುಬೀಳು, ಸಿಕ್ಕಿಕೊಳ್ಳು, ಸುತ್ತು, ಕವಿ, ಹೊಂದಿಕೆಯಾಗು.

लपटाना– सक्रि आलिंगन करना, घेरना लपेटना । ಆಲಿಂಗಿಸು, ಅಂಟಿಸು, ಸುತ್ತು, ಸುತ್ತು ಹಾಕು. अक्रि दे. 'लपटना'।

लपटैहा, लपटौना– वि लिपटनेवाला। ಅಂಟುವ, ಮುತ್ತಿಕೊಳ್ಳುವ. पु एक तरह की घास । ಹಂಜಿ ಹುಲ್ಲು.

लपना– अक्रि. झुकना, झटके के साथ लचना, लपकना, ललचना। ಬಾಗು, ಬಳುಕು, ಮಣಿ, ತೂಗಾಡು, ವೇಗವಾಗಿ ನಡೆ,ಎರಗು,ಆಶೆಪಡು.

लपलपाना–सक्रि वेगसे हिलाना, चमकाना। ಅಲುಗಾಡಿಸು, ವೇಗದಿಂದ ಅತ್ತಿತ್ತ ತಿರುಗಿಸು, ಬೀಸು, ಝುಳಪಿಸು, ಹೊಳೆಯಿಸು. अक्रि. इधर उधर लचना, हिलना, चमकना । ಅಲ್ಲಾಡು, ಮಣಿ, ಬೀಸು, ಹೊಳೆ.

लपलपाहट–स्त्री. लपलपाने की क्रिया या भाव । ಅಲ್ಲಾಡುವಿಕೆ, ಮಣಿಯುವಿಕೆ, ಬೀಸುವಿಕೆ, ಹೊಳಪು, ಝುಳಪಿಸುವಿಕೆ.

लपसी– स्त्री. कम घी का हलुआ । ಹಲ್ವಾ, ಲಾಪ್ಸಿ.

लपाना– सक्रि. झोंका देकर लचाना । ಬೀಸು, ಮಣಿಸು, ಝುಳಪಿಸು, ಬಳುಕಿಸು, ಕೊಡವು.

लपेट–स्त्री. लपेटने की क्रिया, घेरा, तह, चक्कर, उलझन। ಸುತ್ತುವಿಕೆ,ಸುತ್ತು, ಮಡಿಕೆ, ತೊಡಕು, ಸುಲಿಕೆ,ಸಿಕ್ಕು.

लपेटन– स्त्री दे 'लपेट'। पु. लपेटने

की वस्तु । ಸುತ್ತುವ ವಸ್ತು.

लपेटना– सक्रि परिवेष्टित करना, समेटना, कपडे आदि के भीतर बाधना, फॅसाना, लेप करना। ಸುತ್ತು, ಕೂಡಿಸು, ಗಂಟು ಕಟ್ಟು, ಸಿಕ್ಕಿಸು, ತೊಡಕುಬೀಳಿಸು, ಸಿಕ್ಕುಬೀಳಿಸು, ಲೇಪಿಸು, ಸಾರಿಸು.

लपेटवॉ--वि. लपेटा हुआ, जिस में सोने चादी के तार लपेटे हों, घुमाव फिराव का, गूढ अर्थ का । ಸುತ್ತಿದ, ಮಡಿಸಿದ, ಬಂಗಾರ ಬೆಳ್ಳಿಯ ರೇಕು ಅಥವಾ ತಾರು ಸುತ್ತಿದ, ಮುಚ್ಚಿದ, ತಿರುವು ಮುರುವು ಗಳುಳ್ಳ, ಗೂಢಾರ್ಥದ.

लपेटा– पु दे ' लपेट '।

लप्पड– पु थापड़ । ತಪರಾಕು, ಕೆನ್ನೆ ಏಟು.

लप्पा–पु छत की धरन में लगाई हुयी लकडी । ಆನಿಕೆಗೋಲು.

लप्सिका– स्त्री. दे ' लपसी '।

लफंग– पु लंपट, बदमाश । ಲಂಪಟ, ದುರಾಚಾರಿ, ದುಷ್ಟ.

लफना– अक्रि. दे ' लपना '।

लफाना– सक्रि. दे. ' लपाना '।

लफ्ज़– पु. शब्द, बात । ಮಾತು, ಶಬ್ದ, ಸೊಲ್ಲು.

लफ्ज़ी– वि. शाब्दिक । ಶಾಬ್ದಿಕ,ಶಬ್ದ ಸಂಬಂಧವಾದ.

लफ्फ़ाज़–वि. शेखी मारनेवाला । ಮಾತುಗಾರ, ಬಡಾಯಿ ಕೊಚ್ಚುವವ, ಆತ್ಮಸ್ತುತಿ ಮಾಡಿಕೊಳ್ಳುವವ.

लफ़्फ़ाजी– स्त्री. डीग हॉकना, बढबढ कर बातें करना। ಬಡಾಯಿ ಕೊಚ್ಚುವಿಕೆ, ವಾಚಾಳತೆ.

लब– पु. ओठ, थूक, किनारा, पार्श्व । ತುಟಿ, ಅಧರ, ಜೊಲ್ಲು, ಉಗುಳು, ತೀರ, ದಂಡೆ, ಅಂಚು, ಪಾರ್ಶ್ವ, ಮಗ್ಗಲು.

लबड़ना–अक्रि फॅसना । ಸಿಕ್ಕುಬೀಳು, ತೊಡಕು ಬೀಳು.

लबड़ धों धों– स्त्री व्यर्थ का हल्ला, अव्यवस्था, अन्याय, गडबड़ी । ಚೀರಾಟ, ವ್ಯರ್ಥವಾದ ಕೂಗಾಟ, ಗದ್ದಲ, ರಗಳೆ, ಅವ್ಯವಸ್ಥೆ, ಅನ್ಯಾಯ, ಅನೀತಿ, ಬಲಾತ್ಕಾರ.

लबडना– अक्रि झूट बोलना । ಸುಳ್ಳು ಹೇಳು.

लबदा– पु. मोटा बेडौल डंडा । ದಪ್ಪವಾದ ಅಂದವಿಲ್ಲದ ದೊಣ್ಣೆ.

लबदी– स्त्री छोटी पतली छडी । ತೆಳುವಾದ ಕೋಲು.

लबनी– स्त्री मिट्टी की लंबी हॉडी। ಹೆಂಡ ಇಳಿಸುವ ಮಡಕೆ, ಗೊಬ್ಬೆ.

लबरा– वि. दे. ' लबार '।

लबरेज़– वि. मुँहतक भरा हुआ । ತುಂಬಿ ತುಳುಕುವ.

लबादा– पु चोगा । ಉದ್ದ ಅಂಗಿ, ನಿಲುವಂಗಿ.

लबार– वि. झूठ बोलनेवाला । ಸುಳ್ಳು ಹೇಳುವವ, ಮಿಥ್ಯಾವಾದಿ,ಬುರುಡೆ

ಬಿಡುವವ.

**लबारी**– स्त्री असत्य। ಅಸತ್ಯ, ಸುಳ್ಳು, ಬುರುಡೆ. वि दे. ' लवार '।

**लबालब**– वि मुँहतक, किनारेतक। ತುಂಬಿ ತುಳುಕುವ, ಅಂಚುಮುಟ್ಟ ತುಂಬಿದ, ಬಾಯಿಯವರೆಗೆ ತುಂಬಿದ.

**लबेदम**–वि. मरणासन्न। ಮರಣಾಸನ್ನ.

**लबेदा**– पु मोटा डंडा। ದೊಣ್ಣೆ.

**लबेदी**– स्त्री. पतली छडी। ತೆಳುವಾದ ಕೋಲು, ಬೆತ್ತ.

**लब्ध**– वि. प्राप्त। ಪ್ರಾಪ್ತ, ಪಡೆದ, ಹೊಂದಿದ, ದೊರಕಿಸಿದ.

**लब्धप्रतिष्ठ**–वि. प्रतिष्ठित। ಪ್ರತಿಷ್ಠಿತ, ಗೌರವಸ್ಥ.

**लब्धि**– स्त्री प्राप्ति। ಪ್ರಾಪ್ತಿ, ಲಾಭ.

**लभस**– पु. धन, भिक्षुक। ಧನ, ಹಣ, ಭಿಕ್ಷುಕ.

**लभ्य**– वि. पाने योग्य। ಲಭ್ಯ, ಲಭಿಸುವ, ದೊರಕಿಸಲು ಯೋಗ್ಯವಾದ.

**लमकना**–अक्रि लपकना, उत्सुक होना। ಧಾವಿಸು, ಬೇಗ ಬೇಗನೆ ನಡೆ, ಉತ್ಸುಕನಾಗು, ತವಕ ಪಡು.

**लमछड**– वि. लंबा और पतला। ತೆಳುವಾಗಿ ಉದ್ದವಾಗಿರುವ पु. भाला। ಭಲ್ಲೆ, ಬರ್ಚಿ.

**लमटगा**– वि. लंबी टांगोवाला। ಉದ್ದವಾದ ಕಾಲುಗಳುಳ್ಳ. पु. सारस। ಸಾರಸ ಪಕ್ಷಿ.

**लमतड़ंग**– वि बहुत लंबा तथा ऊंचा। ಉದ್ದ ಹಾಗೂ ಎತ್ತರವಾದ.

**लमधी**–पु. समधी का पिता। ಬೀಗನ ತಂದೆ.

**लमहा**–पु क्षण। ಕ್ಷಣ, ಪಲ, ನಿಮಿಷ.

**लमाना**-- सक्रि. लंबा करना। ಉದ್ದ ಮಾಡು, ಬೆಳಿಸು. अक्रि लंबा होना। ಉದ್ದವಾಗು.

**लय**– स्त्री. गाने की आवाज़। ಲಯ, ಪ್ರವೃತ್ತಿ, ಹಾಡುವ ಧ್ವನಿ. पु एकाग्रता, प्रेम, विनाश। ಏಕಾಗ್ರತೆ, ಚಿತ್ತ ಪ್ರವೃತ್ತಿ, ಪ್ರೇಮ, ವಿನಾಶ, ಹಾಳು.

**लयन**– पु. विश्राम, शांति। ವಿಶ್ರಾಮ, ವಿಶ್ರಾಂತಿ, ಶಾಂತಿ.

**लर**– स्त्री. दे. ' लड़ '।

**लरकई**– स्त्री दे. ' लड़कई '।

**लरकना**– अक्रि. दे. ' लटकना '।

**लरका**– पु. दे ' लड़का '।

**लरकाना**– सक्रि झुकाना, लटकाना। ಬಾಗಿಸು, ಮಣಿಸು, ನೇತಾಡಿಸು, ಜೋಲಾಡಿಸು, ತೂಗುಹಾಕು.

**लरकिनी**– स्त्री दे. ' लड़की '।

**लरखरना, लरखराना**–अक्रि. दे ' लड़खड़ाना '।

**लरज़ना**–अक्रि हिलना, काँपना, डरना। ಅಲ್ಲಾಡು, ತೂಗಾಡು, ನಡುಗು, ಕಂಪಿಸು, ಅಂಜು.

**लरझर**–वि. विपुल। ಅತ್ಯಧಿಕ, ವಿಪುಲ.

**लरना**– अक्रि दे ' लड़ना '।

**लरनि**– स्त्री. युद्ध। ಯುದ್ಧ.

**लराई**– स्त्री. दे ' लड़ाई '।

**लरिकई, लरिकाई**–स्त्री दे ' लड़कई '।

**लरी**– स्त्री. दे. ' लड़ी '।

**ललक**– स्त्री. लालसा। ಪ್ರಬಲ ಇಚ್ಛೆ, ಉತ್ಸಾಹ, ಹುಮ್ಮಸ್ಸು,ಲವಲವಿಕೆ.

**ललकना**– अक्रि. अधिक इच्छा करना, मग्न होना। ಪ್ರಬಲ ಇಚ್ಛೆಯಾಗು, ಹಾತೊರೆ, ಆತುರನಾಗು, ಲವಲವಿಕೆಯಾಗು, ಮಗ್ನನಾಗು.

**ललकार**– स्त्री. चुनौती। ಆಹ್ವಾನ, ಜಗಳಕ್ಕೆ ಕರೆಯುವಿಕೆ.

**ललकारना**–सक्रि युद्ध के लिये पुकारना, उत्साहित करना। ಯುದ್ಧಕ್ಕೆ ಕರೆ, ಆಹ್ವಾನಿಸು, ಬಾಹು ಚಪ್ಪರಿಸು, ಉತ್ಸಾಹ ಕೊಡು.

**ललचना**– अक्रि. लालच करना, लुभा जाना। ಆಶೆಯಾಗು, ಮೋಹಗೊಳ್ಳು, ಹಾತೊರೆ, ಆತುರಗೊಳ್ಳು.

**ललचाना**– अक्रि. दे ' ललचना '। सक्रि. आकर्षित करना, लालसा पैदा करना, लुभाना,। ಆಕರ್ಷಿಸು, ಆಶೆಗೊಳಿಸು, ಮೋಹಗೊಳಿಸು, ಮರುಳು ಮಾಡು.

**ललचौहाँ**– वि. लालच पूर्ण। ಲೋಭಿ, ಆಶೆಪಡುವ, ಮೋಹಗೊಂಡ.

**ललन**– पु. प्रिय बालक, प्रिय पति, क्रीड़ा। ಮುದ್ದು ಮಗು, ಪ್ರಿಯ ಪತಿ, ಕ್ರೀಡೆ.

**ललना**– स्त्री. रमणी, स्त्री, जीभ। ರಮಣಿ, ಸ್ತ್ರೀ, ನಾಲಿಗೆ.

**ललनी**– स्त्री. बाँस की नली। ಬಿದಿರಿನ ನಳಿಗೆ.

**ललाई**– स्त्री. लालिमा। ಕೆಂಬಣ್ಣ, ಹೊಂಬಣ್ಣ.

**ललाट**– पु भाल। ಹಣೆ.

**ललाना**–अक्रि. लालायित होना। ಆತುರನಾಗು, ಆಶೆಗೊಳ್ಳು, ಉತ್ಸುಕನಾಗು.

**ललाम**–पु रत्न, चिह्न, भूषण। ರತ್ನ, ಚಿಹ್ನೆ, ಆಭರಣ. वि सुंदर, लाल रंगका। ಸುಂದರ, ಕೆಂಪು ಬಣ್ಣದ.

**ललित**– वि. सुंदर, सुहावना, प्रिय। ಸುಂದರ, ಮನೋಹರ, ರುಚಿಕರ, ಪ್ರಿಯ.

**ललितकला**– स्त्री. संगीत, चित्रकारी, भवननिर्माण आदि कलाएँ। ಸಂಗೀತ, ಚಿತ್ರಕಲೆ, ವಾಸ್ತುಶಿಲ್ಪ ಮುಂತಾದ ಕಲೆಗಳು.

**ललितई, ललिताई**– स्त्री सुंदरता। ಸೌಂದರ್ಯ, ಲಾವಣ್ಯ.

**लली**–स्त्री. लाड़ली लड़की, प्रियतमा। ಮುದ್ದು ಮಗಳು, ಪ್ರಿಯತಮೆ.

**ललौहाँ**– वि लालिमा लिये हुए। ಕೆಂಪು ವರ್ಣವುಳ್ಳ.

**लल्ला**– पु. बच्चों के लिए प्यारका शब्द। ಮಕ್ಕಳನ್ನು ಸಂಬೋಧಿಸುವ ಪ್ರೀತಿಯ ಶಬ್ದ.

**लल्लोचप्पो, लल्लोपत्तो**–स्त्री. चापलूसी। ಮುಖಸ್ತುತಿ, ಸವಿಮಾತಿನಿಂದ ಉಬ್ಬಿಸುವಿಕೆ, ಬೆಣ್ಣೆ ಹಚ್ಚಿದ

**लसम**— वि खराब। ಕೆಟ್ಟ, ದೂಷಿತ, ನಿರುಪಯೋಗಿ.

**लसलसा**— वि. लसदार। ಜಿಗುಟಾದ, ಅಂಟಾದ.

**लसलसाना**— अक्रि. चिपचिपाना। ಜಿಗುಟಾದ.

**लसलसाहट**— स्त्री. चिपचिपाहट। ಜಿಗುಟುತನ.

**लसित**— वि शोभित। ಶೋಭಿಸುವ, ಎದ್ದು ಕಾಣುವ.

**लसी**— स्त्री. चिपचिपाहट, आकर्षण, संबंध, दूध पानी का शरबत। ಜಿಗುಟು, ಆಕರ್ಷಣ, ಸಂಬಂಧ, ಹಾಲುನೀರಿನ ಷರಬತ್ತು, ಪಾನಕ.

**लसीला**— वि चिपचिपा, फबीला। ಜಿಗುಟಾದ, ಶೋಭಿಸುವ, ಸೊಗಸಾದ.

**लसुन**— पु. दे. 'लहसुन'।

**लस्टम-पस्टम**— क्रिवि. किसी न किसी प्रकार। ಹೇಗಾದರೂ ಮಾಡಿ, ಹಾಗೂ ಹೀಗೂ.

**लस्त**— वि अशक्त, शिथिल, श्रांत। ಅಶಕ್ತ, ಶಿಥಿಲ, ದಣಿದ, ಶ್ರಾಂತ.

**लस्सी**— स्त्री. दे 'लसी'। मट्ठा। ಮಜ್ಜಿಗೆ, ತಕ್ರ.

**लहँगा**— पु स्त्रियों का एक घेरदार पहनावा। ಸ್ತ್ರೀಯರ ಒಂದು ಉಡುಪು, ಲಂಗ.

**लहक**— स्त्री आग की लपट, कांति, शोभा। ಜ್ವಾಲೆ, ಅಗ್ನಿಶಿಖೆ, ಕಾಂತಿ, ಶೋಭೆ, ಹೊಳಪು.

**लहकना**— अक्रि भभकना, हिलना, लपकना, झोके देना, उत्कंटित होना। ಜ್ವಾಲೆಗಳೇಳು, ಧಗಧಗ ಉರಿ, ಅಲ್ಲಾಡು, ಬಳುಕು, ಬೇಗಬೇಗನೆ ನಡೆ, ಅಲುಗಾಡು, ತೂರಾಡು, ಬೀಸು, ಆತುರನಾಗು, ಹಂಬಲಿಸು.

**लहकाना, लहकारना**— सक्रि भड़काना, उत्साहित करना, लपकाना, झोका देना। ಪ್ರವೃತ್ತಿಸು, ಮುಂದೂಡು, ಪ್ರೇರೇಪಿಸು, ಉತ್ಸಾಹಿಸು, ಬೇಗ ಬೇಗನೆ ಮುಂದೆ ಸಾಗಿಸು, ಅಲುಗಾಡಿಸು, ತೂಗಾಡಿಸು, ಬೀಸು.

**लहकौर, लहकौरि**— स्त्री. विवाह की एक रस्म। ಮದುವೆಯಲ್ಲಿ ವಧೂವರರು ಪರಸ್ಪರರ ಬಾಯಲ್ಲಿ ಅನ್ನದ ತುತ್ತು ಹಾಕುವ ಒಂದು ಪದ್ಧತಿ.

**लहजा**— पु. गाने का ढंग, स्वर। ಹಾಡುವ ಪದ್ಧತಿ, ಸ್ವರ, ಲಯ, ಶೈಲಿ.

**लहज़ा**— पु. क्षण। ಕ್ಷಣ, ಪಲ, ನಿಮಿಷ.

**लहनदार**— वि महाजन। ಸಾವುಕಾರ.

**लहना**— पु. पावना। ಬಡ್ಡಿಗೆ ಕೊಟ್ಟ ಹಣ. सक्रि. पाना। ದೊರಕಿಸು, ಗಳಿಸು, ಪಡೆ.

**लहबर**—पु चोगा, पताका। ನಿಲುವಂಗಿ, ನಿಶಾನೆ, ಬಾವುಟ.

**लहमा**— पु. क्षण, पल। ಕ್ಷಣ, ನಿಮಿಷ.

**लहर, लहरि**— स्त्री. तरंग, उमंग, झोंका, लपट, मौज। ಅಲೆ, ತೆರೆ, ಉತ್ಸಾಹ,

ಗಾಳಿಯ ತೆರೆ, ಜ್ವಾಲೆ, ಆನಂದ, ಉತ್ಸಾಹ, ಹುಮ್ಮಸು, ಮೋಜು, ಉಲ್ಲಾಸ

**लहरदार**– वि. वक्रगति से जानेवाला । ವಕ್ರಗತಿಯಿಂದ ಹೋಗುವ, ವಕ್ರವಾದ, ಡೊಂಕಾದ.

**लहरना**– अक्रि. दे. 'लहराना'।

**लहरपटोर**– पु. **लहरपटोरी**– स्त्री. लहरदार एक रेशमी कपड़ा । ಒಂದು ತರದ ರೇಷ್ಮೆ ಬಟ್ಟೆ.

**लहरा**– पु लहर, मौज । ತೆರೆ, ಅಲೆ, ಆನಂದ, ಮೋಜು, ಉಲ್ಲಾಸ.

**लहराना**– अक्रि झोंका खाना, तरंगित होना, हिलना, डोलना, शोभित होना, उल्लसित होना, टेढ़ा चलना। ಅಲ್ಲಾಡು, ತೆರೆಗಳೇಳು, ಅಲೆಹೊಡೆ, ಹೊಯ್ದಾಡು, ಬಳುಕು, ಅಲುಗಾಡು, ಶೋಭಿಸು, ಆನಂದಿತನಾಗು, ವಕ್ರವಾಗಿ ನಡೆ सक्रि. हिलाना, हिलकोरा देना, टेढ़ा चलना। ಅಲುಗಾಡಿಸು, ಅಲ್ಲಾಡಿಸು, ತೆರೆಗಳನ್ನೆಬ್ಬಿಸು, ಹೊಯ್ದಾಡಿಸು, ವಕ್ರವಾಗಿ ನಡೆಸು.

**लहरिया**–पु. टेढ़ीमेढ़ी लकीर, एक कपड़ा। ಅಂಕುಡೊಂಕ ಗೆರೆ, ಮುರಿಗೆಮುರಿಗೆಯಾದ ಗೆರೆ, ನಾಗಮುರಿಗೆಯಂತೆ ಗೆರೆಗಳುಳ್ಳ ಬಟ್ಟೆ. स्त्री. लहर । ಅಲೆ, ತೆರೆ.

**लहरी**– वि. मनमौजी । ಗಳಿಗೆಗೊಂದು ಬುದ್ಧಿಯವ, ಮನಸ್ಸಿಗೆ ಬಂದಂತೆ ನಡೆಯುವವ, ಉಲ್ಲಾಸಿ, ಚಲಚಿತ್ತದವ. स्त्री. लहर । ಅಲೆ, ತೆರೆ.

**लहलह, लहलहा**–वि हराभरा, प्रफुल्ल । ಹಸುರು ಮುರಿಯುವ, ಚಿಗುರೊಡೆದ, ಶೋಭಿಸುವ, ಪ್ರಫುಲ್ಲಿತ, ಆನಂದಿತ, ಹುಲುಸಾದ.

**लहलहाना**– अक्रि. हराभरा होना, पनपना, प्रसन्न होना। ಹಸುರು ಮುರಿ, ಚಿಗುರೊಡೆ, ನಳನಳಿಸು, ಬೆಳೆ, ಶೋಭಿಸು, ಸಂತುಷ್ಟನಾಗು, ಆನಂದಿತನಾಗು

**लहसुन**– पु. एक पौधा । ಬೆಳ್ಳುಳ್ಳಿ.

**लहसुनिया**– पु. एक मूल्यवान् पत्थर । ಒಂದು ತರದ ಬೆಲೆಯುಳ್ಳ ಹರಳು, ವೈಡೂರ್ಯ.

**लहा**– पु. दे. 'लाह'।

**लहाछेह**–पु नाच का एक ढंग। ಕುಣಿತದ ಒಂದು ಪದ್ಧತಿ.

**लहालह**– वि. दे. 'लहलहा'।

**लहालोट**– वि. विशेष हँसता हुआ, मोहित । ಬಹಳ ಆನಂದಿತನಾದ, ಉಲ್ಲಾಸ ಹೊಂದಿದ, ಮೋಹಿತ.

**लहास**– स्त्री. लाश । ಶವ, ಹೆಣ.

**लहासी**– स्त्री. जहाज या नाव बाधने की रस्सी । ನಾವೆ ಅಥವಾ ಹಡಗ ಕಟ್ಟುವ ಹಗ್ಗ.

**लहि**– क्रिवि. तक । ವರೆಗೆ, ತನಕ.

**लहु**– क्रिवि. दे 'लहि'। वि. लघु । ಚಿಕ್ಕ, ಸಣ್ಣ, ಕ್ಷುದ್ರ.

**लहुरा**– वि. छोटा । ಚಿಕ್ಕ, ಕಡಿಮೆ ತರಗತಿಯ, ಕಿರಿಯ.

लहू– पु रुधिर । ರಕ್ತ, ನೆತ್ತರು, ರುಧಿರ.

—लुहान होना = रुधिर से भर जाना। ರಕ್ತಮಯವಾಗು.

लहेरा–पु रेशम रँगनेवाला,लाख का काम करनेवाला । ರೇಷ್ಮೆಗೆ ಬಣ್ಣ ಹಾಕುವವ, ಅರಗಿನ ಕೆಲಸ ಮಾಡುವವ.

लॉक– स्त्री. हाल की कटी फसल, भूसी, कमर । ಸದ್ಯದಲ್ಲಿ ಕೊಯ್ದ ಬೆಳೆ, ಮೇವು, ಹೊಟ್ಟು, ಸೊಂಟ, ನಡು.

लाँग– स्त्री. काछ । ಕಚ್ಚೆ.

लाँगली– पु. सर्प, नारियल । ಸರ್ಪ, ಟೆಂಗಿನಕಾಯಿ.

लाँगुल, लॉगूल– पु पूँछ । ಬಾಲ.

लाँगूली– पु. बंदर । ಮಂಗ.

लांघना– सक्रि. पार करना । ದಾಟು, ಹಾರಿ ಹೋಗು, ಮೀರು, ಅತಿಕ್ರಮಿಸು, ಉಲ್ಲಂಘಿಸು.

लॉच– स्त्री घूस । ಲಂಚ, ಪರಿದಾನ.

लांछन– पु लांछना– स्त्री. कलंक, दोष, चिह्न । ಕಲಂಕ, ದೋಷ, ಚಿಹ್ನೆ, ಗುರುತು

लांबा– वि दे. 'लंबा'।

ला– अव्य. नही, बगैर । ಬೇಡ, ಹೊರ್ತಾಗಿ, ನಿಷೇಧಾತ್ಮಕ ಶಬ್ದ. (उदा·– ला-चार, ला-जवाब)

लाइ– स्त्री. आग । ಬೆಂಕಿ, ಅಗ್ನಿ.

लाइक– वि. दे. 'लायक'।

लाई– स्त्री. धान का लावा, चुगली । ಬತ್ತದ ಅರಳು, ಚಾಡಿ, ದೂರು.

लाऊ– पु कद्दू । ಕುಂಬಳಕಾಯಿ, ಸೋರೆಕಾಯಿ.

लाकडी, लाकरी– स्त्री. दे. 'लकड़ी'।

लाक्षणिक–वि लक्षण प्रकट करनेवाला । ಲಾಕ್ಷಣಿಕ, ಸಾಂಕೇತಿಕ, ಲಕ್ಷಣ ಪ್ರಕಟಿಸುವ.

लाक्षा– स्त्री लाख । ಅರಗು.

लाख– वि. सौ हजार । ಲಕ್ಷ. स्त्री. लाक्षा । ಅರಗು.

लाखना–सक्रि. लाख से छिद्र वंद करना, ताडना । ಅರಗು ಹಚ್ಚಿ ತೂತು ಮುಚ್ಚು, ತಿಳಿ, ಊಹಿಸು.

लाखपती– पु. दे. 'लखपती'।

लाखा– पु. लाख का बना हुआ रंग, गेहूँ का एक रोग । ಅರಗಿನಿಂದಾದ ಒಂದು ತರದ ಬಣ್ಣ, ಗೋದಿಯ ಒಂದು ರೋಗ.

लाखी– वि. लाख के रंग का । ಅರಗಿನ ಬಣ್ಣದ. पु. दे 'लखी'।

लाग– स्त्री. लगाव, संवंध, जोड़, प्रेम, होड, रसद, टोना, लगान, एक तरह का नाच । ಸಂಬಂಧ, ಹೊಂದಿಕೆ, ಕೂಡಿಕೆ, ಪ್ರೇಮ, ಸ್ನೇಹ, ಈರ್ಷೆ, ಮತ್ಸರ,ಸ್ಪರ್ಧೆ,ಆಹಾರ,ಅಡಿಗೆಯ ಸಾಮಾನು, ಜಾದು, ಮಾಟ, ತಂತ್ರ, ತೆರಿಗೆ, ಒಂದು ತರದ ಕುಣಿತ. अव्य. तक । ತನಕ,ವರೆಗೆ.

लागडॉट– स्त्री. दुश्मनी । ವೈರತ್ವ, ಶತೃತ್ವ, ವಿರೋಧ, ಹಗೆ, ಮತ್ಸರ.

लागत– स्त्री, तैयारी का व्यय । ಮೂಲ

ಖರ್ಚು, ಭಂಡವಲು, ವಸ್ತುವನ್ನು ತಯಾರಿಸುವ ಖರ್ಚು, ತಗಲುವಡಿ, ಲಾಗುವಡು.

लागना– सक्रि. दे 'लगना'।

लागि, लागे– अव्य लिये, कारण । ಸಲುವಾಗಿ, ಕಾರಣದಿಂದ. क्रिवि. पर्यंत, तक । ವರೆಗೆ, ತನಕ.

लागू– वि लगने योग्य । ಯುಕ್ತ, ಹೊಂದಿಕೆಯಾಗುವ, ಯೋಗ್ಯ, ಅಂಟಿಕೊಳ್ಳುವ, ಸಂಬಂಧಿಸುವ.

लागे– अव्य दे 'लागि'।

लाघव– पु. लघुता, फुर्ती । ಲಘುತ್ವ, ಹಗುರತನ, ಚಪಲತೆ, ಚುರುಕುತನ.

लाचार– वि. विवश । ನಿಸ್ಸಹಾಯ, ದಿಕ್ಕಿಲ್ಲದ, ಗತಿಯಿಲ್ಲದ, ನಿರ್ಬಂಧಿತ.

लाचारी–स्त्री. विवशता। ನಿಸ್ಸಹಾಯತೆ, ನಿರ್ಬಂಧ, ದಿಕ್ಕಿಲ್ಲದಿರುವಿಕೆ, ಅನಿವಾರ್ಯತೆ.

लाछन– पु. दे 'लाछन'।

लाछी– स्त्री. लक्ष्मी । ಲಕ್ಷ್ಮಿ.

लाज– स्त्री. शर्म, प्रतिष्ठा, आबरू। ನಾಚಿಕೆ, ಪ್ರತಿಷ್ಠೆ, ಗೌರವ, ಮಾನ. पु. धान का लावा । ಅರಳು.

लाजक– पु. धान का लावा । ಅರಳು.

लाजना–अक्रि लज्जित होना । ನಾಚು, ಲಜ್ಜಿತನಾಗು.

लाजवंती–स्त्री लाजालू नाम का पौधा। ಮುಟ್ಟಿದರೆ ಮುನಿ, ನಾಚಿಕೆ ಬಳ್ಳಿ.

लाजवाब–वि निरुत्तर, बेजोड़ । ನಿರುತ್ತರ, ಅನುಪಮ, ಈಡಿಲ್ಲದ, ಸಾಟಿಯಿಲ್ಲದ.

लाज़िम, लाज़िमी– वि. आवश्यक, जरूरी, अनिवार्य, उचित । ಅವಶ್ಯವಾದ, ಅಗತ್ಯದ, ಅನಿವಾರ್ಯ, ಕಡ್ಡಾಯದ, ಉಚಿತ, ಯೋಗ್ಯ.

लाट– स्त्री ऊँचा तथा मोटा खंभा । ಎತ್ತರವಾದ ಸ್ತಂಭ. पु एक देश, गवर्नर। ಒಂದು ದೇಶ, ಗವರ್ನರ. बडा लाट= गवर्नर जनरल् । ಗವರ್ನರ ಜನರಲ್.

लाठ– स्त्री दे 'लाट'।

लाठी– स्त्री. सोटा, डंडा । ಕಟ್ಟಿಗೆ, ಕೋಲು, ಬಡಿಗೆ, ಲಾಠಿ, ದೊಣ್ಣೆ.

—चलाना = लाठी से मारपीट करना। ಕಟ್ಟಿಗೆಯಿಂದ ಹೊಡೆದಾಡು.

लाड– पु. दुलार, प्यार । ಪ್ರೀತಿ, ಮುದ್ದು, ಲಲ್ಲೆ.

लाड़लड़ैता, लाडला– वि. दुलारा । ಪ್ರೀತಿಯ, ಮುದ್ದಿನ, ಅಧಿಕ ಪ್ರಿಯವಾದ.

लाडू– पु दे 'लड्डू'।

लात–स्त्री. चरण, चरण-प्रहार । ಕಾಲು, ಪಾದ, ಕಾಲಿನ ಒದೆತ, ಪಾದ ಪ್ರಹಾರ.

—मारना = तुच्छ जानकर छोड देना। ತುಚ್ಛವೆಂದು ತ್ಯಜಿಸು.

लाद– स्त्री लादने की क्रिया, पेट, अँतड़ी । ಹೇರುವಿಕೆ, ಹೊಟ್ಟೆ, ಕರುಳು.

लादना– सक्रि बोझा भरना, पीठपर उठा लेना। ಹೇರು, ಹೊರಿಸು.

लादावा– वि जिसका कोई दावा स्वत्व या अधिकार न रह गया हो। ಅಧಿಕಾರವಿಲ್ಲದ,ಹಕ್ಕಿಲ್ಲದ. पु वह जिसने अपना दावा या स्वत्व हटा लिया हो, वह पत्र या लेख जिसके अनुसार किसी पदार्थपर का स्वत्व हटा लिया जाय। ಹಕ್ಕನ್ನು ತೊರೆದವ, ಅಧಿಕಾರ ಅಥವಾ ಹಕ್ಕನ್ನು ತೊರೆದ ಪತ್ರ, ಬಿಡುಗಡೆ ಪತ್ರ.

लादिया– पु. बोझ लादनेवाला। ಹೇರುವವ.

लादी– स्त्री पशुपर लादी गयी गठरी। ಪಶುಗಳ ಮೇಲೆ ಹೇರಿದ ಗಂಟು, ಮೂಟೆ.

लादू– वि. बोझ ढोनेवाला। ಭಾರ ಹೊರುವವ.

लाधना– सक्रि पाना। ದೊರಕಿಸು.

लानत– स्त्री धिक्कार, भर्त्सना। ಧಿಃಕಾರ, ತಿರಸ್ಕಾರ, ಮೂದಲಿಕೆ.

लाना– सक्रि ले आना, पेश करना, लगाना, जलाना। ತರು, ತೆಗೆದುಕೊಂಡು ಬರು, ಮುಂದಿಡು, ಹಾಜರಪಡಿಸು, ಹಚ್ಚು, ಬೆಂಕಿ ಹಚ್ಚು, ಸುಡು.

लाने–क्रिवि लिये। ಸಲುವಾಗಿ,ಓಸ್ಕರ.

लापता– वि गायब। ಓಡಿಹೋದ, ಪರಾರಿಯಾದ, ಪತ್ತೆಯಿಲ್ಲದ,ಮರೆಯಾದ, ಮೋರೆ ತಪ್ಪಿಸಿಕೊಂಡ.

लापरवा, लापरवाह– वि. असावधान, बेफिक्र। ಎಚ್ಚರಗೇಡಿ, ಅಜಾಗರೂಕ, ನಿಶ್ಚಿಂತ, ಪರಿವೆಯಿಲ್ಲದ.

लापरवाही– स्त्री. असावधानता। ಅಜಾಗರೂಕತೆ, ನಿಶ್ಚಿಂತತೆ, ಅಲಕ್ಷ್ಯ, ದುರ್ಲಕ್ಷ್ಯ.

लापसी– स्त्री. दे. ‘लपसी’।

लाबर– वि. दे. ‘लबार’।

लाभ– पु. फायदा, व्याज। ಲಾಭ, ಉಳಿತಾಯ, ಪ್ರಾಪ್ತಿ, ಫಲ,ಬಡ್ಡಿ.

लाभकारी, लाभदायक– वि फायदेमंद फलप्रद। ಲಾಭಕಾರಕ, ಫಲಕಾರಕ, ಪರಿಣಾಮಕಾರಕ.

लाम– स्त्री सेना, बहुत से लोगों का झुंड। ಪಡೆ, ದಲ, ಸೈನ್ಯ, ಗುಂಪು, ತಂಡ, ಸಮೂಹ.

लामज– पु एक घास। ಲಾಮಂಚದಂಥ ಒಂದು ಹುಲ್ಲು.

लामन–पु लटकना। ಜೋಲಾಡುವಿಕೆ, ಓಲಾಡುವಿಕೆ.

लामा– वि. लंबा। ಉದ್ದ. पु तिब्बत के बौद्धों का आचार्य। ತಿಬೇಟದ ಬೌದ್ಧರ ಗುರು.

लाय– स्त्री. अग्नि, ज्वाला। ಅಗ್ನಿ, ಜ್ವಾಲೆ.

लायक़– वि. योग्य, उचित। ಯೋಗ್ಯ, ಸಮರ್ಥ, ಅರ್ಹ, ಉಚಿತ.

लायकियत, लायकी– स्त्री योग्यता। ಯೋಗ್ಯತೆ, ಅರ್ಹತೆ.

लायची– स्त्री. दे. ‘इलायची’।

लार–स्त्री. लसदार थूक, पंक्ति। ಜೊಲ್ಲು, ಜಿಗುಟಾದ ಉಗುಳು, ಪಂಕ್ತಿ, ಸಾಲು. क्रिवि साथ, पीछे। ನಂಗಡ, ಹಿಂದೆ.

लाल– पु. पुत्र, माणिक्य । ಮಗು, ಮಗುವನ್ನು ಸಂಬೋಧಿಸುವ ಪ್ರೀತಿಯ ಶಬ್ದ, ಮಾಣಿಕ. स्त्री लार, इच्छा । ಜೊಲ್ಲು, ಇಚ್ಛೆ. वि. सुर्ख, अति क्रुद्ध, वह जो खेल में सब से पहले जीत गया हो । ಕೆಂಪು, ಕೆಂಪಾದ, ಬಹಳ ಕ್ರುದ್ಧನಾದ, ಆಟದಲ್ಲಿ ಎಲ್ಲರ್ಕ್ಕೂ ಮೊದಲು ಗೆದ್ದವ. —पीले होना = क्रोध करना । ಸಿಟ್ಟಿಗೇಳು, ಕ್ರೋಧಿತನಾಗು.

लालच– पु. लोभ, तृष्णा । ಲೋಭ, ಆಶೆ, ತೃಷ್ಣೆ, ಅತ್ಯಾಶೆ.

लालचहा, लालची– वि लोभी । ಲೋಭಿ, ಆಶೆಬುರುಕ.

लालटेन– स्त्री दीपक विशेष । ಕಂದೀಲು, ಲಾಂದ್ರ.

लालन– पु. दुलार, प्यार, प्रिय पुत्र । ಪ್ರೀತಿ, ಮುದ್ದಾಟ, ಪ್ರೇಮ, ಲಲ್ಲೆ, ಪ್ರಿಯಪುತ್ರ, ಮುದ್ದುಮಗ.

लालना–सक्रि. प्यार करना । ಪ್ರೀತಿಸು, ಮುದ್ದಿಸು, ಲಲ್ಲೆಮಾಡು.

लालबुझक्कड– पु हर बात में अटकल लगाकर बुद्धिमान् बननेवाला । ಪ್ರತಿಯೊಂದು ವಿಷಯದಲ್ಲಿ ಬಾಯಿ ಹಾಕಿ ತಾನು ಬುದ್ಧಿವಂತನೆಂದು ತೋರಿಸುವವ, ಎಲ್ಲ ತಿಳಿದವನೆಂದು ಭಾವಿಸುವವ.

लालमिर्च– स्त्री. मिरचा । ಮೆಣಸಿನ ಕಾಯಿ.

लालस–पु. लालसा– स्त्री. उत्कट अभिलाषा, उत्सुकता । ಉತ್ಕಟ ಇಚ್ಛೆ, ಬಯಕೆ, ಲಾಲಸೆ, ಉತ್ಸುಕತೆ, ಪ್ರಬಲ ಇಚ್ಛೆ, ಹಂಬಲ.

लालसिखा, लालसिखी– पु मुर्गा । ಹುಂಜ.

लालसी–वि उत्सुक, इच्छुक। ಉತ್ಸುಕ, ಇಚ್ಛೆಯುಳ್ಳ, ಆಸೆಯುಳ್ಳ, ಆತುರ.

लाला– पु. वैश्य, कायस्थ, देवर तथा बच्चों के लिये आदर सूचक संबोधन । ವೈಶ್ಯ, ಕಾಯಸ್ಥ, ಭಾವ ಮೈದುನ ಹಾಗೂ ಪ್ರಿಯ ಮಕ್ಕಳಿಗಾಗಿ ಪ್ರೇಮದ ಸಂಬೋಧನ ಶಬ್ದ. स्त्री. लार । ಜೊಲ್ಲು, ಉಗುಳು.

लालायित– वि ललचाया हुआ। ಲವಲವಿಸುವ, ಆಶೆಪಡುವ.

लालित– वि पालित, दुलारा। ಪಾಲನೆ ಮಾಡಿದ, ಲಾಲಿಸಿದ, ಪ್ರಿಯ, ಮುದ್ದು.

लालित्य– पु सुंदरता । ಸೌಂದರ್ಯ.

लालिमा, लाली– स्त्री सुर्खी, लाली । ಕೆಂಬಣ್ಣ, ಹೊಂಬಣ್ಣ.

लाली– स्त्री लालिमा, प्रतिष्ठा, लाडली लड़की । ಕೆಂಬಣ್ಣ, ಕೆಂಪು, ಗೌರವ, ಮಾನ, ಪ್ರತಿಷ್ಠೆ, ಮುದ್ದುಮಗಳು.

लाले, लालो– पु. अरमान, लालसा। ಅಭಿಲಾಷೆ, ಇಚ್ಛೆ, ಲವಲವಿಕೆ.

ಹಂಬಲ.

—पडना = किसी वस्तु के लिये बडी आकाक्षा होना, आफत में पडना । ಯಾವದೊಂದು ವಸ್ತುವಿಗಾಗಿ ಬಹಳ ಚಡಪಡಿಸು, ಆಶೆಪಡು, ಸಂಕಟದಲ್ಲಿ ಬೀಳು.

लाव–स्त्री. आग, रस्सी । ಬೆಂಕಿ,ಅಗ್ನಿ, ಹಗ್ಗ ಪು. लावा नामक पक्षी । ಲಾವಕ್ಕಿ.

लावण्य– पु. सुदरता । ಸೌಂದರ್ಯ, ಲಾವಣ್ಯ, ಸೊಬಗು.

लावदार–पु तोप छोडनेवाला । ತುಪಾಕಿಯುವ, ತೋಫು ಹಾರಿಸುವವ.

लावना–स क्रि. लाना, लगाना, जलाना । ತರು, ಹಚ್ಚು, ಲೇಪಿಸು, ಸುಡು, ಹೊತ್ತಿಸು.

लावनता, लावनि– स्त्री. सुंदरता । ಲಾವಣ್ಯ, ಸೌಂದರ್ಯ.

लावनी– स्त्री एक तरह का गाना । ಲಾವಣೀ ಪದ, ಗೀಗೀ ಹಾಡು.

लावलश्कर– पु. सेना और उस के साथ रहनेवाले लोग तथा सामग्री । ಸೇನೆ, ಸೇನೆಯ ಸಂಗಡ ಇರುವ ಜನರು ಹಾಗೂ ಸಾಮಗ್ರಿ.

लावल्द–वि. नि संतान । ನಿಃಸಂತಾನ, ಮಕ್ಕಳಿಲ್ಲದ.

लावल्दी– स्त्री. नि.संतान होने की अवस्था । ಮಕ್ಕಳಿಲ್ಲದಿರುವಿಕೆ, ನಿಃಸಂತಾನತೆ.

लावा–पु. भूना हुआ धान ज्वार आदि, लवा पक्षी । ಅರಳು,ಪುರಿ, ಲಾವಕ್ಕಿ.

लावारिस– वि जिसका कोई वारस न हो । ವಾರಸುದಾರರಿಲ್ಲದ, ನಿಸ್ಸಂತಾನ.

लाश– स्त्री. शव । ಶವ, ಹೆಣ.

लास– पु नृत्य विशेष, मटक, रस । ಒಂದು ತರದ ನೃತ್ಯ, ಕುಣಿತ, ಬೆಡಗು, ಮುರುಕ, ರಸ

लासा– पु. लुआब । ಜಿಗುಟು ಪದಾರ್ಥ, ಅಂಟು, ಸರಿ, ಗೋಂದು.

लासानी– वि बेजोड । ಅದ್ವಿತೀಯ, ಅಸದೃಶ.

लासि, लास्य– पु नृत्य विशेप । ಒಂದು ತರದ ನೃತ್ಯ.

लाह– पु. लाभ । ಲಾಭ. स्त्री. लाख, कांति । ಅರಗು, ಕಾಂತಿ, ಶೋಭೆ.

लाही– वि. लाख के रंग का । ಅರಗಿನ ಬಣ್ಣದ. स्त्री सरसों, लाख बनानेवाला कीडा । ಸಾಸಿವೆ, ಅರಗಿನ ಹುಳು.

ला-हौल–अव्य 'लाहौल वला कूवत इल्ला व इल्लाह' का संक्षिप्त रूप जिसका अर्थ है– ईश्वर के सिवा और कोई शक्ति नही है । इसका प्रयोग तिरस्कार सूचित करने या भूत-प्रेत आदि दुष्ट आत्माओं को भगाने के लिये किया जाता है । ಒಂದು ಅರಬ್ಬೀ ವಚನದ ಮೊದಲನೆಯ ಶಬ್ದ, ಇದರ ಪ್ರಯೋಗವು ತಿರಸ್ಕಾರ ಸೂಚನೆಗಾಗಿ ಅಥವಾ

ಭೂತಪ್ರೇತಗಳನ್ನು ಹೋಗಲಾಡಿಸುವದರ ಸಲುವಾಗಿ ಮಾಡಲ್ಪಡುತ್ತದೆ.

**लिंग**– पु. शिवमूर्ति, पुरुषचिह्न, लक्षण। ಶಿವಮೂರ್ತಿ, ಲಿಂಗ, ಪುರುಷಚಿಹ್ನೆ, ಲಕ್ಷಣ.

**लिक्खाड**– पु. भारी लेखक (व्यंग में)। ದೊಡ್ಡ ಲೇಖಕ (ವ್ಯಂಗಾರ್ಥದಲ್ಲಿ).

**लिखत**– स्त्री. लिखित पत्र, लिखित विषय। ದಸ್ತೈವಜು, ಕಾಗದಪತ್ರ, ಬರೆದ ವಿಷಯ.

**लिखन**–स्त्री. होनी, लिखावट। ಭಾಗ್ಯ, ಹಣೆಬರಹ, ಬರವಣಿಗೆ.

**लिखना**– सक्रि. चिह्नित करना, अंकित करना, लिपिबद्ध करना। ಚಿಹ್ನೆ ಹಾಕು, ಬರೆ, ಚಿತ್ರಿಸು.

**लिखनी**– स्त्री लेखनी। ಲೆಕ್ಕಣಿಕೆ.

**लिखवाई**– स्त्री. दे. 'लिखाई'।

**लिखवाना**–सक्रि लिखनेका काम दूसरे से कराना। ಬರೆಯಿಸು.

**लिखा**– वि. लिखा हुआ। ಬರೆದ, ಲಿಖಿತ. पु भाग्य। ಭಾಗ್ಯ, ವಿಧಿ, ಹಣೆಬರಹ.

**लिखाई**– स्त्री. लिखावट, लिपि, लेखन व्यय। ಬರವಣಿಗೆ, ಬರಹ, ಲಿಪಿ, ಲೇಖನ ಖರ್ಚು.

**लिखाना**–सक्रि दूसरेसे लिखने का काम कराना। ಬರೆಯಿಸು.

**लिखापढ़ी**– स्त्री. पत्रव्यवहार, किसी विषय को कागज पर लिखकर पक्का करना। ಪತ್ರ ವ್ಯವಹಾರ, ಕಾಗದ ಪತ್ರ ಮಾಡು.

**लिखावट**– स्त्री. लिखने का ढंग। ಬರವಣಿಗೆ, ಬರಹ, ಶಾಸನ, ಲೇಖ.

**लिखित**– वि. लिखा हुआ। ಬರೆದ, ಲಿಖಿತ.

**लिखेरा**– पु. लिखनेवाला। ಬರೆಯುವವ, ಲೇಖಕ.

**लिटाना**– सक्रि सुलाना। ಮಲಗಿಸು, ಒರಗಿಸು.

**लिट्ट**– पु. बाटी। ಕೆಂಡದಲ್ಲಿ ಸುಟ್ಟ ರೊಟ್ಟಿ.

**लिड़ार**–वि. डरपोक। ಅಂಜುಬುರುಕ, ಹೇಡಿ. पु गीदड। ನರಿ.

**लिपटना**– अक्रि. चिपकना, सट जाना, आलिंगन करना। ಅಂಟಿಕೊಳ್ಳು, ಹತ್ತಿಕೊಳ್ಳು, ಸುತ್ತು, ಹೊಂದಿಕೆಯಾಗು, ಕವಿ, ಮಗ್ನನಾಗು, ತೊಡಗು, ಆಲಿಂಗಿಸು, ತಬ್ಬು.

**लिपटाना**– सक्रि संलग्न करना, गले लगाना। ಜೋಡಿಸು, ಅಂಟಿಸು, ಹೊಂದಿಸು, ಆಲಿಂಗಿಸು.

**लिपड़ा**– वि चिपचिपा। ಜಿಗುಟಾದ, ಅಂಟಾದ. पु. कपड़ा। ಬಟ್ಟೆ, ವಸ್ತ್ರ.

**लिपना**–अक्रि. गोबर आदि पुता जाना। ಲೇಪಿಸಲ್ಪಡು, ಸಾರಿಸಲ್ಪಡು, ಸವರಲ್ಪಡು, ಮೆತ್ತಲ್ಪಡು.

**लिपवाना, लिपाना**– सक्रि लेप कराना, पुताना। ಲೇಪಿಸುವ ಅಥವಾ ಸಾರಿ

ಸುವ ಕೆಲಸ ಮಾಡಿಸು.

लिपाई– स्त्री लिपने की क्रिया या मजदूरी। ಸಾರಣೆ, ಕಾರಣೆ, ಲೇಪಿಸುವಿಕೆ, ಸವರುವಿಕೆ, ಮೆತ್ತುವಿಕೆ, ಬಳೆಯುವ ಅಥವಾ ಮೆತ್ತುವ ಕೆಲಸದ ಕೂಲಿ.

लिपाना– सक्रि दे 'लिपवाना'।

लिपि– स्त्री. लिखावट। ಬರಹ, ಲಿಪಿ, ಅಕ್ಷರ.

लिपिवद्ध– वि जो लिखा हुआ हो। ಬರೆದ, ಲಿಖಿತ.

लिप्त– वि. पोता हुआ, तत्पर, लीन। ಲಿಪ್ತ, ಸಾರಿಸಿದ, ಸವರಿದ, ಬಳೆದ, ತತ್ಪರ, ಮಗ್ನ.

लिप्सा– स्त्री. लालच, पाने की इच्छा। ಆಶೆ, ಲೋಭ.

लिफाफा– पु कागज की थैली, बाहरी तडक-भडक, जल्दी खराब होनेवाली वस्तु। ಪಾಕೀಟು, ಆಡಂಬರ, ಬೇಗನೆ ನಾಶವಾಗುವ ವಸ್ತು.

लिवास– पु पोशाक। ಉಡುಪು, ಬಟ್ಟೆ ಬರೆ, ಪೋಷಾಕು.

लिवासी–वि नकली, जाली। ವೇಷದ, ಕಪಟ, ಸುಳ್ಳು, ಕೃತ್ರಿಮ, ತೋರಿಕೆಯ

लियाक़त– स्त्री. योग्यता, सामर्थ्य। ಯೋಗ್ಯತೆ, ಸಾಮರ್ಥ್ಯ. ಅರ್ಹತೆ.

लिये– क्रिवि. वास्ते। ಸಲುವಾಗಿ.

लिलाट, लिलार– पु दे. 'ललाट'।

लिल्लाह– अव्य ईश्वर के लिये, खुदा के नामपर। ದೇವರಿಗಾಗಿ, ದೇವರ ಹೆಸರಿನಲ್ಲಿ.

लिवाना– सक्रि. लेने या लाने का काम दूसरे से कराना, साथ मे लाना। ಗ್ರಹಣ ಮಾಡಿಸು, ತರಿಸು, ಸಂಗಡ ಕರಕೊಂಡು ಬಾ.

लिवाल–पु लेनेवाला। ತೆಗೆದುಕೊಳ್ಳುವವ, ಕೊಂಡುಕೊಳ್ಳುವವ.

लिहाज़– पु. संकोच, मुरव्वत, पक्षपात, कृपादृष्टि। ಸಂಕೋಚ, ಭಿಡೆ, ನಾಚಿಕೆ, ಮಾನ, ಮರ್ಯಾದೆ, ಪಕ್ಷಪಾತ, ಕೃಪಾದೃಷ್ಟಿ, ಲಕ್ಷ್ಯ.

लिहाडा–वि पतित, नीच। ಪತಿತ, ನೀಚ, ಕ್ಷುದ್ರ, ಹೀನ, ಅಧಮ.

लिहाडी– स्त्री निंदा, उपहास। ನಿಂದೆ, ಹೀನಾಯ.

लिहाफ़– पु रजाई। ಅರಳೆ ಹಾಕಿದ ಹೊದಿಕೆ, ರಜಾಯಿ, ಕವುದಿ

लिहित– वि. चाटता हुआ। ನೆಕ್ಕುತ್ತಿರುವ.

लीक– स्त्री लकीर, पहिये का निशाना, रीति, यश, मर्यादा, सीमा, गणना। ಗೀರು, ರೇಖೆ, ಗೆರೆ, ಸಾಲು, ಗಾಲಿಯ ಗೆರೆ, ಚಿಹ್ನೆ, ಗುರುತು, ರೀತಿ, ಪದ್ಧತಿ, ರೂಢಿ, ಯಶ, ಪ್ರತಿಷ್ಠೆ, ಮರ್ಯಾದೆ, ಸೀಮೆ, ಗಣನೆ, ಸಂಖ್ಯೆ.

—पीटना = प्रचलित प्रथा के अनुसार चलना। ರೂಢಿಯಂತೆ ನಡೆ.

लीख– स्त्री जूं का अंडा। ಹೇನಿನ ತತ್ತಿ, ಕೂರೆ, ಸೀರು.

लीचड, लीचर– वि निकम्मा, चिपटने वाला, सुस्त । ಕೆಲಸಕ್ಕೆ ಬಾರದ, ಅಂಟಿಕೊಳ್ಳುವ, ಜಿಗುಟಾದ, ಆಲಸಿ, ಪೈ ಗಳ್ಳ, ಕೊಡಕೊಳ್ಳುವ ವ್ಯವಹಾರದಲ್ಲಿ ಅವ್ಯವಸ್ಥಿತ.

लीची– स्त्री एक मीठा फल। ಒಂದು ಹಣ್ಣು.

लीझी–वि. निःसार, बेकाम। ನಿಸ್ಸಾರ, ನಿರುಪಯೋಗಿ. स्त्री देहका मैल। ದೇಹದ ಕೊಳೆ.

लीद– स्त्री घोडे आदि की विष्टा। ಲದ್ದಿ.

लीन– वि. तन्मय। ಮಗ್ನ, ತನ್ಮಯ, ಆಸಕ್ತ.

लीपना– सक्रि. पोतना। ಸಾರಿಸು, ಲೇಪಿಸು, ಮೆತ್ತು, ಬಳಿ.

**लीप पोतकर बराबर करना** = पूर्ण रूप से नष्ट करना । ಪೂರ್ಣವಾಗಿ ಹಾಳು ಮಾಡು,ಮಣ್ಣು ಗೂಡಿಸು

लीबर– वि. गंदा। ಹೊಲಸಾದ.

लीमू– पु निंबू। ನಿಂಬೆ ಹಣ್ಣು.

लीर– स्त्री धज्जी, पतला किनारा। ಚಿಂದಿ, ಬಟ್ಟೆಯ ಚೂರು,ಅಂಚಿನ ತುಣುಕು.

लील– वि नीला। ನೀಲ ವರ್ಣದ. पु नील। ನೀಲಿ.

लीलना– सक्रि निगलना। ನುಂಗು

लीलया,लीलहिं–क्रिवि खेल की तरह। ಆಟದಂತೆ.

लीला–स्त्री. खेल, चरित्र, विचित्र कार्य। ಆಟ, ಕ್ರೀಡೆ, ಚರಿತ್ರ, ಲೀಲೆ, ವಿಚಿತ್ರ ಕಾರ್ಯ, ಅಭಿನಯ. वि नीला। ನೀಲಿ ಬಣ್ಣದ. पु. काला घोडा। ಕರಿಯ ಬಣ್ಣದ ಕುದುರೆ.

लुँगाडा– पु. आवारा, लफंगा। ತುಂಟ, ಪಟಿಂಗ, ಕಾಮುಕ.

लुंगी–स्त्री छोटी धोती। ಲುಂಗಿ,ದಟ್ಟಿ.

लुंचन– पु नोचना, उखाडना। ಕಿತ್ತುವಿಕೆ, ಕೀಳುವಿಕೆ.

लुंज– वि. लूला, टूंठ। ಕೈ ಇಲ್ಲದವ, ಮೋಟುಮರ.

लुंठन– पु. चोरी। ಕಳವು, ಸುಲಿಗೆ.

लुंड– पु. रुंड, चोर। ತಲೆಯಿಲ್ಲದ ಧಡ, ಕಳ್ಳ.

लुंडमुंड– वि. हस्तपादहीन, पत्रहीन। ಕೈ ಕಾಲುಗಳಿಲ್ಲದ, ಎಲೆಗಳಿಲ್ಲದ.

लुंडा– वि जिसकी पूंछ और पर झड गये हों। ರೆಕ್ಕೆಗಳಿಲ್ಲದ, ಪಕ್ಕಗಳು ಉದುರಿ ಹೋದ पु. लपेटे हुए सूत इत्यादि की पिंडी। ದಾರದ ಉಂಡೆ.

लुआठ, लुआठा–पु. जलती हुयी लकड़ी, अधजली लकड़ी। ಉರಿಯುವ ಕಟ್ಟಿಗೆ, ಕೊಳ್ಳಿ, ಅರ್ಧಸುಟ್ಟ ಕಟ್ಟಿಗೆ.

लुआठी– स्त्री दे. ‘ लुआठा ’।

लुआब– पु लासा, लसदार गूदा। ಜಿಗುಟು ಪದಾರ್ಥ, ಅಂಟು, ಸರಿ.

लुक– पु वार्निश, लौ। ವಾರ್ನಿಸು, ಜ್ವಾಲೆ.

लुकठी– स्त्री. दे. ‘ लुआठी ’।

लुकना– अक्रि. छिपना। ಅಡಗು,ಮರೆ

ಯಾಗು.

लुक़मा– पु कौर। ತುತ್ತು, ಗ್ರಾಸ, ಕವಳ.

लुकाना– सक्रि छिपाना। ಅಡಗಿಸು, ಬಚ್ಚಿಡು. अक्रि दे. 'लुकना'।

लुकार– स्त्री. अग्नि। ಅಗ್ನಿ.

लुकोना– सक्रि छिपाना। ಅಡಗಿಸು, ಬಚ್ಚಿಡು, ಮುಚ್ಚಿಡು.

लुखिया–स्त्री. धूर्त स्त्री, वेश्या। ಧೂರ್ತ ಸ್ತ್ರೀ,ಮೋಸಗಾರತಿ, ವೇಶ್ಯೆ,ಸೂಳೆ.

लुगत– स्त्री शब्दकोष। ಶಬ್ದಕೋಷ, ನಿಘಂಟು.

लुगदा– पु लुगदी–स्त्री. गीली वस्तु का लोंदा। ಹಸಿ ವಸ್ತುವಿನ ಮುದ್ದೆ, ಪಿಂಡ.

लुगरा– पु. वस्त्र, कपड़ा, फटा पुराना वस्त्र। ವಸ್ತ್ರ, ಬಟ್ಟೆ, ಹರಿದ ಬಟ್ಟೆ, ಚಿಂದಿ. वि चुगलख़ोर। ಚಾಡೀ ಹೇಳುವವ.

लुगरी– स्त्री. फटी धोती, चुगली। ಹರಿದ ಧೋತರ, ಚಾಡಿ, ನಿಂದೆ.

लुगाई– स्त्री. स्त्री. पत्नी। ಸ್ತ್ರೀ, ಹೆಂಡತಿ.

लुगी– स्त्री. पुराना वस्त्र। ಹಳೆಯ ಬಟ್ಟೆ.

लुग्गा– पु. कपड़ा। ಬಟ್ಟೆ, ಅರಿವೆ, ವಸ್ತ್ರ.

लुचकना– सक्रि. झटके से छीन लेना। ವೇಗದಿಂದ ಸೆಳೆದುಕೊಳ್ಳು.

लुचरी, लुचुई– स्त्री. मैदे की पतली पूरी। ಮೈದಾ ಹಿಟ್ಟಿನ ಪುರಿ.

लुच्चा– वि. बदमाश, पाजी। ದುಷ್ಟ, ನೀಚ, ಪುಂಡ, ಪೋಕರಿ, ಠಕ್ಕ.

लुटंत– स्त्री. लूट। ಕೊಳ್ಳೆ, ಸುಲಿಗೆ.

लुटकना– अक्रि. दे 'लटकना'।

लुटना– अक्रि. लूटा जाना, बरबाद होना।ಕಳುವಾಗು,ಸುಲಿಗೆಯಾಗು, ಕೊಳ್ಳೆಹೋಗು, ದರೋಡೆಯಾಗು, ಹಾಳಾಗು.

लुटवाना– सक्रि दे 'लुटाना'।

लुटाना– सक्रि. लूटने देना, उड़ाना। ಕೊಳ್ಳೆ ಹೊಡಿಸು, ಸುಲಿಸು, ಹಾಳು ಮಾಡು, ಪುಕ್ಕಟೆ ಕೊಡು.

लुटावना– सक्रि. दे. 'लुटाना'।

लुटिया– स्त्री. छोटा लोटा। ಚಿಕ್ಕ ಪಾತ್ರೆ, ಚಿಂಬು.

लुटेरा– पु लूटनेवाला। ಕೊಳ್ಳೆ ಹೊಡೆಯುವವ, ದರೋಡೆಖೋರ, ಸುಲಿಗೆಗಾರ.

लुठना– अक्रि. लोटना, लुढकना। ನೆಲದ ಮೇಲೆ ಮಲಗು, ಹೊರಳಾಡು, ಉರುಳಾಡು.

लुठाना– सक्रि. लोटाना, लुठकाना। ಹೊರಳಾಡಿಸು, ಉರುಳಾಡಿಸು.

लुड़कना, लुढ़कना, लुढना– अक्रि. गेंद की तरह भूमिपर चक्कर खाना, ढुलकना। ಹೊರಳಾಡು, ಉರುಳಾಡು, ಜಾರು, ದಿಂಡುರುಳು, ಮಗುಚು, ಬೀಳು.

लुढ़काना, लुढाना– सक्रि ढुलकाना। ಉರುಳಿಸು, ಹೊರಳಿಸು, ಕೆಡಹು,

ಜಾರುವಂತೆ ನೂಕು.

लुढियाना–सक्रि गोल तुरपना । ಅಂಚು ಮಡಿಸಿ ಹೊಲಿ, ತಿಬ್ಬಿ ಹೊಲಿ.

लुतरा–वि चुगलखोर, शरारती । ಚಾಡಿ ಖೋರ, ನಿಂದೆ, ಮಾಡುವವ, ದುಷ್ಟ, ನೀಚ.

लुत्थ– स्त्री. दे. 'लोथ'।

लुत्फ–पु मजा, आनंद, स्वाद, अनुग्रह । ಆನಂದ, ಸೊಗಸು, ರುಚಿ, ಸ್ವಾದ, ಅನುಗ್ರಹ, ಕೃಪೆ, ದಯೆ.

लुनना– सक्रि. फसल काटना, हटाना । ಬೆಳೆ ಕೊಯ್ಯು, ದೂರೀಕರಿಸು, ನಾಶ ಮಾಡು.

लुनाई– स्त्री. सुंदरता । ಸೌಂದರ್ಯ, ಲಾವಣ್ಯ.

लुनेरा– पु फसल काटनेवाला । ಬೆಳೆ ಕೊಯ್ಯುವವ.

लुपना– अक्रि. छिपना । ಅಡಗು, ಮರೆಯಾಗು.

लुप्त– वि. गुप्त, नष्ट । ಗುಪ್ತ, ಮರೆಯಾದ, ಹಾಳಾದ, ನಷ್ಟವಾದ.

लुबरी– स्त्री. तलछट । ಗಸಿ, ಚರಟ, ರಾಡಿ.

लुबुद, लुब्ध–वि. मोहित । ಮೋಹಿತ, ಲೋಭಿ.

लुब्धक– पु व्याध, बहेलिया, लम्पट, एक नक्षत्र । ಬೇಡ, ಬಲೆಗಾರ, ಕಾಮುಕ, ಫಟಿಂಗ, ಒಂದು ನಕ್ಷತ್ರ.

लुब्बेलुबाब– पु. साराश । ಸಾರಾಂಶ, ಸಾರ, ತತ್ವ.

लुभाना–सक्रि लुब्ध करना, बहकाना । ಎಳೆ, ಆಕರ್ಷಿಸು, ಮೋಹಿತಗೊಳಿಸು, ಮರಳು ಮಾಡು, ಪುಸಲಾಯಿಸು, ಆಶೆ ಹುಟ್ಟಿಸು. अक्रि मोहित होना । ಮರುಳಾಗು, ಮೋಹಿತನಾಗು, ಆಕರ್ಷಿಸಲ್ಪಡು.

लुरकना– अक्रि. झूलना । ಅಲ್ಲಾಡು, ತೂಗಾಡು, ಜೋಲಾಡು

लुरकी–स्त्री. कान की बाली । ಮುರು, ಕುಂಡಲ.

लुरना– अक्रि. लटकना, झूलना, झुकपड़ना, मुग्ध होना । ಜೋಲಾಡು, ಬಳುಕು, ತೂಗಾಡು, ಮಣಿ, ಅತ್ತಿತ್ತ ಹೊರಳು, ಮುಗ್ಧನಾಗು.

लुरी– स्त्री. हाल की ब्याई हुयी गाय । ಸದ್ಯದಲ್ಲಿ ಈಯ್ದ ಆಕಳು, ಕರು ಹಾಕಿದ ಹಸು.

लुलना– अक्रि. दे 'लुरना'।

लुहना– अक्रि. दे. 'लुभाना'।

लुहार– पु. लोहार । ಕಮ್ಮಾರ.

लुहारिन–स्त्री. लुहार की स्त्री । ಕಮ್ಮಾರತಿ, ಕಮ್ಮಾರನ ಹೆಂಡತಿ.

लुहारी– स्त्री. लुहार जाति की स्त्री, लुहार का काम । ಕಮ್ಮಾರತಿ, ಕಮ್ಮಾರಿಕೆ, ಕಮ್ಮಾರನ ಕೆಲಸ.

लू– स्त्री. गरम हवा। ಬಿಸಿ ಹವೆ, ಬೇಸಿಗೆಯ ಉಷ್ಣ ಗಾಳಿ, ಝಳ.

लूक– स्त्री. लू, लपट । ಝಳ, ಬಿಸಿ ಹವೆ, ಜ್ವಾಲೆ, ಅಗ್ನಿಶಿಖೆ. पु टूटा हुआ तारा । ಬೀಳುವ ಚುಕ್ಕೆ,

ಉಲ್ಕಾಪಾತ.

लूकट–पु लुआठी। ಉರಿಯುವ ಕಟ್ಟಿಗೆ.

लूकना– सक्रि. आग लगाना। ಹೊತ್ತಿಸು, ಸುಡು अक्रि. दे 'लुकना'।

लूका–पु लूकी–स्त्री. जलती हुयी लकडी, ज्वाला । ಉರಿಯುವ ಕಟ್ಟಿಗೆ, ಕೊಳ್ಳಿ, ಜ್ವಾಲೆ.

लूखा– वि. दे 'रूखा'।

लूगा– पु. कपड़ा । ಬಟ್ಟೆ, ಅರಿವೆ, ಹೊದಿಕೆ.

लूट, लूटि– स्त्री डकैती । ಕೊಳ್ಳೆ, ಸುಲಿಗೆ, ಕೊಳ್ಳೆ ಹೊಡೆದ ವಸ್ತು.

लूटक–पु लुटेरा, शोभा छीन लेनेवाला। ದರೋಡೆಖೋರ, ಕೊಳ್ಳೆ ಹೊಡೆಯುವವ, ನಿಸ್ತೇಜ ಮಾಡುವವ.

लूटखसोट–स्त्री. लूटमार, छीना-झपटी । ದರೋಡೆ, ಸುಲಿಗೆ, ದೋಚಿಕೊಳ್ಳುವಿಕೆ.

लूटखूंद– स्त्री दे 'लूटखसोट'।

लूटना– सक्रि छीनना, अन्याय पूर्वक किसी का धन हर लेना, ठगना, मोहित करना, नष्ट करना । ಕಸಿದುಕೊಳ್ಳು, ದೋಚಿಕೊಳ್ಳು, ಸುಲಿದುಕೊಳ್ಳು, ಕೊಳ್ಳೆಹೊಡೆ, ಅನ್ಯಾಯದಿಂದ ಧನ ಅಪಹರಿಸು, ರಕ್ಷಿಸು, ಮೋಹಿತಗೊಳಿಸು,ಹಾಳುಮಾಡು.

लूटमार, लूटपाट– पु. मारपीट कर किसी का धन छीन लेना। ಕೊಳ್ಳೆ, ಸುಲಿಗೆ, ಎರಡನೆಯವರನ್ನು ಹೊಡೆದು ಬಡಿದು ಧನ ಅಪಹರಿಸುವಿಕೆ.

लूता– पु. मकडी । ಜೇಡಹುಳ. दे 'लुआठा'।

लूतिका– स्त्री मकड़ी। ಜೇಡಹುಳು.

लून–पु लवण। ಲವಣ, ಉಪ್ಪು वि. कटा हुआ। ಕೊಯ್ದು.

लूनना– सक्रि (फसल) काटना। ಬೆಳೆ ಕೊಯ್ಯು.

लूम– स्त्री. पूँछ, एक राग । ಬಾಲ, ಪುಚ್ಛ, ಒಂದು ರಾಗ.

लूमना–अक्रि लटकना, झूलना। ಜೋಲಾಡು, ನೇತಾಡು, ತೂಗಾಡು.

लूरना– अक्रि. दे 'लुरना'।

लूला– वि. बिना हाथका, असमर्थ । ಕೈಯಿಲ್ಲದವ, ಮೊಂಡಗೈಯ, ಹೆಳವ, ಅಸಮರ್ಥ.

लूल्– वि नासमझ। ಅಜ್ಞಾನಿ, ತಿಳಿವಳಿಕೆಯಿಲ್ಲದವ, ದಡ್ಡ, ಮೂಢ.

लूह– स्त्री दे 'लू'।

लूहर–स्त्री. लू। ಬಿಸಿ ಹವೆ,ಉಷ್ಣಗಾಳಿ पु. लुआठा। ಉರಿಯುವ ಕಟ್ಟಿಗೆ.

लेंडी– स्त्री. बकरी आदि की विष्टा । ಕುರಿ ಆಡು ಮುಂತಾದವುಗಳ ಮಲ, ಹಿಕ್ಕೆ.

लेंहड, लेंहडा– पु. झुंड । ಗುಂಪು, ಸಮೂಹ, ಹಿಂಡು.

ले– अव्य. तक, पर्यंत, आरंभ होकर । ತನಕ, ವರೆಗೆ, ಆರಂಭವಾಗಿ.

लेई– स्त्री. पका हुआ लसदार आटा, लपसी। ಪೇಸ್ಟು,ಜಿಗುಟು ಪದಾರ್ಥ, ಅಂಬಲಿ,ಸರಿ,ಗಂಜಿ,ಲಾಪ್ಸಿ,ಲೇಪ್ಯ

लेईपूँजी– स्त्री सर्वस्व । ಸರ್ವಸ್ವ.

लेकिन– अव्य. परंतु, पर । ಆದರೆ, ಪರಂತು.

लेख–पु लिपि, लिखे हुये अक्षर, लिखी हुयी बात, लिखावट, हिसाब-किताब। ಲಿಪಿ, ಅಕ್ಷರ, ಬರೆದ ಅಕ್ಷರ,ಬರೆದ ಸಂಗತಿ, ಲೇಖನ, ಬರವಣಿಗೆ, ಬರಹ, ಲೆಕ್ಕ. स्त्री. पक्की बात । ನಿಶ್ಚಿತ ಸಂಗತಿ. वि लिखने योग्य। ಬರೆಯಲು ಯೋಗ್ಯವಾದ

लेखक–पु लिखनेवाला, लेखक। ಬರಹ ಗಾರ, ಲೇಖಕ, ಗ್ರಂಥಕರ್ತ.

लेखन– पु लिखने का कार्य, हिसाब करना । ಬರೆಯುವ ಕೆಲಸ, ಚಿತ್ರ ತೆಗೆಯುವಿಕೆ, ಲೆಕ್ಕ ಮಾಡುವಿಕೆ.

लेखना–सक्रि लिखना, हिसाब लगाना, चित्र बनाना, विचार करना। ಬರೆ, ಲೆಕ್ಕಹಾಕು, ಎಣಿಸು, ಚಿತ್ರಿಸು, ವಿಚಾರ ಮಾಡು, ತಿಳಿ, ಊಹಿಸು.

लेखनी– स्त्री कलम। ಲೆಕ್ಕಣಿಕೆ.

लेखा– पु. हिसाब, गणना, अनुमान । ಲೆಕ್ಕ, ಎಣಿಕೆ, ಊಹೆ, ಅಂದಾಜು.

लेखिका– स्त्री पुस्तक लिखनेवाली । ಲೇಖಿಕೆ, ಪುಸ್ತಕ ಬರೆಯುವವಳು.

लेज, लेजुर, लेजुरी– स्त्री कुएँ से पानी निकालने की रस्सी। ನೀರು ಸೇದು-ವ ಹಗ್ಗ.

लेज़म, लेज़िम– स्त्री. व्यायाम करने के लिये जंजीरदार कमान । ಲೇಜಿಮು.

लेट– स्त्री. गच । ಗಚ್ಚು, ಗಾರೆ.

लेटना– अक्रि. पड़ना, आराम करना। ಒರಗು, ಅಡ್ಡಾಗು, ವಿಶ್ರಮಿಸು, ಪವಡಿಸು.

लेटाना– सक्रि. सुलाना । ಮಲಗಿಸು, ಒರಗಿಸು.

लेन–पु लेने की क्रिया या भाव, पावना। ತೆಗೆದುಕೊಳ್ಳುವಿಕೆ, ಪರಿಗ್ರಹಣ, ಬಡ್ಡಿಗೆ ಕೊಟ್ಟ ಹಣ,ಬರತಕ್ಕ ಹಣ.

लेनदार– पु. महाजन । ಸಾವುಕಾರ, ಬರತಕ್ಕ ಹಣವುಳ್ಳವ, ಹಣ ಪಡೆಯಬೇಕಾದವ.

लेनदेन– पु. व्यवहार। ಕೊಡಕೊಳ್ಳುವ ವ್ಯವಹಾರ, ಸಾವುಕಾರಿಕೆ, ಸಹ-ಕಾರ, ಲೇಣೆದೇಣೆ.

लेनहार– पु. लेनेवाला। ತೆಗೆದುಕೊಳ್ಳು ವವ, ಹಣ ತರುವವ.

लेना–सक्रि ग्रहण करना, स्वीकार करना, संचय करना, सेवन करना, अगवानी करना, जीतना, मोल लेना। ಗ್ರಹಣ ಮಾಡು, ಸ್ವೀಕರಿಸು, ತೆಗೆದು-ಕೊಳ್ಳು, ಸಂಚಯ ಮಾಡು, ಕೂಡಿ-ಸು, ತಿನ್ನು, ಸೇವಿಸು, ಬರಮಾಡಿ ಕೊಳ್ಳು, ಗೆಲ್ಲು,ವಶಮಾಡಿಕೊಳ್ಳು, ಕೊಂಡುಕೊಳ್ಳು.

आड़े हाथों लेना = मर्मभेदी बात कहकर लज्जित करना। ಮರ್ಮಭೇಧಕ ಮಾತುಗಳನ್ನಾಡಿ ಲಜ್ಜಿತ ಪಡಿಸು.

लेना एक न देना दो=कोई सरोकार नहीं। ಸಂಬಂಧವಿಲ್ಲದಿರು.

लेने के देने पड़ना =लाभ के बजाय

नुकसान उठाना। ಲಾಭದ ಬದಲಾಗಿ ಹಾನಿಯಾಗು.

लेप– पु. उवटन, गाढी गीली चीज। ಲೇಪ, ಮುಲಾಮು, ಗಿಲಾವು, ಮೆತ್ತಿಗೆ.

लेपन– पु लेपने की क्रिया। ಲೇಪ ಮಾಡುವಿಕೆ, ಗಿಲಾವು ಮಾಡುವಿಕೆ.

लेपना–सक्रि पोतना, किसी गाढी गीली वस्तु की तह चढाना। ಲೇಪಿಸು, ಸವರು, ನಾರಿಸು,ಗಿಲಾವುಮಾಡು, ಮೆತ್ತಿಗೆ ಹಾಕು.

लेरुआ– पु वछडा। ಆಕಳ ಕರು.

लेव–पु. लेप, गिलावा। ಲೇಪ,ಗಿಲಾವು, ಗಚ್ಚು, ಸಾರಿಸುವದು.

लेवा– पु लेप, गिलावा, गीली मिट्टी। ಲೇಪ, ಗಿಲಾವು, ಗಚ್ಚು, ಹದ ಮಾಡಿದ ಕೆಸರು. वि लेनेवाला। ತೆಗೆದುಕೊಳ್ಳುವವ.

लेवादेई– स्त्री. दे. 'लेनदेन'।

लेवाल– पु. लेनेवाला। ತೆಗೆದುಕೊಳ್ಳು-ವವ, ಕೊಂಡುಕೊಳ್ಳುವವ.

लेश– पु अल्पता, कण, अणु, चिह्न, संबंध, एक काव्यालंकार। ಸ್ವಲ್ಪ ಭಾಗ, ಸೂಕ್ಷ್ಮಾಂಶ, ಕಣ, ಅಣು, ಚಿಹ್ನೆ, ಗುರುತು,ಸಂಬಂಧ,ಒಂದು ಕಾವ್ಯಾಲಂಕಾರ. वि अल्प, थोडा। ಸ್ವಲ್ಪ, ಅಲ್ಪ.

लेष– पु दे 'लेख' तथा 'लेश'।

लेषना– सक्रि. लखना, लिखना। ನೋಡು, ಬರೆ.

लेषनी– स्त्री. दे. 'लेखनी'।

लेस– पु. दे. 'लेश'। गाढी सनी हुयी मिट्टी। ಹದ ಮಾಡಿದ ಕೆಸರು.

लेसना– सक्रि. जलाना, चिपकाना, पोतना। ಸುಡು,ಹೊತ್ತಿಸು,ಮೆತ್ತು, ಮೆತ್ತಿಗೆ ಹಾಕು, ಗಿಲಾವು ಮಾಡು, ನಾರಿಸು, ಲೇಪಿಸು.

लेहन– पु चाटना। ನೆಕ್ಕುವಿಕೆ.

लेहना– पु पावना, फसल का वह भाग जो मजदूरों या नाई को मिलता है। ಬರತಕ್ಕ ಹಣ, ಬಡ್ಡಿಗೆ ಕೊಟ್ಟ ಹಣ, ಕೂಲಿಕಾರರಿಗೆ ಅಥವಾ ನಾವಲಿಗನಿಗೆ ಕೊಡುವ ಬೆಳೆಯ ಭಾಗ.

लेहाज़ा– क्रिवि. इस कारण, इस लिये। ಆದ್ದರಿಂದ, ಆ ಕಾರಣದಿಂದ,ಅತಃ.

लेहाड़ा– वि. दे. 'लिहाडा'।

लै– अव्य तक। ವರೆಗೆ, ತನಕ.

लैस– पु. एक तरह का वाग, फीता। ಒಂದು ತರದ ಬಾಣ, ಅಂಚು, ಫೀತ, ಗೋಟು. वि. कटिवद्ध, सुसज्जित, निमग्न। ಸುಸಜ್ಜಿತ, ತಯಾರಾದ, ಮಗ್ನ, ತತ್ಪರ.

लों– अव्य. तक। ವರೆಗೆ, ತನಕ.

लोंदा–पु किसी गीले पदार्थ का गोला। ಹಸಿ ಪದಾರ್ಥದ ಮುದ್ದೆ, ಗುಂಡು, ಉಂಡೆ.

लोइ– पु लोग। ಜನರು. स्त्री. ज्वाला, दीप्ति। ಜ್ವಾಲೆ, ಕಾಂತಿ, ಶೋಭೆ, ತೇಜ, ದೀಪ್ತಿ.

लोई– स्त्री. गूंधे हुए आटे की गोली, एक तरह की ऊनी चादर । ನಾದಿದ ಕಣಕದ ಮುದ್ದೆ, ಒಂದು ತರದ ಚಾದರ. पु. लोग। ಜನರು.

लोकंदा– पु. पहली विदाईपर लड़की के साथ दासीका जाना । ಮೊದಲುಬಾರಿ ಪತಿಯ ಮನೆಗೆ ಹೋಗುವವಳ ಕೂಡ ದಾಸಿಯು ಹೋಗುವ ಪದ್ಧತಿ.

लोकंदी– स्त्री. लड़की के साथ ससुराल जानेवाली दासी । ಮೊದಲುಬಾರಿ ಪತಿಗೃಹಕ್ಕೆ ತೆರಳುವಾಗ ಅವಳ ಕೂಡ ಹೋಗುವ ದಾಸಿ.

लोक– पु. विश्व, संसार, लोग, विश्व का भाग। ವಿಶ್ವ, ಜಗತ್ತು, ಜನರು, ವಿಶ್ವದ ಭಾಗ.

लोकचार, लोकाचार– पु. लोक का व्यवहार। ಜಗತ್ತಿನ ವ್ಯವಹಾರ.

लोकतंत्र–पु पंचायती राज्य। ಪ್ರಜಾಸತ್ತಾತ್ಮಕ ರಾಜ್ಯ.

लोकना–सक्रि झेलना, बीचमें ही पकड़ लेना। ಮೇಲಿನಿಂದ ಬೀಳುವ ವಸ್ತುವನ್ನು ಹಿಡಿ, ನಡುವೆಯೇ ಹಿಡಿ.

लोकनाथ, लोकपाल–पु. ब्रह्मा, राजा। ಬ್ರಹ್ಮ, ಅರಸು.

लोकलोचन– पु सूर्य । ಸೂರ್ಯ.

लोकश्रुति– स्त्री. अफवाह। ಕಿಂವದಂತಿ, ಲೋಕವಾರ್ತೆ.

लोकाना– सक्रि आकाश में फेंकना । ಮೇಲೆ ಒಗೆ, ಆಕಾಶದಲ್ಲಿ ಬೀಸು, ಹಾರಿಸು, ಬಿಸಾಡು.

लोकायत– पु नास्तिक । ನಾಸ್ತಿಕ, ಪರಲೋಕದಲ್ಲಿ ಶ್ರದ್ಧೆ ಇಲ್ಲದವ.

लोकोक्ति– स्त्री कहावत । ವಚನ, ಉಕ್ತಿ, ಗಾದೆಯ ಮಾತು.

लोकोत्तर– वि. असाधारण। ಅಸಾಧಾರಣ, ಅಲೌಕಿಕ.

लोखर– स्त्री हजाम लोहार इत्यादि के औजार । ನಾವಲಿಗ ಕಮ್ಮಾರ ಮುಂತಾದವರ ಉಪಕರಣಗಳು

लोग– पु. मनुष्य। ಮನುಷ್ಯ, ಜನರು.

लोगाई– स्त्री औरत। ಹೆಂಗಸು.

लोच–स्त्री. कोमलता, लचक। ಕೋಮಲತೆ, ಮೃದುತ್ವ, ಸ್ಥಿತಿಸ್ಥಾಪಕತ್ವ, ಬಾಗುವಿಕೆ, ಮಣಿಯುವಿಕೆ. पु. रुचि, इच्छा। ರುಚಿ, ಇಚ್ಛೆ, ಅಭಿಲಾಷೆ.

लोचन– पु नेत्र। ಕಣ್ಣು, ನೇತ್ರ.

लोचना–सक्रि चाहना, प्रकाशित करना। ಇಚ್ಛಿಸು, ಅಭಿಲಾಷಿಸು, ಪ್ರಕಾಶಿಸು, ಬೆಳಗಿಸು, ಪ್ರಸಿದ್ಧಿಸು. अक्रि शोभित होना, विराजना, ललचाना। ಶೋಭಿಸು, ರಾರಾಜಿಸು, ಆಶೆಪಡು, ಹಂಬಲಿಸು.

लोचून– पु. लोहे का चूर्ण। ಲೋಹದ ಚೂರ್ಣ.

लोट– स्त्री. लोटने की क्रिया या भाव। ಹೊರಳುವಿಕೆ, ಉಳ್ಳುವಿಕೆ. पु उतार, घाट, नोट (द्रव्य)। ಕಡಿಮೆಯಾಗುವಿಕೆ, ಇಳುಕಲು, ಘಟ್ಟ, ನೋಟ.

**लोटना–** अक्रि लेटना, लुढ़कना, लेटकर फिरना, करवटें बदलना, छटपटाना। ಮಲಗು, ಅಡ್ಡಾಗು, ಹೊರಳಾಡು, ಉರುಳು, ಹೊರಳು,ಮಗ್ಗಲಾಗು, ಚಡಪಡಿಸು, ಒದ್ದಾಡು.

**लोटपोट–** स्त्री लोटना, आराम करना। ಅಡ್ಡಾಗುವಿಕೆ, ಹೊರಳಾಡುವಿಕೆ, ವಿಶ್ರಾಂತಿ.

—होना = खुशी से नाच उठना। ಬಹಳ ಆನಂದವಾಗು, ಆನಂದ ದಿಂದ ಕುಣಿ.

**लोटा–** पु. जलपात्र विशेष। ಬಟ್ಟಲು, ಚೆಂಬು, ಕುಡಿಯುವ ಪಾತ್ರೆ.

**लोटिया–** स्त्री छोटा लोटा। ಬಟ್ಟಲು, ಚಿಕ್ಕ ತಂಬಿಗೆ, ಚೆಂಬು.

**लोटी–** स्त्री छोटा लोटा। ಚಿಕ್ಕ ತಂಬಿಗೆ, ಚೆಂಬು.

**लोडना–** सक्रि चाहना, चुनना। ಇಚ್ಛೆಯಾಗು, ಅಗತ್ಯವಾಗು, ಆರಿಸು.

**लोढ़ना–**सक्रि तोड़ना, चुनना, चाहना। ಹರಿ, ಬಿಡಿಸು, ಆರಿಸು, ಇಚ್ಛಿಸು. अक्रि लोटना, जमीनपर घसीटना। ಹೊರಳಾಡು, ಹೊರಳಾಡಿಸು.

**लोढ़ा–**पु सिलपर किसी वस्तु को पीसने का पत्थर। ಗುಂಡುಕಲ್ಲು, ಅರೆಯುವ ಕಲ್ಲು, ಒರಳ್ಳುವ ಕಲ್ಲು.

—डालना = बराबर करना। ಸರಿಗೊಳಿಸು.

**लोढ़िया–** पु. छोटा लोढा। ಅರೆಯುವ ಚಿಕ್ಕ ಕಲ್ಲು.

**लोथ, लोथी–** स्त्री लाश। ಹೆಣ, ಶವ.

**लोथड़ा, लोथरा–** पु. मासपिंड। ಮಾಂಸಪಿಂಡ,ಮಾಂಸದ ತುಂಡು.

**लोन–** पु. नमक, सुंदरता। ಲವಣ, ಉಪ್ಪು, ಸೌಂದರ್ಯ.

**लोना–** वि नमकीन, सुदर। ಉಪ್ಪಾದ, ಉಪ್ಪುಳ್ಳ,ಸುಂದರ,ಲಾವಣ್ಯವುಳ್ಳ. पु. क्षार, एक कीडा, दीवार का एक रोग, जादूगरनी, एक घास। ಕ್ಷಾರ, ಲವಣ, ಒಂದು ಹುಳು, ಗೋಡೆಯಿಂದ ಮಣ್ಣುದುರುವ ರೋಗ, ಜವುಳು ಮಣ್ಣು, ಮಾಟಗಾತಿ, ಜಾದೂಗಾರತಿ, ಒಂದು ನೊಪ್ಪು, ಒಂದು ತರದ ಹುಲ್ಲು. सक्रि लुनना। ಪೈರು ಕೊಯ್ಯು,ಕತ್ತರಿಸು.

**लोनाई–** स्त्री सुंदरता। ಸೌಂದರ್ಯ, ಲಾವಣ್ಯ.

**लोनिया–** पु नमक बनानेवाली एक जाति। ಉಪ್ಪು ತಯಾರಿಸುವ ಒಂದು ಜಾತಿ, ಉಪ್ಪಲಿಗ

**लोनी–** स्त्री. एक प्रकार का साग, क्षार-युक्त मिट्टी। ಒಂದು ಪಲ್ಲೆ, ಒಂದು ನೊಪ್ಪು, ಲವಣಯುಕ್ತ ಮಣ್ಣು. पु. नवनीत। ಬೆಣ್ಣೆ.

**लोप–** पु. नाश, छिपना। ನಾಶ, ಇಲ್ಲದಾಗುವಿಕೆ, ಅಡಗುವಿಕೆ, ಮರೆಯಾಗುವಿಕೆ.

**लोपना–** सक्रि. छिपाना, नष्ट करना। ಅಡಗಿಸು, ಮರೆ ಮಾಡು, ನಾಶ ಮಾಡು. अक्रि. लुप्त होना। ಮರೆ

ಯಾಗು, ಇಲ್ಲದಾಗು, ನಾಶವಾಗು.

**लोबा**– स्त्री. लोमड़ी । ನರಿ

**लोबान**–पु एक सुगंधित गोंद । ದೇವ-ಧೂಪ, ಲೋಬಾನ, ಒಂದು ಸುಗಂಧ ದ್ರವ್ಯ.

**लोभ**– पु. लालच । ಆಶೆ, ಲೋಭ.

**लोभना, लोभाना**–सक्रि दे. 'लुभाना'।

**लोभार**–वि. मुग्ध करनेवाला । ಮೋಹ-ಗೊಳಿಸುವ, ಮುಗ್ಧ ಮಾಡುವ, ಆಶೆವಡಿಸುವ.

**लोभी**– पु. कृपण, लालची । ಕೃಪಣ, ಜಿಪುಣ, ಲೋಭಿ, ಆನೆಬುರುಕ.

**लोम**– पु. वाल, रोआँ, लोमडी । ಕೂದಲು, ರೋಮ, ನರಿ.

**लोमडी, लोमरी**– स्त्री गीदड की जाति का एक वन्यपशु । ನರಿ.

**लोमश**–पु एक ऋषि। ಒಬ್ಬ ಋಷಿಯ ಹೆಸರು. वि वड़े वड़े रोएँवाला । ಉದ್ದವಾದ ಕೂದಲುಗಳುಳ್ಳವ.

**लोमहर्षण**– वि भीषण । ಭೀಷಣ, ಭಯಂಕರ.

**लोय**–पु. लोग, आँख। ಜನರು, ಕಣ್ಣು. स्त्री. आगकी लपट । ಜ್ವಾಲೆ, ಅಗ್ನಿ-ಶಿಖೆ. अव्य. दे 'लौं'।

**लोयन**– पु. लोचन । ಕಣ್ಣು, ನೇತ್ರ.

**लोर**– पु लोलक, झुमका, आँसू । ಲೋಲಕ, ಕುಂಡಲ, ಬಾವಲಿ, ಮುರು, ಕಣ್ಣೀರು. वि उत्सुक, चंचल । ಉತ್ಸುಕ, ಚಂಚಲ, ಓಲಾಡುವ.

**लोरी**– स्त्री. वच्चे को सुलाने का गीत । ಜೋಗುಳಪದ.

**लोल**– वि चंचल, उत्सुक । ಚಂಚಲ, ಅಸ್ಥಿರ, ಕ್ಷಣಿಕ, ಉತ್ಸುಕ

**लोलक**– पु. झुमका । ಲೋಲಕ, ಕುಂಡಲ, ಕಿವಿಯ ಆಭರಣ, ಜುಮುಕಿ.

**लोलकी**–स्त्री. कान का नीचे का लटकता हुआ भाग। ಕಿವಿಯ ಕೆಳಭಾಗ.

**लोलना**– अक्रि हिलना । ಅಲ್ಲಾಡು. सक्रि हिलाना। ಅಲ್ಲಾಡಿಸು, ಅಲು-ಗಾಡಿಸು.

**लोला**–स्त्री. जीभ, लक्ष्मी, चंचला स्त्री । ನಾಲಿಗೆ, ಲಕ್ಷ್ಮಿ, ಚಂಚಲ ಸ್ತ್ರೀ. पु वच्चो का एक खिलौना। ಮಕ್ಕಳ ಒಂದು ಆಟಿಕೆ.

**लोलुप**– वि. लालची, अत्यंत उत्सुक । ಲೋಭಿ, ಆಶೆಬುರುಕ, ಉತ್ಸುಕ, ಕಾಮುಕ.

**लोवा**– स्त्री लोमड़ी । ನರಿ.

**लोहँडा**–पु लोहे का तसला। ಕಬ್ಬಿಣದ ಕರೆಯುವ ಪಾತ್ರೆ, ಕಡಾಯಿ, ಕಬ್ಬಿಣದ ಬಾನೆ.

**लोह**– पु लोहा । ಕಬ್ಬಿಣ, ಲೋಹ.

**लोहकार**– पु. लोहार । ಕಮ್ಮಾರ.

**लोहबान**– पु. दे 'लोवान'।

**लोहसार**– पु फौलाद। ಉಕ್ಕು.

**लोहा**– पु एक धातु, अस्त्र, लाल वैल। ಕಬ್ಬಿಣ, ಅಸ್ತ್ರ, ಶಸ್ತ್ರ, ಕೆಂಪು ಎತ್ತು. वि. लाल, वहुत कडा । ಕೆಂಪು,

ಬಿರುಸಾದ.
—**मानना** =आधिपत्य स्वीकार करना। ಒಬ್ಬರ ಅಧೀನತೆ ಸ್ವೀಕರಿಸು.
—**बजना**= युद्ध होना। ಯುದ್ಧವಾಗು.
—**लेना**= युद्ध करना। ಯುದ್ಧ ಮಾಡು.
**लोहे के चने चबाना** = बडा कठिण कार्य करना। ಅತ್ಯಂತ ಕಠಿಣ ಕೆಲಸ ಮಾಡು.
**लोहाना**–अक्रि. किसी वस्तु में लोहे का रंग या स्वाद आ जाना। ಕಬ್ಬಿಣದ ಸಂಪರ್ಕದಿಂದ ಕಬ್ಬಿಣದ ಬಣ್ಣ ಅಥವಾ ಸ್ವಾದ ಉಂಟಾಗುವ.
**लोहार**– पु एक जाति । ಕಮ್ಮಾರ, ಲೋಹಕಾರ.
**लोहारिन**– स्त्री लोहार की स्त्री । ಕಮ್ಮಾರತಿ, ಕಮ್ಮಾರನ ಹೆಂಡತಿ.
**लोहारी**– स्त्री. लोहार का काम । ಕಮ್ಮಾರಿಕೆ.
**लोहित**– वि. लाल। ಕೆಂಪು. पु. रक्त, कुंकुम, केशर, युद्ध । ರಕ್ತ, ಕುಂಕುಮ, ಕೇಶರ, ಯುದ್ಧ.
**लोहिया**– पु. लोहा बेचनेवाला, लाल रंग का बैल। ಕಬ್ಬಿಣದ ವ್ಯಾಪಾರಿ, ಕೆಂಪು ಬಣ್ಣದ ಎತ್ತು.
**लोही**– स्त्री. उप· काल की लालिमा, चुगली। ಅರುಣೋದಯ, ಪ್ರಾತಃ ಕಾಲದ ಹೊಂಬಣ್ಣ, ನಿಂದೆ, ಚಾಡಿ.
**लोहू**– पु. रक्त। ರಕ್ತ.
—**लहान होना** = रक्त में भीग जाना। ರಕ್ತಮಯವಾಗು.
**लौं**– अव्य. समान, तक । ಸಮಾನ, ಸದೃಶ, ವರೆಗೆ, ತನಕ.
**लौकना**– अक्रि. चमकना, दिखाई देना। ಪ್ರಕಾಶಿಸು, ಹೊಳೆ, ಕಾಣಿಸು, ತೋರು.
**लौंग**– स्त्री. एक मसाला, कान या नाक की कील। ಲವಂಗ, ಮೂಗಬೊಟ್ಟು, ಮೂಗುತಿ, ಕಿವಿ ಮುರು.
**लौंडा**– पु. लडका । ಹುಡುಗ वि अबोध । ಅಜ್ಞಾನಿ, ತಿಳಿವಳಿಕೆ ಇಲ್ಲದವ.
**लौंडी**– स्त्री. दासी। ದಾಸಿ.
**लौंदा**– पु. दे 'लोंदा'।
**लौ**– स्त्री ज्वाला, दीपशिखा, चाह, लगन। ಜ್ವಾಲೆ, ದೀಪಶಿಖೆ, ಉರಿಯ ನಾಲಿಗೆ, ಇಚ್ಛೆ, ಅಭಿಲಾಷೆ.
**लौआ, लौका**–पु लौकी, कद्दू। ಸೋರೆಕಾಯಿ, ಹಾಲಗುಂಬಳಕಾಯಿ.
**लौकना**– स्त्री दे 'लौकना'।
**लौकिक**– वि. व्यवहारी। ವ್ಯವಹಾರಿಕ, ಲೌಕಿಕ.
**लौकी**– स्त्री. एक लंबा फल। ಸೋರೆಕಾಯಿ.
**लौट**– स्त्री लौटने की क्रिया। ಹಿಂತಿರುಗುವಿಕೆ, ವಾಪಸು.
**लौटना**– अक्रि. पलटना, वापस आना। ತಿರುಗಿ ಬರು, ಮರಳು, ಹಿಂದಕ್ಕೆ ಬರು, ವಾಪಸು ಬರು.
**लौटफेर**– पु. हेरफेर। ಅದಲುಬದಲು.
**लौटाना**– सक्रि. वापस करना, उलट

देना । ತಿರುಗಿ ಕೊಡು, ವಾಪಸು ಮಾಡು,ತಿರುಗಿ ಕಳಿಸು,ಮಗುಚು.

लौना– पु. कटाई । ಪೈರಿನ ಕೊಯ್ಲು, ಬೆಳೆ ಕೊಯ್ಯುವಿಕೆ. वि. सुंदर । ಸುಂದರ.

लौनी– स्त्री. कटाई, नवनीत । ಸುಗ್ಗಿ, ಕೊಯಿಲು, ಕೊಯ್ಯುವ ಕೂಲಿ, ಬೆಣ್ಣೆ.

लौह– पु. दे. 'लोहा'।

लौहकार– पु. लोहार । ಕಮ್ಮಾರ.

लौहित्य– पु. लाल समुद्र । ಕೆಂಪು ಸಮುದ್ರ.

ल्याना, ल्यावना– सक्रि दे. 'लाना'।

ल्वारि–स्त्री लू । ಬೇಸಿಗೆಯ ಬಿಸಿಗಾಳಿ.

---

# व

वंक, वंकट– वि टेढ़ा, वक्र, कुटिल । ಅಂಕಡೊಂಕ, ವಕ್ರ, ಕುಟಿಲ

वंकिम– वि. टेढ़ा । ಡೊಂಕಾದ, ಬಾಗಿದ, ವಕ್ರ.

वंग– पु. कपास, राँगा, भंटा । ಹತ್ತಿ, ತವರ, ಕಲಾಯಿ, ಬದನೇಕಾಯಿ.

वंगदेश–पु. आधुनिक वंगाल। ಬಂಗಾಳ.

वंचक– वि. धूर्त, ठग । ಧೂರ್ತ,ರಕ್ಕ, ಮೋಸಗಾರ.

वंचना– स्त्री. छल । ಮೋಸಗಾರಿಕೆ. सक्रि ठगना, पढना । ಮೋಸ ಮಾಡು, ರಕ್ಕಿಸು, ಓದು, ವರಿಸು.

वंचित–वि. ठगा हुआ, रहित । ಮೋಸ ಮಾಡಲ್ಪಟ್ಟ, ವಂಚಿಸಲ್ಪಟ್ಟ, ಇಲ್ಲದ.

वंजुल– पु. वेंत, अशोकवृक्ष । ಬೆತ್ತ, ಅಶೋಕ ವೃಕ್ಷ.

वंदन– पु. स्तुति, प्रणाम । ಸ್ತುತಿ, ಪ್ರಣಾಮ, ನಮಸ್ಕಾರ.

वंदना, वंदनि– स्त्री. स्तुति । ವಂದನೆ, ಪ್ರಣಾಮ, ಸ್ತುತಿ.

वंदित– वि पूज्य । ಪೂಜ್ಯ, ನಮಸ್ಕರಿಸಲ್ಪಟ್ಟ.

वंदी– पु. चारण, कैदी । ಭಟ್ಟಂಗಿ, ಮಾಗಧ,ಕೈದಿ. स्त्री. दासी । ದಾಸಿ.

वंद्य– वि. वंदना के योग्य । ಪೂಜ್ಯ, ವಂದ್ಯ.

वंश– पु. कुल, बाँस, बाँसुरी । ಕುಲ, ಸಂತಾನ,ವಂಶ,ಬಿದಿರು, ಕೊಳಲು.

वंशधर– पु. संतान । ಸಂತಾನ.

वंशी– पु मुरली । ಕೊಳಲು.

वंशीधर– पु श्रीकृष्ण । ಶ್ರೀಕೃಷ್ಣ

वंशीय–वि वंश संबंधी, कुलमें उत्पन्न । ವಂಶ ಸಂಬಂಧವಾದ, ವಂಶದಲ್ಲಿ

ಹುಟ್ಟಿದ.
वंश्य– वि. कुलीन । ಕುಲೀನ. पु. रीढ । ಬೆನ್ನೆಲುಬು.
व– अव्य. और, भी । ಮತ್ತು, ಹಾಗೂ.
वक़अत– स्त्री. इज़्जत, शक्ति । ಮಾನ ಮರ್ಯಾದೆ, ಪತ್ತು, ಶಕ್ತಿ, ಬಲ.
वक़ार– पु. रोब, वैभव । ಪ್ರಭಾವ, ವೈಭವ.
वकालत–स्त्री. वकीलका पेशा। ವಕೀಲಿ, ಪಕ್ಷ ಸಮರ್ಥನೆ.
वक़ूफ़– पु. समझ । ಜ್ಞಾನ, ತಿಳಿವಳಿಕೆ.
वक़्त– पु समय, अवसर । ಸಮಯ, ಕಾಲ, ಅವಧಿ, ಸಂಧಿ.
वक़्तन्-फवक्तन्– क्रिवि. बीचबीचमें, समय समयपर । ನಡುನಡುವೆ, ಆಗಾಗ್ಗೆ, ಸಮಯ ಸಮಯಕ್ಕೆ.
वक्तव्य– पु. कथन । ಹೇಳಿಕೆ, ಕಥನ. वि. कहने योग्य । ಹೇಳಲು ಯೋಗ್ಯವಾದ, ಹೇಳತಕ್ಕ.
वक्ता– पु. वाग्मी, भाषण करनेवाला । ಭಾಷಣಕಾರ, ಉಪನ್ಯಾಸಕ.
वक्तृता– स्त्री वक्तृत्व–पु. व्याख्यान, कथन । ಭಾಷಣ, ಉಪನ್ಯಾಸ, ವಕ್ತೃತ್ವ, ಭಾಷಣ ಕಲೆ.
वक्फ़– पु. धर्म के लिये दान की हुयी संपत्ति । ಧರ್ಮ ಕಾರ್ಯಕ್ಕಾಗಿ ದಾನ ಮಾಡಿದ ಸಂಪತ್ತು.
वक्फ़नामा– पु. वह पत्र जो कोई संपत्ति वक्फ करने के संबंध में लिख देता है । ದಾನಪತ್ರ.
वक्र– वि. टेढा, कुटिल । ವಕ್ರ, ಡೊಂಕಾದ, ಬಾಗಿದ, ಕುಟಿಲ.
वक्रतुंड– पु गणेशजी । ಗಣಪತಿ, ಗಣೇಶ.
वक्रदृष्टि–स्त्री. टेढ़ी नजर, क्रोध की दृष्टि । ವಕ್ರದೃಷ್ಟಿ, ಸಿಟ್ಟಿನ ನೋಟ.
वक्ष, वक्ष स्थल– पु. छाती । ಎದೆ, ವಕ್ಷಃಸ್ಥಲ.
वक्षोज, वक्षोरुह– पु स्तन । ಮೊಲೆ.
वग़ैरह– अव्य इत्यादि । ಮುಂತಾದ, ಮೊದಲಾದ, ಇತ್ಯಾದಿ.
वचन– पु. कथन, बात, वाक्य, वाणी । ಹೇಳಿಕೆ, ಮಾತು, ವಚನ, ವಾಕ್ಯ, ವಾಣಿ.
वचसा– क्रिवि. वचनसे । ಮಾತಿನಿಂದ.
वच्छ– पु वक्ष । ಎದೆ.
वज़न–पु तौल, महत्व । ಭಾರ, ತೂಕ, ಹೊರೆ, ವಜ್ಜೆ, ಮಹತ್ವ.
वज़नी– वि. भारी । ಭಾರವಾದ, ದೊಡ್ಡ, ಮಹತ್ವದ.
वजह– स्त्री. कारण । ಕಾರಣ, ಹೇತು, ನಿಮಿತ್ತ.
वज़ा–स्त्री. बनावट, शक्ल, हालत, रीति, सजधज, जनना । ರಚನೆ, ಆಕೃತಿ, ಸ್ಥಿತಿ, ರೀತಿ, ಸಂಪ್ರದಾಯ, ಶೃಂಗಾರ, ಹೆರಿಗೆ, ಪ್ರಸವ.
वज़ादार–वि. दर्शनीय, सुदर । ಸುಂದರ, ಚೆಂದ, ಚೆಲುವ.
वज़ारत– स्त्री. वजीर का पद या कार्य । ಮಂತ್ರಿಯ ಪದ, ಮಂತ್ರಿಯ ಕೆಲಸ.

वज़ीफ़ा–पु वह वृत्ती जो विद्वानो, छात्रो, दीन लोगों को दी जाती है। ವಿದ್ವಾನರಿಗೆ, ವಿದ್ಯಾರ್ಥಿಗಳಿಗೆ ಹಾಗೂ ದೀನರಿಗೆ ತಿಂಗಳಿಗೆ ಕೊಡಲ್ಪಡುವ ಹಣ, ವಿದ್ಯಾರ್ಥಿ ವೇತನ.

वज़ीर– पु. मंत्री। ಮಂತ್ರಿ, ದಿವಾನ.

वज़ीरी– स्त्री. मंत्रित्व। ಮಂತ್ರಿಯ ಹುದ್ದೆ, ಮಂತ್ರಿಯ ಕೆಲಸ. पु घोड़े की एक जाति। ಕುದುರೆಯ ಒಂದು ಜಾತಿ.

वजीह– वि. सुंदर। ಸುಂದರ.

वजू–पु. नमाज के पूर्व मुँह हाथ धोना। ನಮಾಜು ಮಾಡುವ ಪೂರ್ವದಲ್ಲಿ ಮೋರೆ, ಕೈ ಕಾಲು ತೊಳೆದುಕೊಳ್ಳುವದು, ಪ್ರಕ್ಷಾಲನೆ.

वजूद– पु. अस्तित्व, कार्यसिद्धि, शरीर। ಅಸ್ತಿತ್ವ, ಹಾಜರಾಗುವಿಕೆ, ಕಾರ್ಯಸಿದ್ಧಿ, ಶರೀರ, ಮೈ, ದೇಹ.

वज्र–पु इंद्रायुध, भाला, हीरा। ಸಿಡಿಲು, ಮಿಂಚು, ಭಲ್ಲೆ, ವಜ್ರ (ರತ್ನ). वि दृढ, दारुण, तीव्र। ದೃಢ, ಕಠಿಣ, ಭಯಂಕರ, ತೀವ್ರ.

वज्रधर, वज्रपाणि, वज्रहस्त– पु. इंद्र। ಇಂದ್ರ.

वज्रसार– पु. हीरा। ವಜ್ರ.

वट– पु. वरगद। ಆಲದ ಮರ.

वटिका, वटी– स्त्री. गोली। ಗುಳಿಗೆ, ಉಂಡೆ, ಮಾತ್ರೆ, ಗುಟಿಕೆ.

वटु, वटुक– पु. ब्रह्मचारी, बालक। ಬ್ರಹ್ಮಚಾರಿ, ಬಾಲಕ.

वणिक–पु. वैश्य। ವೈಶ್ಯ, ವ್ಯಾಪಾರಸ್ಥ, ವ್ಯಾಪಾರಿ.

वतन– पु स्वदेश। ಸ್ವದೇಶ, ಜನ್ಮಭೂಮಿ.

वतनी– वि. देशका। ದೇಶದ, ಸ್ವದೇಶದ.

वत्– अव्य. समान, सदृश। ಸಮಾನವಾಗಿ, ಅದರಂತೆ.

वत्स–पु बच्चा, बछड़ा, छाती। ಬಾಲಕ, ಆಕಳ ಕರು, ಎದೆ.

वत्सर– पु साल, वर्ष। ವರ್ಷ, ಸಂವತ್ಸರ.

वत्सल– वि. संतान के लिये प्रेमपूर्ण, छोटो के लिये कृपालु। ಮಕ್ಕಳ ಮೇಲೆ ಪ್ರೀತಿಯುಳ್ಳ, ಸಣ್ಣವರ ಮೇಲೆ ದಯಾದೃಷ್ಟಿಯುಳ್ಳ.

वदंती– स्त्री. कथा। ಕತೆ, ಸುದ್ದಿ.

वदन– पु. मुख। ಮುಖ.

वदान्य– वि. उदार। ಉದಾರ.

वध– पु. हत्या। ಕೊಲೆ, ಖೂನಿ.

वधभूमि– स्त्री. फाँसीघर, क्साईखाना। ಗಲ್ಲಿಗೇರಿಸುವ ಸ್ಥಳ, ವಧಸ್ಥಾನ.

वधू– स्त्री. पतोहू, पत्नी, दुलहिन। ಸೊಸೆ, ಹೆಂಡತಿ, ವಧು, ಮದುಮಗಳು.

वधूटी– स्त्री. दे 'वधू'।

वध्य–वि मार डालने योग्य। ಕೊಲ್ಲಲು ಯೋಗ್ಯವಾದ.

वन– पु. जंगल, पानी। ಅರಣ್ಯ, ಅಡವಿ, ಕಾಡು, ನೀರು.

**वनज, वनरुह**– पु. कमल। ಕಮಲ.

**वनमाली**– पु. श्रीकृष्ण। ಶ್ರೀಕೃಷ್ಣ.

**वनराज**– पु. सिंह, वरुण। ಸಿಂಹ, ವರುಣ.

**वनश्री**– स्त्री. वन की शोभा। ವನದ ಶೋಭೆ.

**वनहास**– पु कॉस। ಕಂಚು.

**वनिता**– स्त्री. स्त्री, प्रियपत्नी। ಸ್ತ್ರೀ, ಹೆಂಗಸು, ಪ್ರಿಯಪತ್ನಿ.

**वनी**– स्त्री छोटा वन। ಚಿಕ್ಕ ಅರಣ್ಯ, ಚಿಕ್ಕ ಕಾಡು.

**वन्य**– वि जंगली। ಕಾಡ, ಅರಣ್ಯದ. पु. शंख। ಶಂಖ.

**वपन**– पु. बीज बोना, बाल बनवाना। ಬಿತ್ತನೆ, ಬೀಜ ಬಿತ್ತುವಿಕೆ, ತಲೆ ಬೋಳಿಸುವಿಕೆ.

**वपु**– पु. देह। ದೇಹ, ಶರೀರ.

**वफा**– स्त्री. सुशीलता, बात का पूरा करना। ಸುಶೀಲತೆ, ಪ್ರಾಮಾಣಿಕತನ, ವಚನ ಪಾಲನೆ.

**वफ़ात**– स्त्री. मौत। ಮರಣ, ಮೃತ್ಯು, ಸಾವು.

**वफ़ादार**– वि सच्चा, कर्तव्य पालक। ಸುಶೀಲ, ಸಚ್ಚರಿತ್ರ, ಕರ್ತವ್ಯಪಾಲಕ, ಪ್ರಾಮಾಣಿಕ.

**वफ़ादारी**–स्त्री. सुशीलता, कर्तव्यपालन। ಸುಶೀಲತೆ, ಕರ್ತವ್ಯನಿಷ್ಠೆ.

**वबाल**– पु. आपत्ति, भार। ಸಂಕಟ, ವಿಪತ್ತು, ತ್ರಾಸ, ಭಾರ, ತೂಕ.

**वमन**– पु. कै। ವಮನ, ವಾಂತಿ, ವಾಕರಿಕೆ.

**वमना**– सक्रि. कै करना। ವಾಂತಿ ಮಾಡು.

**वमि**– स्त्री. कै का रोग। ವಾಂತಿಯಾಗುವ ರೋಗ.

**वय**– स्त्री. उम्र। ವಯಸ್ಸು.

**वयस्क**–वि. उम्रवाला, सयाना। ವಯಸ್ಸಿನ, ವಯಸ್ಸಿಗೆ ಬಂದ, ಪ್ರಾಯಸ್ಥ.

**वयस्य**– पु साथी, मित्र। ಸಂಗಡಿಗ, ಗೆಳೆಯ, ಮಿತ್ರ.

**वयोवृद्ध**–वि बूढा। ಮುದುಕ, ಹಿರಿಯ.

**वरंच**– अव्य. बल्कि, किंतु। ಆದರೆ, ಅಲ್ಲದೆ, ತಿರುಗಿ, ಇಷ್ಟೇ ಅಲ್ಲದೆ.

**वर**– पु. पति, मनोरथ सिद्धि। ಗಂಡ, ಪತಿ, ವರ, ಮನೋರಥ ಸಿದ್ಧಿ, ವರ, ವರದಾನ. वि श्रेष्ठ। ಉತ್ತಮ, ಒಳ್ಳೆಯ, ಶ್ರೇಷ್ಠ.

**वरक़**–पु पत्र, पन्ना, सोने, चॉंदी आदि का पत्तर। ಎಲೆ, ಹಾಳೆ, ಪತ್ರ, ತೆಳುವಾದ ಬಂಗಾರ ಬೆಳ್ಳಿಯ ಹಾಳೆ, ರೇಕು.

**वरग़लाना**–सक्रि बहकाना। ಉಬ್ಬಿಸು, ಪುಸಲಾಯಿಸು, ಮರುಳುಮಾಡು, ಮೋಸ ಮಾಡು.

**वरज़िश**– स्त्री. व्यायाम, कसरत। ವ್ಯಾಯಾಮ.

**वरद**– वि. वर देनेवाला। ವರ ಕೊಡುವವ.

**वरदात्री**– वि स्त्री. वर देनेवाली। ವರ ಕೊಡುವವಳು.

**वरदान**– पु. वर देना। ವರ, ವರಪ್ರನಾದ, ವರ ಕೊಡುವಿಕೆ.

**वरदी**– स्त्री. वह पहनावा जो किसी विशेष विभाग के कर्मचारियों के लिये नियत हो। ಯುನಿಫಾರ್ಮ್, ಕೆಲವೊಂದು ಕಾಮದಾರರ ವಿಶೇಷ ತರದ ಉಡುಪು, ಸಮವಸ್ತ್ರ. वि. गुलाबी। ಗುಲಾಬೀ ಬಣ್ಣದ.

**वरना**– अव्य नही तो। ಇಲ್ಲದಿದ್ದರೆ, ಅನ್ಯಥಾ. पु. ऊँट। ಒಂಟೆ.

**वरन्**– अव्य. बल्कि। ಆದರೆ, ಅಲ್ಲದೆ, ಹಾಗಲ್ಲದೆ.

**वरानना**– स्त्री. सुंदरी। ಸುಂದರ ಸ್ತ್ರೀ.

**वरासत**– स्त्री. बपौती। ವಂಶ ಪರಂಪರೆಯ, ಉತ್ತರಾಧಿಕಾರ, ಪೈತೃಕ ಅಧಿಕಾರ.

**वरासतन्**– क्रिवि. उत्तराधिकार के रूप में। ವಂಶಪರಂಪರೆಯಾಗಿ, ಉತ್ತರಾಧಿಕಾರದ ರೂಪದಲ್ಲಿ.

**वराह**–पु. सुअर, विष्णु। ಕಾಡಹಂದಿ, ಮಿಕ, ವಿಷ್ಣು.

**वरिष्ठ**– वि श्रेष्ठ। ಶ್ರೇಷ್ಠ.

**वरूथिनी**– स्त्री. सेना। ಸೈನ್ಯ.

**वर्ग**– पु. श्रेणी, समूह, जिसकी लंबाई चौडाई सम हो। ಶ್ರೇಣಿ, ಸಾಲು, ಸಮೂಹ, ಜಾತಿ, ವರ್ಗ, ಸಮಭುಜ.

**वर्गलाना**– सक्रि. दे 'वरगलाना'।

**वर्जन**– पु निषेध, त्याग। ನಿಷೇಧ, ತ್ಯಾಗ.

**वर्जित**– वि. निषिद्ध, त्यक्त। ನಿಷೇಧಿಸಿದ, ನಿಷಿದ್ಧವಾದ, ತ್ಯಜಿಸಿದ.

**वर्ज्य**– वि. निषिद्ध, त्याज्य। ನಿಷಿದ್ಧವಾದ, ತ್ಯಜಿಸಲು ಯೋಗ್ಯವಾದ.

**वर्ण**– पु. रंग, जाति, अक्षर, भेद। ಬಣ್ಣ, ಜಾತಿ, ಅಕ್ಷರ, ಭೇದ.

**वर्णन**– पु. बयान, प्रशंसा। ವರ್ಣನೆ, ಹೇಳಿಕೆ, ಪ್ರಶಂಸೆ.

**वर्णनीय**– वि. वर्णन करने योग्य। ವರ್ಣಿಸತಕ್ಕ, ವರ್ಣಿಸಲು ಯೋಗ್ಯವಾದ

**वर्णसंकर**– पु. विभिन्न जातीय माता पिताओ की संतान। ಬೇರೆ ಬೇರೆ ಜಾತಿಯ ತಾಯಿ-ತಂದೆಗಳ ಮಕ್ಕಳು, ಮಿಶ್ರಜಾತಿ.

**वर्णित**– वि कहा हुआ। ಹೇಳಿದ, ವರ್ಣಿಸಿದ.

**वर्ण्य**– वि दे 'वर्णनीय'।

**वर्तन**– पु व्यवहार, बरताव, वृत्ति, पिसाई, पात्र। ವ್ಯವಹಾರ, ನಡತೆ, ವೃತ್ತಿ, ಜೀವನ ನಿರ್ವಾಹ, ಬೀಸುವದು, ಪಾತ್ರೆ.

**वर्तमान**– वि मौजूद। ಸದ್ಯದ. पु. वृत्तात, समाचार। ವೃತ್ತಾಂತ, ಸಮಾಚಾರ.

**वर्द्धक**– वि. बढ़ानेवाला। ಬೆಳೆಯಿಸುವಂಥ.

**वर्द्धमान**–वि बढ़नेवाला। ಬೆಳೆಯುವ.

**वर्म**–पु कवच, आश्रय स्थान। ಕವಚ, ಆಶ್ರಯ ಸ್ಥಾನ.

**वर्महर**– पु. कवच धारण करनेवाला।

कवच ಧರಿಸುವವ.

वर्वर– वि. असभ्य, नीच । ಅಸಭ್ಯ, ಕಾಡು, ನೀಚ.

वर्ष– पु. साल, वर्षा । ವರ್ಷ, ಮಳೆ.

वर्षगांठ– स्त्री जन्मदिन का उत्सव । ಹುಟ್ಟುಹಬ್ಬ, ಜಯಂತಿ.

वर्षण– पु वर्षा । ಮಳೆ, ಮಳೆ ಬೀಳು-ವದು.

वर्षधर– पु. बादल। ಮೋಡ.

वर्षा– स्त्री. वृष्टि, चौमासा । ಮಳೆ, ಮಳೆಗಾಲ, ಚಾತುರ್ಮಾಸ.

वर्ही– पु. मोर । ನವಿಲು.

वलय– पु घेरा, कंकण । ಮಂಡಲ, ಸುತ್ತು, ಬಳೆ, ಕಡಗ.

वलवला– पु. जोश, उमंग, शोर । ಆವೇಶ, ಉತ್ಸಾಹ, ಗದ್ದಲ, ಗಲಭೆ, ಚೀತ್ಕಾರ.

वलि– स्त्री. लकीर, झुर्रि, पंक्ति, बलि। ಗೆರೆ, ರೇಖೆ, ಸುಕ್ಕು, ನಿರಿಗೆ, ಸಾಲು, ಬಲಿ.

वली– स्त्री. लकीर, झुर्रि, पंक्ति। ಗೆರೆ, ರೇಖೆ, ಸುಕ್ಕು, ನಿರಿಗೆ, ಸಾಲು. पु. मालिक, साधु। ಒಡೆಯ, ಮಾಲಕ, ಸ್ವಾಮಿ, ಸಾಧು, ಸಂತ.

वल्कल– पु. वृक्ष की छाल, छाल का वस्त्र । ಗಿಡದ ತೊಗಟೆ, ನಾರು, ತೊಗಟೆಯ ಬಟ್ಟೆ, ನಾರು ಬಟ್ಟೆ.

वल्द– पु. बेटा । ಮಗ, ಪುತ್ರ.

वल्दियत– स्त्री. पिता के नाम का परिचय। ತಂದೆಯ ಹೆಸರು ಹಾಗೂ ಪರಿಚಯ.

वल्मीक, वल्मीकि–पु बॉमी, वाल्मीकि मुनि । ಹಾವಿನ ಹುತ್ತ, ವಾಲ್ಮೀಕಿ-ಮುನಿ.

वल्लभ– वि. प्रिय। ಪ್ರಿಯ. पु. पति, स्वामी । ಪತಿ, ಒಡೆಯ, ಸ್ವಾಮಿ.

वल्लरी– स्त्री. लता । ಲತೆ, ಬಳ್ಳಿ.

वल्लाह–अव्य खुदा की कसम, सचमुच। ದೇವರ ಆಣೆ ಯಾಗಿ, ನಿಜವಾಗಿ, ಸತ್ಯವಾಗಿ.

वल्लिका– स्त्री लता। ಬಳ್ಳಿ.

वल्ली– स्त्री दे. 'वल्लरी'।

वश– पु. काबू, अधिकार, इच्छा । ವಶ, ಅಧಿಕಾರ, ಅಂಕೆ, ಇಚ್ಛೆ.

वशी– वि. जो अपने को वशमें रखे। ತನ್ನ ಮನಸ್ಸನ್ನು ವಶದಲ್ಲಿಟ್ಟು-ಕೊಂಡವ.

वशीभूत–वि. आधीन। ಅಧೀನವಾದ.

वसंत– पु वहार का मौसिम । ವಸಂತ ಋತು.

वसंतदूत, वसंतव्रत– पु. कोयल । ಕೋಗಿಲೆ.

वसंती– पु. हलका पीला रंग । ತಿಳಿ ಹಳದಿ ಬಣ್ಣ. वि. हलके पीले रंगका। ತಿಳಿ ಹಳದೀ ಬಣ್ಣದ.

वसअत– स्त्री चौड़ाई, शक्ति। ಅಗಲ, ವಿಸ್ತಾರ, ಶಕ್ತಿ, ಸಾಮರ್ಥ್ಯ.

वसन– पु कपड़ा । ವಸ್ತ್ರ.

वसह– पु. बैल । ಎತ್ತು, ಬಸವ.

वसा– पु. चरवी । ನೆಣ, ಮೇಧಸ್ಸು.

वसीअ– वि. विस्तृत। ವಿಸ್ತಾರವಾದ.

वसीक़ा– पु. वह धन जो सूद की गरज से सरकारी खजाने में जमा किया जाय, ऐसे धन का सूद। ಹಕ್ಕುದಾರರಿಗೆ ಬಡ್ಡಿ ದೊರೆಯುವಂತೆ ಸರಕಾರೀ ಬೊಕ್ಕಸದಲ್ಲಿ ಇಟ್ಟ ಹಣ, ಈ ಹಣದ ಬಡ್ಡಿ.

वसीयत– स्त्री. वह व्यवस्था जो मरने के समय मनुष्य अपनी संपत्ति के विभाग प्रबंध आदि के विषय में लिख देता हो। ಮರಣ ಸಮಯದಲ್ಲಿ ತನ್ನ ಆಸ್ತಿಯ ವ್ಯವಸ್ಥೆಯ ಬಗ್ಗೆ ಬರೆದಿಟ್ಟ ಸಂಗತಿ, ಮರಣಶಾಸನ, ಉಯಿಲು.

वसीयतनामा– पु वह कागज जिसपर वसीयत की व्यवस्था लिखी हो। ಮೃತ್ಯುಪತ್ರ, ಮರಣಶಾಸನ, ಉಯಿಲು.

वसीला– पु. जरिया, संबंध, आश्रय। ಹಾದಿ, ಉಪಾಯ, ಸಂಬಂಧ, ಆಶ್ರಯ, ಆಧಾರ.

वसुंधरा– पु. पृथिवी। ಪೃಥ್ವಿ.

वसुदेव– पु. श्रीकृष्ण के पिता। ಶ್ರೀಕೃಷ್ಣನ ತಂದೆ.

वसूल– वि. प्राप्त। ದೊರೆತ, ಸಿಕ್ಕ, ಪ್ರಾಪ್ತ. पु. पहुंचना, प्राप्ति। ಪ್ರಾಪ್ತಿ, ವಸೂಲು, ಸಂದಾಯ, ಪಾವತಿ

वसूली– स्त्री. प्राप्ति। ಪ್ರಾಪ್ತಿ, ವಸೂಲಿ, ವಸೂಲಾತಿ.

वस्तु– स्त्री. चीज, पदार्थ। ವಸ್ತು, ಪದಾರ್ಥ.

वस्तुत:– क्रिवि. दरअसल। ನಿಜವಾಗಿಯೂ.

वस्फ़– पु. गुण, विशेषता, प्रशंसा। ಗುಣ, ವಿಶೇಷತೆ, ಪ್ರಶಂಸೆ, ಸ್ತುತಿ.

वस्त्र– पु. कपड़ा। ಬಟ್ಟೆ, ಉಡುಪು, ಅರಿವೆ.

वस्ल–पु संयोग, मिलन। ಸಂಯೋಗ, ಏಕೀಕರಣ, ಕೂಡುವಿಕೆ, ಮಿಶ್ರಣ, ಸಮಾಗಮ.

वह– सर्व. एक निश्चयवाचक सर्वनाम। ಅವನು, ಅವಳು, ಅದು, ಆ.

वहदत– स्त्री. एकत्व। ಏಕ, ಏಕತ್ವ.

वहन– पु. ढोना। ಹೊರುವಿಕೆ.

वहम– पु. झूटी शंका, भ्रम। ಸುಳ್ಳು ಸಂಶಯ, ಅಂಜಿಕೆ, ತಪ್ಪುತಿಳಿವಳಿಕೆ, ಭ್ರಮೆ.

वहशत– स्त्री. असभ्यता, मूर्खता, घबराहट। ಅಸಭ್ಯತೆ, ಅನಾಗರಿಕತೆ, ಪಶುವೃತ್ತಿ, ಮೂರ್ಖತನ, ಅಂಜಿಕೆ, ಭಯ, ಗಾಬರಿ.

वहशी– वि जंगली, असभ्य, घबराया हुआ। ಕಾಡು, ಅಸಭ್ಯ, ಅಸಂಸ್ಕೃತ, ಒರಟಾದ, ಅಂಜಿದ, ಬೆದರಿದ.

वहाँ– क्रिवि. उस जगह। ಅಲ್ಲಿ, ಆ ಸ್ಥಳದಲ್ಲಿ.

वहित्र– पु. वहिनी– स्त्री. नाव। ನಾವೆ, ಹಡಗ.

वहिर्गत– वि. वाहर गया हुआ, वाहर का। ಹೊರಗೆ ಹೋದ, ಹೊರಗಿನ.

वहीं– क्रिवि. वहाँ ही, उसी जगह।

ಅಲ್ಲಿಯೇ, ಅದೇ ಸ್ಥಳದಲ್ಲಿ,ಅಲ್ಲೇ.

वही- सर्व पूर्वोक्त व्यक्ति । ಅವನೇ, ಅವಳೇ, ಅದೇ.

वहीद- वि. अनुपम । ಅನುಪಮ,ಎಣೆ ಯಿಲ್ಲದ.

वह्नि-पु अग्नि, तीन की संख्या। ಅಗ್ನಿ, ಬೆಂಕಿ, ಮೂರರ ಸಂಖ್ಯೆ.

वांछनीय- वि. इष्ट । ಇಚ್ಛಿಸಿದ, ಇಚ್ಛಿಸಲು ಯೋಗ್ಯವಾದ.

वांछा- स्त्री. अभिलाषा । ಅಭಿಲಾಷೆ, ಇಚ್ಛೆ.

वांछित- वि इच्छित । ಇಚ್ಛಿಸಿದ, ಬಯಸಿದ.

वा- अव्य. अथवा । ಅಥವಾ. सर्व. 'वह' का विकृत रूप ।

वाइज़- पु. धर्मोपदेशक । ಧರ್ಮೋಪದೇಶಕ.

वाक- स्त्री. वाणी, सरस्वती । ವಾಣಿ, ಸರಸ್ವತಿ. पु. वाक्य । ವಾಕ್ಯ.

वाकई- अव्य. सचमुच । ನಿಜವಾಗಿ. वि. सच । ನಿಜವಾದ.

वाक़फ़ियत- स्त्री. जानकारी । ಜ್ಞಾನ, ತಿಳಿವಳಿಕೆ, ಪರಿಚಯ, ಅನುಭವ.

वाक़या- पु. घटना । ಘಟನೆ, ನಡೆದ ಸಂಗತಿ, ವೃತ್ತಾಂತ, ಪ್ರಸಂಗ.

वाक़ा-वि. होनेवाला, स्थित । ಆಗುವ, ಸಂಭವಿಸುವ, ಸ್ಥಿತ, ನಿಂತ.

वाकिफ़- वि जानकार । ಬಲ್ಲವ, ತಿಳಿದವ, ಪರಿಚಿತ, ಅಭಿಜ್ಞ.

वाक्फ़ियत- स्त्री. दे. 'वाक़फियत' ।

वागीश्वरी-स्त्री. सरस्वती देवी । ಸರಸ್ವತಿ ದೇವಿ.

वाग्दंड-पु फटकार । ಬೆದರಿಕೆ,ಗದರಿಕೆ.

वाग्दान-पु. देने का वचन । ಕೊಡುವ ವಚನ.

वाग्मी- पु. श्रेष्ट वक्ता । ಶ್ರೇಷ್ಠ ಭಾಷಣಕಾರ.

वाङ्मय- पु साहित्य । ಸಾಹಿತ್ಯ. वि. वाणी विषयक । ಮಾತಿಗೆ ಸಂಬಂಧಿಸಿದ.

वाचक- वि. कहनेवाला, सूचक । ಹೇಳುವ, ಓದುವ, ಸೂಚಿಸುವ, ಬೋಧಿಸುವ. पु. बोलनेवाला, पढ़नेवाला । ಮಾತಾಡುವವ,ಓದುವವ.

वाचन- पु. पठन, बताना । ಪಠನೆ, ಓದುವಿಕೆ, ಹೇಳುವಿಕೆ.

वाचनालय- पु. पुस्तक समाचारपत्र आदि पढ़ने का स्थान । ವಾಚನಾಲಯ.

वाचा- स्त्री. वचन, शब्द । ವಚನ, ಮಾತು, ನುಡಿ, ಶಬ್ದ.

वाचाल-वि बहुत बोलनेवाला । ಬಹಳ ಮಾತಾಡುವ, ಮಾತುಗುಳಿ, ವಾಚಾಳ.

वाची- वि. सूचक । ವಾಚಕ, ಸೂಚಿಸುವ, ಬೋಧಿಸುವ.

वाच्- स्त्री. वाणी । ವಾಣಿ, ಮಾತು.

वाच्य- वि. कथनीय । ಹೇಳತಕ್ಕ, ಹೇಳಬಹುದಾದ.

वाज़- पु. उपदेश, कथा, धर्मोपदेश ।

ಉಪದೇಶ, ಶಿಕ್ಷಣ, ಕತೆ, ಧರ್ಮೋಪದೇಶ.

वाज़िब, वाज़िबी– वि उचित, ठीक। ಉಚಿತ, ಯೋಗ್ಯ, ಸರಿಯಾದ. पु वेतन या वृत्ति। ವೇತನ, ಪಗಾರ, ವೃತ್ತಿ.

वाजी– पु घोडा, फटे दूध का पानी। ಕುದುರೆ, ಒಡೆದ ಹಾಲಿನ ನೀರು.

वाट–पु मार्ग। ಮಾರ್ಗ, ಹಾದಿ, ದಾರಿ.

वाटिका– स्त्री बगीचा। ಹೂದೋಟ, ವಾಟಿಕೆ, ಕ್ರೀಡಾಸ್ಥಾನ, ಉದ್ಯಾನ.

वाणिज्य– पु. व्यापार। ವ್ಯಾಪಾರ.

वाणी–स्त्री शब्द, वचन, भाषा, सरस्वती, जीभ। ಶಬ್ದ, ಮಾತು, ವಚನ, ಭಾಷೆ, ಸರಸ್ವತಿ, ನಾಲಿಗೆ.

वात– पु हवा। ಹವೆ, ಗಾಳಿ, ವಾಯು.

वातायन– पु खिडकी। ಕಿಡಕಿ, ಜಾಳಾಂದ್ರ

वातुल– वि. उन्मत्त। ಉನ್ಮತ್ತ, ತಲೆತಿರಕ, ಹುಚ್ಚ.

वात्याचक्र– पु बवंडर। ಬಿರುಗಾಳಿ.

वात्सल्य–पु संतान का प्यार। ಮಕ್ಕಳ ಮೇಲಿನ ಪ್ರೇಮ, ಮಮತೆ.

वाद– पु. बहस, तर्क, सिद्धांत। ಚರ್ಚೆ, ತರ್ಕ, ವಿಚಾರ, ಸಿದ್ಧಾಂತ.

वादन– पु वाद्य, बाजा बजाना। ವಾದ್ಯ, ವಾದ್ಯ ಬಾರಿಸುವಿಕೆ.

वादविवाद, वादानुवाद– पु. बहस। ಚರ್ಚೆ, ಶಾಸ್ತ್ರಾರ್ಥ.

वादा– पु. प्रतिज्ञा, निश्चित समय। ಪ್ರತಿಜ್ಞೆ, ಕರಾರು, ಮಾತು, ವಚನ, ನಿಶ್ಚಿತ ಅವಧಿ.

—पूरा करना = प्रतिज्ञा पूरा करना। ಪ್ರತಿಜ್ಞೆ ಪೂರ್ಣ ಮಾಡು.

वादी– पु वक्ता, मुद्दई। ಮಾತಾಡುವವ, ಚರ್ಚಿಸುವವ, ವಾದಿ.

वानर–पु बंदर। ಮಂಗ, ಕಪಿ, ಕೋತಿ.

वापस, वापिस– वि. लौटा या लौटाया हुआ। ತಿರುಗಿದ, ತಿರುಗಿ ಬಂದ, ಹಿಂತಿರುಗಿಸಲ್ಪಟ್ಟ, ವಾಪಸು ಕಳಿಸಿದ.

वापसी– स्त्री लौटाने की क्रिया, लौटने की क्रिया। ತಿರುಗಿ ಬರುವಿಕೆ, ತಿರುಗಿ ಕೊಡುವಿಕೆ. वि. दे 'वापस'।

वापिका, वापी– स्त्री. बावली। ಬಾವಿ.

वाम– वि बायाँ, टेढा, प्रतिकूल। ಎಡಮಗ್ಗಲಿನ, ವಕ್ರ, ಡೊಂಕ, ವಿರುದ್ಧ, ಪ್ರತಿಕೂಲ. पु. वामदेव, वरुण, काम। ವಾಮದೇವ, ವರುಣ, ಕಾಮ. स्त्री. स्त्री। ಹೆಂಗಸು.

वामन– पु. विष्णु का एक अवतार। ವಿಷ್ಣುವಿನ ಒಂದು ಅವತಾರ. वि. बौना। ಗಿಡ್ಡ, ಕುಳ್ಳ.

वामा– स्त्री स्त्री। ಸ್ತ್ರೀ, ಹೆಂಗಸು.

वायस– पु कौआ। ಕಾಗೆ.

वायु– स्त्री हवा। ಹವೆ.

वार– पु. आक्रमण, अवसर, द्वार, रोक, किनारा, समूह। ಆಕ್ರಮಣ, ಹೊಡೆತ, ಏಟು, ಸಂಧಿ, ದ್ವಾರ, ತಡೆ, ತೀರ, ದಂಡೆ, ಸಮೂಹ.

**वारद, वारिद**– पु बादल । ಮೋಡ.

**वारदात**– स्त्री दुर्घटना । ದುರ್ಘಟನೆ, ಹೊಡೆದಾಟ, ಗಲಭೆ.

**वारन**–पु. वदनवार, हाथी । ತೋಳಲು, ಆನೆ. स्त्री निछावर । ಬಲಿ,ನಿವಾಳಿ.

**वारना**– सक्रि. निछावर करना। ಆಹುತಿಯಾಗು, ಬಲಿ ಕೊಡು, ತ್ಯಾಗ ಮಾಡು. पु. निछावर । ಅರ್ಪಣೆ, ಬಲಿ, ಆಹುತಿ, ತ್ಯಾಗ, ನಿವಾಳಿ.

**वारनारी**– स्त्री. वेश्या । ವೇಶ್ಯೆ, ಸೂಳೆ.

**वारपार**– अव्य. इस किनारे से उस किनारे तक। ಈ ದಂಡೆಯಿಂದ ಆ ದಂಡೆಯ ವರೆಗೆ, ಆರಪಾರ, ಈ ತೀರದಿಂದ ಆ ತೀರದ ವರೆಗೆ. पु अत, पूर्ण विस्तार । ಅಂತ, ಕೊನೆ, ಪೂರ್ಣ ವಿಸ್ತಾರ, ಎರಡೂ ಧಡ.

**वारफेर**– पु. निछावर । ಬಲಿ, ಬಲಿ ಕೊಟ್ಟ ವಸ್ತು, ನಿವಾಳಿ.

**वारा**– पु. वचत, लाभ । ಉಳಿತಾಯ, ಮಿತವ್ಯಯ, ಲಾಭ. वि. निछावर किया हुआ, सस्ता । ಬಲಿಕೊಟ್ಟ, ಅಗ್ಗ.

**वारान्यारा**– पु. फैसला । ನಿರ್ಣಯ, ಕೊನೆ, ತೀರ್ಮಾನ.

**वारिद**– पु. मेघ । ಮೋಡ.

**वारिधि, वारिनिधि**– स्त्री समुद्र । ಸಮುದ್ರ.

**वारियाँ**–स्त्री. निछावर । ಬಲಿ, ನಿವಾಳಿ.

**वारिस**– पु. उत्तराधिकारी । ಉತ್ತರಾಧಿಕಾರಿ, ವಾರಸುದಾರ.

**वारीश**– पु. समुद्र । ಸಮುದ್ರ.

**वार्त्त**– पु. स्वास्थ्य । ಆರೋಗ್ಯ, ಸ್ವಾಸ್ಥ್ಯ.

**वार्त्ता**– स्त्री. वृत्तांत, खबर, वातचीत । ವೃತ್ತಾಂತ, ಮಾತುಕತೆ, ವಿಷಯ, ಸುದ್ದಿ, ಚರ್ಚೆ.

**वार्तालाप**–पु. बातचीत । ಸಂಭಾಷಣೆ, ಮಾತುಕತೆ.

**वार्द्धक,वार्द्धक्य**– पु बुढापा । ಮುಪ್ಪು.

**वार्षिक**– वि. सालाना । ವಾರ್ಷಿಕ, ವರ್ಷದ

**वाला**–प्रत्य संबंधसूचक प्रत्यय । (उदा: मकान-वाला)ಉಳ್ಳವ,ಮಾಡುವವ, ಒಡೆಯ.

**वालिद**– पु पिता । ತಂದೆ, ಅಪ್ಪ.

**वालिदा**--स्त्री माता । ತಾಯಿ, ಮಾತೆ.

**वालुका**– स्त्री. बालू । ಉಸುಕು.

**वावैला**– पु. हल्लागुल्ला, रोनापीटना । ಗದ್ದಲ, ಚೀರಾಟ, ಒದರಾಟ, ವಿಲಾಪ, ಕೂಗಾಟ.

**वास**– पु गंध, निवास, घर । ಗಂಧ, ವಾಸನೆ, ನಿವಾಸ, ಮನೆ.

**वासन**– पु. वस्त्र, सुगंधित करना । ವಸ್ತ್ರ, ಸುಗಂಧಿತ ಮಾಡುವಿಕೆ.

**वासना**– स्त्री भावना, इच्छा, संस्कार । ಭಾವನೆ, ಇಚ್ಛೆ, ಸಂಸ್ಕಾರ.

**वासर**– पु. दिन । ದಿನ, ಹಗಲು, ದಿವಸ.

**वासिल**-- वि प्राप्त, वसूल । ದೊರೆತ, ಸಿಕ್ಕ, ವಸೂಲಾದ.

वासी– पु रहनेवाला । ರಹವಾಸಿ.

वास्तव– वि. यथार्थ । ಯಥಾರ್ಥ, ವಾಸ್ತವಿಕವಾದ.

वास्तव्य– वि रहने योग्य, रहनेवाला । ವಾಸಿಸಲು ಯೋಗ್ಯವಾದ, ಇರುವ, ವಾಸಿಸುವ

वास्ता– पु संबंध । ಸಂಬಂಧ,ಸ್ನೇಹ.

वास्तु–पु घर बनाने की भूमि, मकान। ಮನೆ ಕಟ್ಟುವ ಸ್ಥಳ, ಮನೆ.

वास्ते– अव्य लिये, हेतु । ಸಲುವಾಗಿ, ಕಾರಣದಿಂದ, ಬಗ್ಗೆ, ದೆಸೆಯಿಂದ.

वाह– अव्य आनंद आश्चर्य आदि सूचक शब्द। ಭಲೆಭಲೆ! ವಾಹವ್ವಾ! ಭಾಪುರೆ !

वाहक– पु. वहन करनेवाला, सारथी । ಹೊರುವವ, ವಹನ ಮಾಡುವವ, ಸಾರಥಿ.

वाहन– पु सवारी । ವಾಹನ.

वाहना-सक्रि. ढोना, चलाना। ಹೊರು, ನಡಿಸು.

वाहवाही– स्त्री. प्रशसा, तारीफ । ಪ್ರಶಂಸೆ, ವರ್ಣನೆ, ಹೊಗಳಿಕೆ, ಕೊಂಡಾಟ

वाहिनी–स्त्री सेना, नदी । ಸೈನ್ಯ, ನದಿ.

वाहिब– वि क्षमा करनेवाला । ಕ್ಷಮಿಸುವವ.

वाहियात– वि. व्यर्थ, खराब । ಉಪಯೋಗವಿಲ್ಲದ, ನಿರುಪಯೋಗಿ, ಕೆಟ್ಟ, ನಿರರ್ಥಕ.

वाही– वि. निकम्मा, मूर्ख, आवारा । ನಿರುದ್ಯೋಗಿ, ನಿರರ್ಥಕ, ಮೂರ್ಖ, ದುಷ್ಟ, ತುಂಟ.

वाही– वि ले जानेवाला । ತೆಗೆದುಕೊಂಡು ಹೋಗುವವ, ವಹನ ಮಾಡುವವ.

वाहीतबाही– स्त्री. अंडबंड बात, गाली गलौज । ನಿರರ್ಥಕ ಮಾತು, ಅರ್ಥವಿಲ್ಲದ ಮಾತು, ಬೈಗಳು. वि बेहूदा, आवारा, अंडबंड । ಅಸಭ್ಯ, ಒರಟು, ಅಶಿಷ್ಟ, ದುಷ್ಟ, ಪೋಕರಿ, ಗೊತ್ತುಗುರಿಇಲ್ಲದ, ಯದ್ವಾತದ್ವಾ.

वाह्य– वि बाह्य । ಹೊರಗಿನ. पु रथ। ರಥ.

विंद– पु दे. ‘ विंदु ’।

विंदु– पु. बिंदी, बूंद, कण । ಬಿಂದು, ಅನುಸ್ವಾರ, ಪೂಜಿ, ಹನಿ, ಕಣ.

विंध, विंध्य, विंध्यकूट– पु विंध्याचल। ವಿಂಧ್ಯಪರ್ವತ.

विकच– वि खिला हुआ, केशरहित । ಅರಳಿದ, ಕೂದಲಿಲ್ಲದ. पु. झंडा । ಬಾವುಟ.

विकट–वि भयंकर, टेढा। ಭಯಂಕರ, ಕಠಿಣ, ವಕ್ರ, ಡೊಂಕಾದ.

विकरार– वि व्याकुल । ವ್ಯಾಕುಲ, ಕಳವಳಗೊಂಡ. दे ‘ विकराल ’।

विकराल– वि. भयंकर । ಭಯಂಕರ, ಭೀಷಣ.

विकल–वि व्याकुल, खंडित, कलाहीन। ವ್ಯಾಕುಲ, ಅಪೂರ್ಣ, ತುಂಡಾದ, ಕಲಾಹೀನ.

**विकलाना**– अक्रि. बेचैन होना । ವ್ಯಾಕುಲ ಪಡು.

**विकलमष**–वि निष्पाप । ಪಾಪರಹಿತ, ನಿಷ್ಪಾಪ.

**विकसना**– अक्रि खिलना । ಅರಳು, ವಿಕಸಿಸು.

**विकार**–पु परिवर्तन, खराबी, वासना । ಪರಿವರ್ತನೆ, ಬದಲು, ದೋಷ, ಕುಂದು, ಇಚ್ಛೆ, ಮನಸ್ಸಿನ ಬದಲಾವಣೆ.

**विकारी**–वि. दोषयुक्त, बुरीवासनावाला, जिसमें उलटफेर हुआ हो । ದೋಷಯುಕ್ತ, ದುಷ್ಟ ಇಚ್ಛೆಯು, ಬದಲಾದ, ಪರಿವರ್ತಿತ.

**विकाश, विकास**– पु वृद्धि, खिलना । ವೃದ್ಧಿ, ಬೆಳವಣಿಗೆ, ಅರಳುವಿಕೆ.

**विकासना**– सक्रि. विकसित करना, प्रकट करना । ಅರಳಿಸು, ಬೆಳಿಸು, ಪ್ರಕಟಿಸು. अक्रि. विकसित होना, प्रकट होना । ಅರಳು, ಬೆಳೆ, ಪ್ರಕಟವಾಗು.

**विकीर्ण**– वि छितराया हुआ । ಹರಡಿದ, ಚಲ್ಲಿದ, ಅತ್ತಿತ್ತ ಬಿದ್ದ.

**विकृत**– वि विगडा हुआ, कुरूप। ಕೆಟ್ಟ, ಅಂದಗೆಟ್ಟ, ಕುರೂಪ.

**विक्रम**– पु. बल, शौर्य, विक्रमादित्य । ಬಲ, ಪ್ರತಾಪ, ಶೌರ್ಯ, ವಿಕ್ರಮಾದಿತ್ಯ.

**विक्रय**– पु. **विक्री**– स्त्री. वेचने की क्रिया । ಮಾರಾಟ.

**विक्रेता**– पु. बेचनेवाला । ಮಾರುವವ.

**विक्षत**– वि घायल । ಗಾಯಗೊಂಡ.

**विक्षिप्त**– वि फेंका हुआ, पागल, व्याकुल । ಹರಡಿದ,ಒಗೆದ,ಹುಚ್ಚ, ತಲೆತಿರುಕ, ವ್ಯಾಕುಲ, ಗಾಬರಿಗೊಂಡ.

**विक्षोभ**– पु. मन की अस्थिरता । ಮನಸ್ಸಿನ ಚಂಚಲತೆ, ಗಾಬರಿ.

**विख**– पु जहर । ವಿಷ.

**विखान**– पु विषाण । ಕೋಡು.

**विख्यात**– वि. प्रसिद्ध । ಪ್ರಸಿದ್ಧ, ಹೆಸರಾದ.

**विख्याति**– स्त्री प्रसिद्धि । ಪ್ರಸಿದ್ಧಿ.

**विगत**–वि बीता हुआ, पिछला,रहित । ಕಳೆದ, ಹಿಂದಿನ, ರಹಿತ.

**विगति**– स्त्री बुरी गति । ದುರ್ಗತಿ.

**विगालित**– वि. जो वह गया हो, विगडा हुआ । ಹರಿದು ಹೋದ, ಕರಗಿದ, ಕೆಟ್ಟ.

**विग्रह**– पु युद्ध, कलह, शरीर, रूप, मूर्ती । ಯುದ್ಧ, ಜಗಳ, ಶರೀರ, ಆಕೃತಿ, ಮೂರ್ತಿ, ಪ್ರತಿಮೆ.

**विघन,विघ्न**–पु. वाधा। ಅಡ್ಡಿ,ಆತಂಕ.

**विघात**– पु चोट, वाधा । ಪೆಟ್ಟು, ಆಘಾತ, ಬಾಧೆ.

**विचक्षण, विचच्छन**– वि. बुद्धिमान्, चतुर । ಬುದ್ಧಿವಂತ, ಚತುರ.

**विचरण, विचरन**– पु. भ्रमण । ತಿರುಗಾಟ, ಭ್ರಮಣ

**विचरना**– अक्रि घूमना । ತಿರುಗಾಡು,

ಅಲೆದಾಡು, ವಿಹರಿಸು.

विचल– वि अस्थिर। ಚಂಚಲ, ಅಸ್ಥಿರ, ಗಾಬರಿಗೊಂಡ.

विचलना– अक्रि स्थानभ्रष्ट होना, घबराना । ಸ್ಥಾನಭ್ರಷ್ಟನಾಗು, ಚಂಚಲವಾಗು, ಅಂಜು, ಗಾಬರಿಯಾಗು.

विचलाना– सक्रि विचलित करना, घबरा देना । ಅತ್ತಿತ್ತ ಸರಿದಾಡಿಸು, ಸ್ಥಾನಭ್ರಷ್ಟ ಮಾಡು, ಪ್ರತಿಜ್ಞೆ ಮುರಿಸು, ಗಾಬರಿ ಪಡಿಸು.

विचलित– वि. अस्थिर, अपनी प्रतिज्ञा छोड़ा हुआ । ಅಸ್ಥಿರ, ಚಂಚಲ, ಸ್ಥಾನಭ್ರಷ್ಟ, ಗಾಬರಿಗೊಂಡ, ಪ್ರತಿಜ್ಞೆ ಮುರಿದ.

विचार– पु. ख़याल, भावना। ವಿಚಾರ, ಭಾವನೆ, ತತ್ವನಿರ್ಣಯ.

विचारक–पु. विचार करनेवाला, न्यायाधीश । ವಿಚಾರ ಮಾಡುವವ, ತತ್ವ ನಿರ್ಣಯ ಮಾಡುವವ, ನ್ಯಾಯಾಧೀಶ.

विचारणीय– वि विचार करने योग्य । ಆಲೋಚಿಸಬೇಕಾದ, ಆಲೋಚಿಸ ತಕ್ಕ.

विचारना– सक्रि. सोचना, गौर करना । ವಿಚಾರ ಮಾಡು, ಲಕ್ಷ್ಯ ಕೊಡು, ವಿಚಾರಿಸು.

विचारालय– पु. कचहरी । ನ್ಯಾಯಾಲಯ.

विचारित– वि. सोचा विचारा हुआ । ವಿಚಾರ ಮಾಡಿದ.

विचित्रांग–पु मोर, व्याघ्र । ನವಿಲು, ಹುಲಿ.

विचित्रित– वि कई रंगोंसे चित्रित । ಅನೇಕ ಬಣ್ಣಗಳಿಂದ ಚಿತ್ರಿತವಾದ.

विचेतन–वि. चेतनाहीन, विवेक रहित। ಚೇತನೆಯಿಲ್ಲದ, ವಿವೇಕವಿಲ್ಲದ.

विचेता–पु, नीच, मूर्ख, घबड़ाया हुआ । ನೀಚ, ಮೂರ್ಖ, ಅಂಜಿದ,ಗಾಬರಿಗೊಂಡ.

विच्छिन्न–वि विभक्त, पृथक् । ತುಂಡು ಮಾಡಿದ,ಬೇರ್ಪಡಿಸಿದ, ಕತ್ತರಿಸಿದ.

विच्छेद, विच्छेदन– पु. पृथक्करण, वियोग, विनाश । ಪೃಥಕ್ಕರಣ, ಬೇರ್ಪಡಿಸುವಿಕೆ,ವಿಯೋಗ,ನಾಶ, ಹಾಳು.

विछोई– पु वियोगी । ಅಗಲಿದವ (ಹೆಂಡತಿಯನ್ನು).

विछोह– पु वियोग । ಅಗಲಿಕೆ,ವಿರಹ, ವಿಯೋಗ.

विजई विजयी–पु विजय प्राप्त करने या जीतने वाला। ವಿಜಯಿ, ಗೆಲ್ಲುವವ.

विजन– वि एकांत । ಏಕಾಂತ. पु. पंखा । ಬೀಸಣಿಕೆ.

विजना– पु. पंखा । ಬೀಸಣಿಕೆ.

विजय– स्त्री. जीत । ಗೆಲವು, ಜಯ.

विजयी– वि दे ' विजई '।

विजातीय– वि अन्य जातिका । ಅನ್ಯ ಜಾತಿಯ, ಎರಡನೆಯ ಜಾತಿಯ.

विज़ारत– स्त्री. मन्त्रित्व । ಮಂತ್ರಿಯ

ಪದ ಅಥವಾ ಹುದ್ದೆ.

**विजित**– वि. जो जीत लिया गया हो, हारा हुआ। ಗೆಲ್ಲಲ್ಪಟ್ಟ, ವಶವಮಾಡಿ ಕೊಳ್ಳಲ್ಪಟ್ಟ.

**विजेता**– पु. जीतनेवाला । ವಿಜಯಿ, ಗೆದ್ದವ, ಜಯ ಹೊಂದಿದವ.

**विजोर**– वि कमजोर । ಅಶಕ್ತ.

**विज्जु, विज्जुलता**– स्त्री विजली । ಮಿಂಚು, ವಿದ್ಯುತ್ತು.

**विज्ञ**–वि. जाननेवाला,पंडित । ಬಲ್ಲವ, ಚತುರ, ಪಂಡಿತ.

**विज्ञप्ति**– स्त्री सूचना, इश्तिहार । ಸೂಚನೆ, ಪ್ರಕಟಣೆ, ವಿಜ್ಞಾಪನೆ,ಅರಿಕೆ.

**विज्ञान**– पु. शास्त्र, विशिष्ट ज्ञान । ಶಾಸ್ತ್ರ, ವಿಶಿಷ್ಟ ಜ್ಞಾನ.

**विज्ञापना**– स्त्री सूचना। ಸೂಚನೆ, ಅರಿಕೆ.

**विट**– पु विष्टा, लंपट, धूर्त । ಮಲ, ಲಂಪಟ, ವೇಶ್ಯಾಗಾಮಿ, ಧೂರ್ತ.

**विटप**– पु वृक्ष, नयी शाखा । ಗಿಡ, ಮರ, ಚಿಗುರು.

**विटपी**– पु. वृक्ष, वटवृक्ष । ಗಿಡ,ಮರ, ಆಲದ ಮರ.

**विडंबना**–स्त्री. अनुकरण, हॅसी, फटकार, अपकीर्ति। ಅನುಕರಣ,ಉಪಹಾಸ, ಬೆದರಿಕೆ, ಅಪಕೀರ್ತಿ, ನಾಚಿಕೆಯ ಸಂಗತಿ.

**विडरना**– अक्रि तितर वितर होना । ಹರಡಿ ಹೋಗು, ಚದರಿ ಹೋಗು, ಚೆಲ್ಲಾಪಿಲ್ಲಿಯಾಗು.

**विडराना विडारना**–सक्रि तितर वितर करना, भगाना, नष्ट करना । ಹರಡು, ಚದರಿಸು, ಎರಚು, ಓಡಿಸು, ಹಾಳು ಮಾಡು.

**विडाल**– पु. विल्ली । ಬೆಕ್ಕು.

**वितंडा**– पु व्यर्थ का विवाद, अपने पक्ष का समर्थन । ವ್ಯರ್ಥವಾದ ವಾದ-ವಿವಾದ, ವ್ಯರ್ಥ ಜಗಳ, ಸ್ವಪಕ್ಷ ಸಮರ್ಥನೆ.

**वितति**– स्त्री विस्तार । ವಿಸ್ತಾರ.

**वितरण,वितरन**– पु. बॉटना। ಹಂಚುವಿಕೆ, ಕೊಡುವಿಕೆ.

**वितरना**– सक्रि. बॉटना । ಹಂಚು, ಕೊಡು.

**वितान**–पु चॅदोवा, फैलाव। ಮಂಟಪ, ವಿಸ್ತಾರ.

**वितानना**–सक्रि तानना,फैलाना। ಬಿಗಿ, ಡೇರೆ ಹೊಡಿ, ಹರಡಿಸು.

**वित्त**– पु धन । ಹಣ, ಐಶ್ವರ್ಯ.

**विथकना**– अक्रि. शिथिल होना, मुग्ध होनेपर कुछ न बोल सकना । ಶಿಥಿಲವಾಗು,ದಣಿ,ಕರಗಿಹೋಗು,ಮುಗ್ಧನಾಗಿ ಮಾತಾಡಲಾರದಾಗು.

**विथराना, विथारना**– सक्रि फैलाना । ಹರಡು, ಚದರಿಸು, ಎರಚು.

**विदग्ध**– वि. पंडित, जला हुआ । ಪಂಡಿತ, ಚತುರ, ಸುಟ್ಟ.

**विदरना**–सक्रि. अक्रि फाड़ना, फटना । ಹರಿ, ಸೀಳು, ಒಡೆ.

**विदलना**– सक्रि. नष्ट करना, कुचलना।

ಹಾಳು ಮಾಡು, ಹಿಚುಕು, ತುಳಿ, ಮೆಟ್ಟು.

**विदा**– स्त्री जाने की आज्ञा, प्रस्थान। ಹೋಗಲು ಅನುಮತಿ ಪಡೆಯುವಿಕೆ, ಅಗಲುವಿಕೆ, ಹೊರಡುವಿಕೆ, ಹೋಗುವಿಕೆ, ಪ್ರಸ್ಥಾನ.

**विदाई**– स्त्री. प्रस्थान या प्रस्थान करने की आज्ञा, विदा होने के समय दिया जानेवाला धन। ಪ್ರಸ್ಥಾನ, ಹೋಗುವಿಕೆ, ಹೋಗುವ ಅನುಮತಿ, ಅಪ್ಪಣೆ, ಅಗಲುವಾಗ ಕೊಡುವ ಹಣ.

**विदारक**– वि फाड़नेवाला। ಹರಿಯುವ, ಸೀಳುವ.

**विदारना**–सक्रि फाड़ना। ಹರಿ, ಸೀಳು, ಒಡೆ.

**विदित**– वि जाना हुआ। ತಿಳಿದ, ಗೊತ್ತಾದ, ಪ್ರಸಿದ್ಧ.

**विदीर्ण**– वि. फाड़ा हुआ, नष्ट किया हुआ। ಹರಿದ, ಸೀಳಿದ, ಹಾಳು ಮಾಡಿದ.

**विदुर**–पु ज्ञानी, धृतराष्ट्र के एक भाई। ಜ್ಞಾನಿ, ತಿಳಿವಳಿಕೆಯುಳ್ಳವ, ಧೃತರಾಷ್ಟ್ರನ ಒಬ್ಬ ತಮ್ಮ.

**विदुष**–पु विद्वान्। ವಿದ್ವಾನ, ಪಂಡಿತ.

**विदुषी**– स्त्री. विद्वान स्त्री। ವಿದ್ವಾನ ಸ್ತ್ರೀ, ಸುಶಿಕ್ಷಿತೆ.

**विदूर**– वि. जो बहुत दूर हो। ಬಹಳ ದೂರಾದ.

**विदूषक**–पु मसखरा, दुष्ट। ವಿನೋದಿ, ನಗಚಾಟಿಕೆ ಮಾಡುವವ, ದುಷ್ಟ.

**विदेश**– पु पराया देश। ಪರದೇಶ.

**विदेशी**–वि पराये देश का। ಪರದೇಶದ, ಅನ್ಯದೇಶದ.

**विद्ध**–वि छेद किया हुआ। ಛೇದಿಸಿದ, ಚುಚ್ಚಿದ, ಗಾಯಗೊಂಡ.

**विद्यमान**– वि मौजूद। ಇರುವ, ಹಾಜರಿರುವ.

**विद्यार्थी**– पु छात्र। ವಿದ್ಯಾರ್ಥಿ.

**विद्यालय**– पु. पाठशाला। ಸಾಲೆ, ವಿದ್ಯಾಲಯ.

**विद्रुम**– पु. मूँगा। ಹವಳ, ಪ್ರವಾಳ.

**विद्रोह**– पु बलवा। ವಿದ್ರೋಹ, ಗಲಭೆ, ಬಂಡಾಯ

**विद्रोही**– वि विद्रोह करनेवाला। ವಿದ್ರೋಹ ಮಾಡುವವ, ಬಂಡುಗಾರ.

**विद्वेष**– पु. शत्रुता। ಶತೃತ್ವ, ವೈರತ್ವ.

**विधन**– वि. गरीब। ಬಡವ, ದರಿದ್ರ.

**विधना**– पु ब्रह्मा। ಬ್ರಹ್ಮ, स्त्री होनहार। ಭಾಗ್ಯ. सक्रि प्राप्त करना। ದೊರಕಿಸು, ಗಳಿಸು.

**विधर्म**– पु. अन्यधर्म। ಪರಧರ್ಮ.

**विधर्मी**– वि. अन्य धर्म का। ಪರಧರ್ಮದ.

**विधवा**– स्त्री पतिविहीन स्त्री। ವಿಧವೆ, ಗಂಡ ಸತ್ತವಳು.

**विधाता**– पु ब्रह्मा, कर्ता, प्रबंधक। ಬ್ರಹ್ಮ, ರಚಿಸುವವ, ವ್ಯವಸ್ಥಾಪಕ.

**विधान**– पु विधि, आचार, नियम,

अनुष्ठान, व्यवस्था, रचना । ವಿಧಿ, ರೀತಿ, ಪದ್ಧತಿ, ಆಚಾರ, ವಿಚಾರ, ನಿಯಮ, ಅನುಷ್ಠಾನ, ವ್ಯವಸ್ಥೆ, ಉಪಾಯ, ಯುಕ್ತಿ, ರಚನೆ.

**विधायक**– वि रचनात्मक । ರಚನಾತ್ಮಕ. पु. दे. 'विधायी'।

**विधायी**– पु. बनाने या रचानेवाला, प्रबंध करनेवाला । ಮಾಡುವವ, ರಚಿಸುವವ, ವ್ಯವಸ್ಥೆ ಮಾಡುವವ.

**विधि**– पु ब्रह्मा, भाग्य । ಬ್ರಹ್ಮ, ಭಾಗ್ಯ, ದೈವ. स्त्री. नियम, रीति । शास्त्रोक्त व्यवहार । ನಿಯಮ, ರೀತಿ, ಕಟ್ಟು, ಏರ್ಪಾಡು, ವ್ಯವಸ್ಥೆ, ಶಾಸ್ತ್ರೋಕ್ತ ವ್ಯವಹಾರ.

**विधिरानी**– स्त्री. सरस्वती । ಸರಸ್ವತಿ.

**विधिवत्**– क्रिवि. विधिके अनुसार । ನಿಯಮಾನುಸಾರವಾಗಿ.

**विधु**–पु. चंद्रमा, ब्रह्मा । ಚಂದ್ರ, ಬ್ರಹ್ಮ.

**विधुर**– पु. वियोग, रँडुआ । ವಿರಹ, ಅಗಲಿಕೆ, ಹೆಂಡತಿ ಸತ್ತವ. वि व्याकुल, दुःखी, अशक्त । ವ್ಯಾಕುಲ, ಗಾಬರಿಯಾದ, ದುಃಖಿತ, ಅಶಕ್ತ.

**विधृत**– वि. गृहीत । ಗೃಹೀತ, ಹಿಡಿಯಲ್ಪಟ್ಟ.

**विधेय**– वि. करणीय, होनहार, आधीन । ಮಾಡತಕ್ಕ, ಮುಂದೆ ಆಗುವ, ಆಧೀನ. पु. वह जो किसीके विषय में कुछ कहा जाय । ಒಬ್ಬರ ವಿಷಯದಲ್ಲಿ ಹೇಳಿದ ಸಂಗತಿ.

**विध्वस्त**–वि. नष्ट किया हुआ । ಹಾಳು ಮಾಡಿದ.

**विन**– अव्य विना, बगैर । ಇಲ್ಲದೆ, ಹೊರತಾಗಿ, ಬಿಟ್ಟು. सर्व दे 'तन'।

**विनत**– वि. नम्र, झुका हुआ । ನಮ್ರ, ಬಾಗಿದ.

**विनतडी, विनति**–स्त्री प्रार्थना, नम्रता । ಪ್ರಾರ್ಥನೆ, ನಮ್ರತನ.

**विनती**– स्त्री प्रार्थना । ಪ್ರಾರ್ಥನೆ, ವಿನಂತಿ, ಅರಿಕೆ.

**विनम्र**– वि सुशील । ಸುಶೀಲ, ನಮ್ರ, ಬಾಗಿದ.

**विनय**– स्त्री. नम्रता, प्रार्थना, नीति । ನಮ್ರತನ, ಪ್ರಾರ್ಥನೆ, ನೀತಿ.

**विनयशील, विनयी**– वि नम्र, सुशील । ನಮ್ರ, ವಿನಯವುಳ್ಳವ, ಸುಶೀಲ.

**विनशना, विनसना**– अक्रि नष्ट होना । ಹಾಳಾಗು, ನಷ್ಟವಾಗು.

**विनसाना**– सक्रि नष्ट करना । ಹಾಳು ಮಾಡು.

**विना**–अव्य. बगैर, बिना । ಹೊರತಾಗಿ, ಬಿಟ್ಟು, ಇಲ್ಲದೆ.

**विनाश, विनास**– पु ध्वंस, विकृति । ಹಾಳು, ಕೆಡುವಿಕೆ, ವಿನಾಶ, ನಷ್ಟ, ವಿಕೃತಿ.

**विनिमय**– पु परिवर्तन, बदला । ಬದಲು, ವಿನಿಮಯ, ಅದಲು-ಬದಲು.

**विनियोग**– पु. प्रयोग । ಉಪಯೋಗ.

**विनीत**–वि नम्र । ನಮ್ರ, ವಿನಯಶೀಲ.

**विनु**– अव्य दे. 'विना'।

विनोद– पु हँसी, कौतुक। ವಿನೋದ, ನಗೆಚಾಟಿಕೆ, ಕೌತುಕ, ಹರ್ಷ, ಆನಂದ.

विन्यास– पु. स्थापना, रचना, संग्रह। ಸ್ಥಾಪನೆ, ರಚನೆ, ಸಂಗ್ರಹ.

विपक्ष– पु. विरुद्धपक्ष। ವಿರುದ್ಧಪಕ್ಷ, ಪ್ರತಿಪಕ್ಷ.

विपत्ति–स्त्री संकट। ಸಂಕಟ,ವಿಪತ್ತು, ಕಷ್ಟ.

विपथ– पु कुमार्ग। ಕುಮಾರ್ಗ, ದುರ್ಮಾರ್ಗ.

विपद्, विपदा–स्त्री आफत। ಸಂಕಟ, ವಿಪತ್ತು, ಅನಾಹುತ.

विपन्न–वि विपत्ति ग्रस्त। ಸಂಕಟದಲ್ಲಿ ಬಿದ್ದ, ದುಃಖಿತ

विपरीत–वि उलटा,प्रतिकूल। ವಿರುದ್ಧ, ಪ್ರತಿಕೂಲವಾದ.

विपर्यस्त–वि. अस्तव्यस्त,उलटापुलटा। ಅಸ್ತವ್ಯಸ್ತ, ಬದಲಾದ.

विपर्यास– पु उलटफेर, प्रतिकूलता, भ्रम। ಬದಲು, ಪ್ರತಿಕೂಲತೆ, ಭ್ರಮೆ.

विपिन–पु जंगल, वन। ಅರಣ್ಯ,ವನ.

विपुल– वि बहुत, बड़ा। ಬಹಳ, ದೊಡ್ಡ, ಹೇರಳವಾದ.

विपुलता, विपुलाई– स्त्री. अधिकता, प्रचुरता। ಆಧಿಕ್ಯ, ಹೇರಳತೆ.

विप्र– पु. ब्राह्मण। ಬ್ರಾಹ್ಮಣ.

विप्लव– पु. उत्पात, बलवा, विनाश। ಉತ್ಪಾತ, ಗಲಭೆ, ದೊಂಬಿ, ಅಶಾಂತಿ,ಅವ್ಯವಸ್ಥೆ,ಕ್ರಾಂತಿ,ನಾಶ.

विफल–वि. निष्फल, निराश। ನಿಷ್ಫಲ, ನಿರಾಶ.

विभक्त– वि बंटा हुआ। ಹಂಚಿದ, ಬೇರ್ಪಡಿಸಿದ.

विभक्ति– स्त्री. विभाग, कारकचिह्न। ವಿಭಾಗ, ವಿಭಕ್ತಿ ಚಿಹ್ನೆ.

विभव– पु. ऐश्वर्य, प्रताप। ಐಶ್ವರ್ಯ, ಧನ, ಸಿರಿ, ಪ್ರತಾಪ.

विभा– स्त्री शोभा, कांति, किरण। ಶೋಭೆ, ಕಾಂತಿ, ಕಿರಣ.

विभाग– पु हिस्सा, महकमा। ಭಾಗ, ತುಂಡು, ಕ್ಷೇತ್ರ, ವಿಭಾಗ.

विभाजित– वि विभक्त। ಭಾಗಮಾಡಿದ, ಪಾಲು ಮಾಡಿದ, ಹಂಚಿದ.

विभाना, विभारना– अ क्रि चमकना, शोभा देना। ಪ್ರಕಾಶಿಸು,ಶೋಭಿಸು.

विभिन्न– वि. पृथक्, कई प्रकारका। ಬೇರೆ ಮಾಡಿದ, ಪ್ರತ್ಯೇಕ, ಭಿನ್ನ ಭಿನ್ನ, ತರತರದ.

विभीति– स्त्री डर, शंका। ಅಂಜಿಕೆ, ಭಯ, ಸಂಶಯ.

विभीषण– पु रावण का भाई। ರಾವಣನ ತಮ್ಮ. वि. अति भयंकर। ಭಯಂಕರವಾದ, ಅಂಜಿಕೆಬರುವ.

विभेदना– सक्रि छेदना, घुसना। ಛೇದಿಸು, ಒಡೆ, ಚುಚ್ಚು,ತುರುಕು.

विभ्रांत– वि भ्रांति में पडा हुआ। ಭ್ರಮೆಗೊಂಡ, ಗಾಬರಿಯಾದ, ಚಕಿತನಾದ.

विमडित– वि. शोभित । ಶೋಭಿತ, ಯುಕ್ತ.

विमन– वि. खिन्न । ದುಃಖಿತ, ಖಿನ್ನ.

विमनस्क– वि. उदास । ಉದಾಸೀನ, ದುಃಖಿತ.

विमर्श, विमर्ष– पु विवेचन, विचार । ವಿವೇಚನೆ, ವಿಮರ್ಶೆ, ಪರೀಕ್ಷೆ, ವಿಚಾರ.

विमल– वि. स्वच्छ, निर्मल । ಸ್ವಚ್ಛ, ನಿರ್ಮಲ.

विमाता–स्त्री सौतेली मॉं । ಮಲತಾಯಿ

विमान– पु. वायुयान, रथ, अनादर । ವಿಮಾನ, ರಥ, ಅನಾದರ.

विमुक्त– वि. स्वतंत्र । ಸ್ವತಂತ್ರ, ಬಂಧನರಹಿತ.

विमुख– वि. प्रतिकूल, विरुद्ध । ಪ್ರತಿಕೂಲ, ಅಪ್ರಸನ್ನ, ವಿರುದ್ಧ.

विमुद– वि उदास । ಉದಾಸೀನ, ದುಃಖಿತ, ಖಿನ್ನ

विमूढ– वि मूर्ख, अचेत, मुग्ध । ಮೂರ್ಖ,ಮೂರ್ಛೆಹೋದ, ಮುಗ್ಧ, ಮೋಹಿತನಾದ.

विमोचन– पु बंधनसे मुक्त करना । ಬಿಡುಗಡೆ, ಬಿಡುಗಡೆ ಮಾಡುವಿಕೆ.

विमोचना–सक्रि मुक्त करना । ಬಿಡು, ಬಿಡುಗಡೆ ಮಾಡು.

विमोह–पु मोह, भ्राति,मूर्छा । ಮೋಹ, ಭ್ರಾಂತಿ, ಸಂಶಯ, ಮೂರ್ಛೆ.

विमोहना–अक्रि मुग्ध होना । ಮೋಹಗೊಳ್ಳು, ಭ್ರಾಂತಿಯಾಗು. सक्रि. मोहित करना । ಮೋಹಿತಗೊಳಿಸು, ಭ್ರಾಂತಿಪಡಿಸು.

विमौट– पु बॉबी । ಹಾವಿನ ಹುತ್ತ.

वियुक्त–वि बिछुडा हुआ । ಅಗಲಿದ, ಬೇರೆಯಾದ, ರಹಿತ.

वियो– वि दूसरा । ಎರಡನೆಯ

वियोग–पु जुदाई । ಅಗಲಿಕೆ,ವಿಯೋಗ, ವಿರಹ.

वियोगिन, वियोगिनी– स्त्री वह स्त्री जो अपने पति या प्रियतम से बिछडी हो । ಪತಿ ಅಥವಾ ಪ್ರಿಯತಮನನ್ನು ಅಗಲಿದ ಸ್ತ್ರೀ, ವಿರಹಿಣಿ.

वियोगी– वि विरही । ವಿರಹಿ,ಹೆಂಡತಿಯನ್ನು ಅಗಲಿದವ.

विरंग–वि. कई रंग का । ವಿವಿಧಬಣ್ಣದ.

विरंचि– पु ब्रह्मा । ಬ್ರಹ್ಮ.

विरक्त–वि. अप्रसन्न, उदासीन । ಅಪ್ರಸನ್ನ, ಉದಾಸೀನ पु वैरागी । ಸಾಧು, ಸನ್ಯಾಸಿ, ವಿರಕ್ತ.

विरचना– सक्रि. रचना, सजाना । ಮಾಡು, ತಯಾರಿಸು, ರಚಿಸು, ಶೃಂಗರಿಸು. अक्रि. उदासीन होना । ಉದಾಸೀನನಾಗು.

विरत– वि. विरक्त, अति लीन । ಉದಾಸೀನ, ವಿರಕ್ತ, ಪೂರ್ಣವಾಗಿ ತೊಡಗಿದ.

विरति–स्त्री वैराग्य । ವಿರಕ್ತಿ,ವೈರಾಗ್ಯ.

विरदैत– वि. नामवर । ಹೆಸರಾದ, ಪ್ರಸಿದ್ಧ.

विरमना– अक्रि विराम करना, ठहरना,

रुकना। ಮನಸ್ಸುಹತ್ತು, ಆನಂದಿ-
ಸು, ನಿಲ್ಲು, ತಡೆ.

**विरह**–पु वियोग। ಅಗಲಿಕೆ,ವಿಯೋಗ

**विरहिणी**– स्त्री. दे 'वियोगिनी'।

**विरही**– पु दे 'वियोगि'।

**विरागी**–वि. उदासीन, विरक्त। ಉದಾಸೀನ,ವಿರಕ್ತ,ಸಂಸಾರ ತ್ಯಜಿಸಿದವ.

**विराजना**–अक्रि शोभित होना, बैठना, उपस्थित रहना। ಶೋಭಿಸು, ಕೂಡ್ರು, ಮಂಡಿಸು, ಇರು, ಹಾಜರಿರು.

**विराजमान**– वि. शोभित, आसीन। ಶೋಭಿಸುವ, ಕೂತ.

**विराट्**– वि विशाल, बहुत बडा। ವಿಶಾಲವಾದ, ಬಹಳ ದೊಡ್ಡ.

**विराव**– पु शोरगुल। ಗದ್ದಲ, ಕೋಲಾಹಲ, ಧ್ವನಿ.

**विरासत**– स्त्री उत्तराधिकार, उत्तराधिकार में मिला हुआ धन। ಉತ್ತರಾಧಿಕಾರ, ಉತ್ತರಾಧಿಕಾರದಿಂದ ಸಿಕ್ಕ ಸಂಪತ್ತು.

**विरुझना**– अक्रि दे 'उलझना'।

**विरुद**– पु यश, कीर्ति, गुण आदि का वर्णन। ಯಶ-ಕೀರ್ತಿ-ಗುಣ-ಶೌರ್ಯ ಮುಂತಾದವುಗಳ ವರ್ಣನೆ.

**विरेचक**– वि दस्तावर। ವಿರೇಚಕ, ಬೇಧಿಕರ.

**विरोधना**– सक्रि विरोध करना। ವಿರೋಧ ಮಾಡು, ವೈರತ್ವ ಹಿಡಿ.

**विरोधी**– वि शत्रु। ಶತ್ರು, ವಿರೋಧಿ.

**विलंब**– पु. देर। ತಡ, ವಿಲಂಬ.

**विलखना**–अक्रि दुखी होना। ದುಃಖಿತನಾಗು, ವಿಲಾಪ ಮಾಡು.

**विलगाना**– सक्रि अलग करना। ಬಿಡಿಸು, ಬೇರ್ಪಡಿಸು,ಅಗಲಿಸು. सक्रि अलग होना। ಬೇರೆಯಾಗು,ಅಗಲು, ಬಿಡಿಬಿಡಿಯಾಗು.

**विलपना**– अक्रि विलाप करना। ಶೋಕಿಸು, ದುಃಖಿಸು.

**विलसना**– अक्रि शोभित होना, आनंद मनाना। ಶೋಭಿಸು,ಆನಂದಪಡು, ಸುಖಪಡು.

**विलायत**– पु पराया देश, अँग्रेजों का देश। ಪರದೇಶ, ಇಂಗ್ಲಂಡ.

**विलायती**– वि विदेशी, युरोप का। ಪರದೇಶದ, ಯುರೋಪದ.

**विलास**– पु. हर्ष, आनंद, सुखभोग, हावभाव। ಹರ್ಷ, ಆನಂದ, ಸುಖಭೋಗ, ಕ್ರೀಡೆ, ಅಂಗಸಂಚಾಲನೆ, ಹಾವಭಾವ.

**विलासिनी**–स्त्री सुंदर युवा स्त्री, वेश्या। ಸುಂದರ ತರುಣ ಸ್ತ್ರೀ, ವೇಶ್ಯೆ.

**विलासी**– वि. कामी पुरुष, मौजी। ಕಾಮುಕ, ವಿಲಾಸಿ, ಸುಖಭೋಗಿ.

**विलीक**– वि अनुचित। ಅನುಚಿತ, ಅಯೋಗ್ಯ.

**विलीन**–वि निमग्न, छिपा हुआ, नष्ट। ಲೀನ, ನಿಮಗ್ನ, ಅಡಗಿದ,ಮುಚ್ಚಿದ, ನಷ್ಟವಾದ.

**विलोकना**– सक्रि देखना। ನೋಡು,

ಅವಲೋಕಿಸು.

विलोचन– पु नेत्र। ಕಣ್ಣು, ನೇತ್ರ.

विलोडना–सक्रि मथना,हिलाना। ಕಡೆ, ಮಥಿಸು, ಅಲುಗಾಡಿಸು.

विलोना– सक्रि. दे 'विलोडना'।

विलोभन–पु मोहित करने का व्यापार। ವಿಲೋಭನೆ, ಮೋಹಗೊಳಿಸುವಿಕೆ.

बिलोम–वि उलटा। ವಿರುದ್ಧ.

विलोल–वि चंचल। ಚಂಚಲ,ಚಪಲ

विवदना– अक्रि विवाद करना। ಚರ್ಚಿಸು.

विवरण– पु ब्यौरा। ವಿವರಣೆ, ತಪಶೀಲು.

विवश, विवस– वि. लाचार, परवश। ಅಸಹಾಯ, ಗತಿಯಿಲ್ಲದ, ದಿಕ್ಕಿಲ್ಲದ, ಪರತಂತ್ರ.

विवशता, विवसता– स्त्री. लाचारी। ಅಸಹಾಯತೆ, ನಿರ್ಗತಿ.

विवाद– पु. झगडा, बहस। ಜಗಳ, ತರ್ಕ, ಚರ್ಚೆ, ವಾದವಿವಾದ.

विवाह– पु शादी। ಲಗ್ನ, ಮದುವೆ.

विवाहना– सक्रि शादी करना। ಮದುವೆ ಮಾಡು.

विवाहित– वि जिस का विवाह हो चुका हो। ಮದುವೆಯಾದ.

विविध–वि. तरह तरह का। ತರತರದ, ಎಷ್ಟೋತರದ.

विवेक–पु भले बुरे का ज्ञान। ವಿವೇಕ, ಬುದ್ಧಿ, ಒಳಿತು ಕೆಡಕುಗಳ ಜ್ಞಾನ

विवेचन--पु परीक्षा, निर्णय, व्याख्या। ವಿವೇಚನೆ, ಪರೀಕ್ಷೆ, ವಿಮರ್ಶೆ, ನಿರ್ಣಯ, ವ್ಯಾಖ್ಯೆ.

विशद– वि विस्तृत, साफ, सफेद, सुंदर। ವಿಸ್ತೃತ, ಸ್ವಚ್ಛ, ಬಿಳಿಯ, ಸುಂದರ.

विशारद–वि पंडित। ಪಂಡಿತ,ಬಲ್ಲವ, ನಿಪುಣ, ಕೋವಿದ.

विशाल-- पु बहुत बडा। ಬಹಳ ದೊಡ್ಡ, ವಿಶಾಲವಾದ.

विशिख– पु. बाण। ಬಾಣ.

विशुद्ध–वि निर्मल, सच्चा। ನಿರ್ಮಲ, ಸ್ವಚ್ಛ, ನಿಜವಾದ.

विशेषज्ञ–वि विशेष ज्ञानवाला। ವಿಶೇಷ ಜ್ಞಾನವುಳ್ಳವ, ತತ್ವಜ್ಞ.

विश्रांत– वि. जिस की थकावट दूर हो गयी हो। ವಿಶ್ರಾಂತಿಯನ್ನು ಹೊಂದಿದವ.

विश्राम– पु आराम, ठहरने का स्थान। ವಿಶ್ರಾಂತಿ, ಶ್ರಮ ಹೋಗಲಾಡಿಸುವಿಕೆ, ತಂಗುವ ಸ್ಥಳ, ವಿಶ್ರಾಂತಿಯ ಸ್ಥಳ.

विश्लेषन– पु. किसी पदार्थ के संयोजक द्रव्यों को पृथक् करना। ವಿಶ್ಲೇಷಣೆ, ಪದಾರ್ಥದ ಸಂಯೋಜಕ ಪದಾರ್ಥಗಳನ್ನು ಪೃಥಕ್ಕರಿಸುವಿಕೆ.

विश्व– पु. संसार। ಜಗತ್ತು, ವಿಶ್ವ, ಪ್ರಪಂಚ.

विश्वकर्ता–पु. परमेश्वर। ಪರಮೇಶ್ವರ, ದೇವರು.

विश्वसन– पु. दे. 'विश्वास'।

विश्वसनीय– वि विश्वास करने योग्य। ವಿಶ್ವಾಸಾರ್ಹವಾದ, ನಂಬಬಹು-ದಾದ.

विश्वस्त– वि. दे 'विश्वसनीय'।

विश्वास– पु यकीन, मनकी धारणा। ನಂಬಿಕೆ, ವಿಶ್ವಾಸ, ನೆಚ್ಚಿಕೆ.

विषण्ण– वि दु.खित। ದುಃಖಿತ.

विषम– वि भीषण, कठिण, असमान। ಭೀಷಣ, ಭಯಂಕರ, ಕಠಿಣ, ಬೆಸ, ಅಸಮ.

विषय– पु वस्तु, भोगविलास, स्त्री-संभोग, संपत्ति। ವಸ್ತು, ವಿಷಯ, ಸಂಗತಿ, ಭೋಗವಿಲಾಸ, ಸ್ತ್ರೀ-ಸಂಭೋಗ, ಮೈಥುನ, ಸಂಪತ್ತು, ಐಶ್ವರ್ಯ.

विषाण– पु सींग, हाथी या सुअर का दाँत। ಕೋಡು, ಆನೆ ಅಥವಾ ಕಾಡಹಂದಿಯ ಕೋರೆ ಹಲ್ಲು.

विषाद– पु शोक। ಶೋಕ, ದುಃಖ.

विषैला– वि. विषयुक्त। ವಿಷವುಳ್ಳ.

विष्ठा– स्त्री मल। ಮಲ, ವಿಷ್ಠೆ.

विसर्जन– पु विदा, समाप्ति, भेजना। ಪ್ರಸ್ಥಾನ, ಸಮಾಪ್ತಿ, ಮುಕ್ತಾಯ, ಕಳಿಸುವಿಕೆ.

विसूचिका, विसूची– स्त्री हैजा। ಕಾಲರಾ, ಮಾರಿ ರೋಗ.

विस्तार–पु फैलाव। ವಿಸ್ತಾರ, ಹರವು.

विस्तारना– सक्रि. फैलाना। ಹರವು, ವಿಸ್ತರಿಸು, ಹರಡಿಸು.

विस्तीर्ण, विस्तृत– वि विशाल। ವಿಶಾಲವಾದ, ವಿಸ್ತಾರವಾದ, ವಿಸ್ತೃತವಾದ.

विस्फुलिंग– पु चिनगारी। ಬೆಂಕಿಯ ಕಿಡಿ, ಅಗ್ನಿಕಣ

विस्फोट– पु किसी पदार्थ का वेग से फूट पडना, विषैला फोडा। ಸ್ಫೋಟ, ಒಡೆಯುವಿಕೆ, ವಿಷಯುಕ್ತ ಹುಣ್ಣು.

विस्मय– पु आश्चर्य। ಆಶ್ಚರ್ಯ, ವಿಸ್ಮಯ.

विस्मरण– पु. भूल जाना। ಮರೆಯು-ವಿಕೆ, ಮರವು.

विस्मृत– वि भूला हुआ। ಮರೆತ, ಮರೆತು ಹೋದ.

विहंग, विहंगम, विहग– पु पक्षी, चिडिया, बाण, मेघ, चंद्र, सूर्य। ಪಕ್ಷಿ, ಹಕ್ಕಿ, ಬಾಣ, ಮೋಡ, ಚಂದ್ರ, ಸೂರ್ಯ.

विहँसना–अक्रि. मुसकाना। ಮುಗುಳು ನಗೆ ನಗು.

विहरना– अक्रि. विचरना। ತಿರು-ಗಾಡು, ವಿಹರಿಸು.

विहार–पु क्रीडा, क्रीडास्थान। ಕ್ರೀಡೆ, ತಿರುಗಾಟ, ಕ್ರೀಡಾಸ್ಥಾನ.

विहीन, विहून– वि त्याग हुआ, रहित। ತ್ಯಜಿಸಿದ, ರಹಿತ, ಹೊರತಾಗಿ.

वीचि–स्त्री. तरंग, लहर, चमक। ಅಲೆ, ತೆರೆ, ಪ್ರಕಾಶ, ಮಿಂಚು, ಹೊಳಪು.

वीजन– पु पंखा। ಬೀಸಣಿಕೆ.

वीण, वीणा– स्त्री एक वाद्य। ವೀಣೆ, ಒಂದು ವಾದ್ಯ.

वीत- वि छोडा हुआ । ಬಿಟ್ಟ, ಪರಿತ್ಯಕ್ತ.

वीतराग- वि विरक्त । ವಿರಕ್ತ, (ಸಂಸಾರ) ತ್ಯಜಿಸಿದವ.

वीरता-स्त्री. शौर्य । ಶೌರ್ಯ, ವೀರತನ, ಕಲಿತನ.

वीरांगना-स्त्री बहादुर स्त्री । ವೀರ ಸ್ತ್ರೀ.

वीरान- वि उजडा हुआ, शोभाहीन । ಹಾಳಾದ, ನಿರ್ಜನ, ಶೋಭಾಹೀನ, ನಿಸ್ತೇಜ

वीराना- पु. ऊजड स्थान । ಪಾಳು, ಹಾಳು, ನಿರ್ಜನ ಸ್ಥಾನ, ಮರುಭೂಮಿ.

वीर्य- पु शुक्र, पौरुष । ವೀರ್ಯ, ಧಾತು, ಪೌರುಷ.

वृक्ष- पु पेड़ । ಗಿಡ, ಮರ.

वृत्तांत- पु हाल, विवरण, प्रस्ताव । ಸಂಗತಿ,ವೃತ್ತಾಂತ,ಕತೆ, ವಿವರಣೆ, ಪ್ರಸ್ತಾವ.

वृत्ति- स्त्री. जीविका, वजीफा, स्वभाव। ಜೀವನ ನಿರ್ವಾಹದ ಸಾಧನೆ, ಉದ್ಯೋಗ, ಸ್ಕಾಲರಶಿಪ್, ವ್ಯವಹಾರ, ಸ್ವಭಾವ.

वृथा- क्रिवि. वृथा ही । ವ್ಯರ್ಥವಾಗಿ.

वृद्ध- वि. वूढा । ಮುದುಕ, ವೃದ್ಧ.

वृद्धि- स्त्री. वढती । ಬೆಳವಣಿಗೆ,ಅಭ್ಯುದಯ.

वृषभ- पु वैल । ಎತ್ತು, ಬಸವ.

वृष्टि- स्त्री. वर्षा । ಮಳೆ.

वे- सर्व 'वह' का वहुवचन रूप । ಅವರು, ಅವು.

वेणि, वेणी- स्त्री. चोटी । ಹೆಳಲು.

वेणु- पु. बॉस, बॉसुरी । ಬಿದಿರು, ಕೊಳಲು.

वेतन-पु तनख्वाह । ವೇತನ,ಸಂಬಳ, ಪಗಾರ.

वेत्ता- पु जानकार । ಬಲ್ಲವ.

वेत्र- पु बेत । ಬೆತ್ತ.

वेदना- स्त्री. तकलीफ । ಕಷ್ಟ, ದುಃಖ, ತ್ರಾಸ.

वेदि, वेदिका, वेदी- स्त्री. किसी शुभ कार्य, विशेषतः धार्मिक कार्यके लिये तैयार की हुअी ऊँची भूमि । ಯಜ್ಞವೇದಿ, ಬಲಿಪೀಠ, ವೇದಿಕೆ.

वेधशाला- स्त्री वह स्थान जहाँ ग्रहादी की जाँच के लिये उपयुक्त साधन रहते हैं । ವೇಧಶಾಲೆ, ಗ್ರಹಾದಿಗಳ ಬಗ್ಗೆ ಶೋಧವನ್ನು ನಡಿಸುವ ದಕ್ಕಾಗಿ ಎಲ್ಲತರದ ಉಪಕರಣಗಳಿರುವ ಭವನ.

वेला-स्त्री. समय, मर्यादा । ಸಮಯ, ಹೊತ್ತು,ವೇಳೆ, ಮರ್ಯಾದೆ, ಅವಧಿ.

वेश- पु. पोशाक, खेमा । ಉಡುಪು, ಬಟ್ಟೆ, ವೇಷ, ಸೋಗು, ಡೇರೆ.

वेश्म- पु. घर । ಮನೆ.

वेष्टन- पु. लपेटने की क्रिया । ಸುತ್ತುವಿಕೆ.

वेष्टित- वि. लपेटा हुआ । ಸುತ್ತಿದ.

वैकल्पिक- वि. इच्छानुसार ग्रहण किया जानेवाला, संदेह पूर्ण । ಐಚ್ಛಿಕ,

ಯುಕ್ತ.

**सचेत**– वि चेतनायुक्त, सावधान, चालाक, समझदार। ಚೈತನ್ಯವುಳ್ಳ, ಜಾಗೃತ, ಎಚ್ಚರವಾದ, ಧೂರ್ತ, ತಿಳಿವಳಿಕೆಯುಳ್ಳ.

**सचेतन**– वि दे 'सचेत'। पु चेतनायुक्त जीव। ಚೈತನ್ಯವುಳ್ಳ ಜೀವಿ.

**सचेष्ट**–वि क्रियाशील। ಕೆಲಸ ಮಾಡುವ, ಪ್ರಯತ್ನ ಮಾಡುವ, ಕದಲುಮೊದಲುವ.

**सच्चरित, सच्चरित्र**– वि. अच्छे चरित्र वाला। ಒಳ್ಳೇ ನಡತೆಯುಳ್ಳ, ಸದಾಚಾರಿ, ಪ್ರಾಮಾಣಿಕ.

**सच्चा**– वि सत्यवादी, यतार्थ, विशुद्ध। ಸತ್ಯಮಾತಾಡುವವ, ನಿಜ ಹೇಳುವವ, ಪ್ರಾಮಾಣಿಕ, ಯಥಾರ್ಥವಾದ, ನಿಜವಾದ, ಸರಿಯಾದ, ಶುದ್ಧ.

**सच्चाई**– स्त्री दे 'सचाई'।

**सच्चापन**– पु. दे 'सचाई'।

**सच्छी**– स्त्री साक्षी। ಸಾಕ್ಷಿ

**सज**– स्त्री. सजावट, बनाव। ಶೃಂಗರಿಸುವಿಕೆ, ಶೃಂಗಾರ, ಸೌಂದರ್ಯ, ಶೋಭೆ, ರೂಪ, ರಚನೆ, ಮೈಕಟ್ಟು.

**सजग**– वि. सतर्क। ಜಾಗೃತ, ಸಾವಧಾನ, ಎಚ್ಚರಗೊಂಡ.

**सजदार**– वि. सुंदर। ಸುಂದರ, ಠೌಲಾದ, ಅಂದವಾದ.

**सजधज**– स्त्री सजावट, शृंगार। ಶೃಂಗಾರ, ಠೌಲು, ರೀವಿ, ಅಂದ, ಸೊಬಗು, ಬೆಡಗು.

**सजन**–पु भला आदमी, पति, प्रियतम। ಸಜ್ಜನ, ಗಂಡ, ಪತಿ, ಪ್ರಿಯತಮ.

**सजना**– अक्रि. अलंकृत होना, शोभित होना। ಅಲಂಕೃತನಾಗು, ಠೌಲಾಗು, ಶೋಭಿತನಾಗು. सक्रि. सजाना, धारण करना। ಶೃಂಗರಿಸು, ಸಜ್ಜುಗೊಳಿಸು, ಅಲಂಕರಿಸು, ಧರಿಸು.

**सजनी**– स्त्री सखी। ಗೆಳತಿ, ಸಖಿ.

**सजबज**– स्त्री सजधज। ಶೃಂಗಾರ, ಠೌಲು.

**सजल**– वि. जलयुक्त, अश्रुपूर्ण, चमकीला। ಜಲಯುಕ್ತ, ನೀರೊಡೆದ, ಕಣ್ಣೀರಿನಿಂದ ಯುಕ್ತವಾದ, ಅಶ್ರುಪೂರ್ಣ, ಹೊಳೆಯುವ.

**सजवाई**– स्त्री सजने या सजाने की क्रिया, सजाने का शुल्क। ಶೃಂಗರಿಸುವ ಅಥವಾ ಶೃಂಗರಿಸಲ್ಪಡುವ ಕೆಲಸ ಶೃಂಗರಿಸುವ ಕೂಲಿ.

**सजवाना**– सक्रि सजाने का कार्य दूसरे से कराना। ಎರಡನೆಯವರಿಂದ ಶೃಂಗರಿಸುವ ಕೆಲಸ ಮಾಡಿಸು, ಅಣಿ ಮಾಡಿಸು.

**सज़ा**– स्त्री अपराध का दंड। ಶಿಕ್ಷೆ, ದಂಡ, ಶಾಸ್ತಿ.

**सजाई**– स्त्री. सजाने की क्रिया या भाव, सजाने का शुल्क। ಅಲಂಕರಿಸುವಿಕೆ, ಸಜ್ಜುಗೊಳಿಸುವಿಕೆ, ಅಲಂಕರಿಸುವ ಕೂಲಿ.

**सजागर**– वि जाग्रत। ಜಾಗ್ರತ,

ಸಾವಧಾನ.

**सजाति, सजातीय**– वि एक ही जाति का। ಒಂದೇ ಜಾತಿಯ.

**सजाना**– सक्रि. अलंकृत करना, सिलासिले से रखना। ಅಲಂಕರಿಸು, ಶೃಂಗರಿಸು, ಕ್ರಮವಾಗಿರಿಸು, ವ್ಯವಸ್ಥಿತವಾಗಿರಿಸು.

**सज़ाय**– स्त्री दे. 'सजा'।

**सज़ायाफ्ता**– वि. वह जो सजा पा चुका हो। ಶಿಕ್ಷೆ ಹೊಂದಿದ, ಶಿಕ್ಷೆ ಭೋಗಿಸಿದ.

**सज़ायाब**–वि. सजा पाने योग्य, दंडित। ಶಿಕ್ಷೆಗೆ ಪಾತ್ರನಾದ, ಶಿಕ್ಷೆಹೊಂದಿದ.

**सजाव**– पु **सजावट**– स्त्री सजाने की क्रिया, शोभा, दही। ಶೃಂಗರಿಸುವಿಕೆ, ಶೃಂಗಾರ, ಶೋಭೆ, ಅಲಂಕಾರ, ಮೊಸರು.

**सजावट**–स्त्री. शोभा, तैयारी। ಶೋಭೆ, ಶೃಂಗಾರ, ಅಲಂಕಾರ, ಸಿದ್ಧತೆ.

**सजावन**–पु सजाने का भाव या क्रिया। ಶೃಂಗರಿಸುವಿಕೆ, ಶೃಂಗಾರ, ವ್ಯವಸ್ಥಿತವಾಗಿರಿಸುವಿಕೆ.

**सजावल**– पु तहसीलदार। ತಹಶೀಲದಾರ, ಸರಕಾರಿ ತೆರಿಗೆ ಎತ್ತುವವ.

**सज़ावार**–वि. उचित, शुभफल देनेवाला। ಉಚಿತ, ಯೋಗ್ಯ, ಶುಭಕಾರಕ, ಮಂಗಲಪ್ರದ.

**सजीला**–वि सुदर, सुडौल। ಸುಂದರ, ಅಂದವಾದ, ಸೊಗಸಿನ, ಅಲಂಕೃತ.

**सजीव**– वि. जीवयुक्त। ಸಜೀವ, ಜೀವವುಳ್ಳ, ಜೀವಂತ, ಸ್ಫೂರ್ತಿಯುಳ್ಳ.

**सजोना**– सक्रि दे 'सजाना'।

**सज्जन**– पु सत्पुरुष, प्रियतम, सजाने की क्रिया या भाव। ಸತ್ಪುರುಷ, ಸಜ್ಜನ, ಸಾಧು, ಕುಲೀನ, ಸಜ್ಜುಗೊಳಿಸುವಿಕೆ, ಅಲಂಕರಿಸುವಿಕೆ.

**सज्जनता, सज्जनताई**– स्त्री. साधुता। ಸಾಧುತ್ವ, ಸಜ್ಜನತೆ, ಸೌಜನ್ಯ.

**सज्जा**– स्त्री शय्या, चारपाई, सजावट। ಹಾಸಿಗೆ, ಮಂಚ, ಶೃಂಗಾರ, ಸಜ್ಜುಗೊಳಿಸುವಿಕೆ, ವೇಷಭೂಷಣ, ಸಿದ್ಧತೆ.

**सज्जित**– वि सजा हुआ। ಡೌಲಾದ, ಸಿಂಗಾರಾದ, ಸಿದ್ಧವಾದ, ಸಜ್ಜುಗೊಳಿಸಿದ.

**सज्जी**–स्त्री खारी मिट्टी विशेष। ಒಂದು ತರದ ಉಪ್ಪು ಮಣ್ಣು, ಸವುಳು ಮಣ್ಣು

**सटक**– स्त्री. पतली लचकनेवाली छड़ी, सटकने की क्रिया, लंबा नैचा। ಬೇಗನೆ ಮಣಿಯುವ ತೆಳುವಾದ ಕೋಲು, ಜಾರುವ ಕ್ರಿಯೆ, ಓಡಿ ಹೋಗುವಿಕೆ, ಗುಡಗುಡಿ (ಹುಕ್ಕಾ)ಯ ಉದ್ದವಾದ ಕೊಳವೆ.

**सटकना**– अक्रि धीरे से भाग जाना। ಸದ್ದಿಲ್ಲದೆ ಓಡಿ ಹೋಗು, ಜಾರಿ ಹೋಗು, ನುಸುಳು, ನುಣುಚು. सक्रि. कूटना। ಕುಟ್ಟು, ತೆನೆಗಳನ್ನು ಬಡಿ.

**सटकाना**–सक्रि छड़ी आदि से मारना।

ಬಡಿಗೆ ಬಾರಕೋಲು ಮುಂತಾದವು ಗಳಿಂದ ಹೊಡೆ.

**सटकार–** स्त्री. सटकाने की क्रिया या भाव। ಬಾರಕೋಲು ಅಥವಾ ಬೆತ್ತ ದಿಂದ ಹೊಡಿಯುವಿಕೆ, ಓಡಿಸುವಿಕೆ

**सटकारना–** वि. सटकाना, फटकारना। ಸಟ್ ಸಟ್ ಶಬ್ದ ಮಾಡುತ್ತ ಬಾರ ಕೋಲು ಅಥವಾ ಬಡಿಗೆಯಿಂದ ಹೊಡೆ.

**सटकारा–** वि चिकना और लंबा। ಮೃದುವಾದ ಹಾಗೂ ಉದ್ದವಾದ.

**सटकारी–**स्त्री लचकनेवाली पतली छडी। ಅತ್ತಿತ್ತ ಮಣಿಯುವ ತೆಳುವಾದ ಬಡಿಗೆ, ಛಡಿ, ಬೆತ್ತದ ಕೋಲು.

**सटना–** अक्रि. चिपकना, मिलना, लाठी सोंठे की मारपीट होना। ಅಂಟಿ ಕೊಳ್ಳು, ಹೊಂದಿಕೊಳ್ಳು, ಕೂಡಿ- ಕೊಳ್ಳು, ಮೆತ್ತಿಕೊಳ್ಳು, ಬಡಿದಾಟ- ವಾಗು.

**सटपट–** स्त्री. घबराहट, असमंजस, दुविधा, संकट। ಗಾಬರಿ, ಗೊಂದಲ, ಸಂದೇಹ, ತೊಡಕು, ಸಂಕಟ.

**सटपटाना–**अक्रि. सिकुड जाना, भौचक्का होना, संशय में पड़ना। ಮುದುರು, ಸಂಕೋಚಗೊಳ್ಳು, ಚಕಿತನಾಗು, ಆಶ್ಚರ್ಯವಾಗು, ಗೊಂದಲದಲ್ಲಿ ಬೀಳು, ಬೆರಗಾಗು.

**सटरपटर–** वि. मामूली, तुच्छ। ಸಾಧಾ ರಣ, ತುಚ್ಛ, ಅಲ್ಪ. स्त्री. तुच्छ कार्य, उलझन का काम। ತುಚ್ಛ ಕೆಲಸ, ತೊಡಕಿನ ಕೆಲಸ.

**सटसट–** क्रिवि फौरन्। ಕೂಡಲೇ, ಒಮ್ಮೆಲೇ, ಸಟಸಟನೆ, ಶೀಘ್ರ.

**सटा–** स्त्री जटा, शिखा। ಜಡೆ, ಜಟಾ, ಆಯಾಲ, ಜುಟ್ಟು, ಶಿಖೆ. वि मिला हुआ। ಕೂಡಿದ, ಹೊಂದಿಕೊಂಡ.

**सटाना–** सक्रि मिलाना, संयुक्त करना, मारपीट करना। ಕೂಡಿಸು, ಹೊಂದಿ- ಸು, ಅಂಟಿಸು, ಒಂದೆಡೆಗೆ ಸೇರಿಸು, ಹೊಡೆದಾಡು

**सटिया–** स्त्री छड़ी, सोने या चादी की चूडी। ಕೋಲು, ಬಡಿಗೆ, ಬೆಳ್ಳಿ ಅಥವಾ ಬಂಗಾರದ ಒಂದು ತರದ ಬಳೆ.

**सटीक–** वि. व्याख्या सहित, बिलकुल ठीक। ವ್ಯಾಖ್ಯೆಯಿಂದೊಡಗೂಡಿದ, ಪೂರ್ಣವಾಗಿ ಸರಿಯಾದ.

**सट्टा–** पु. इकरारनामा। ಕರಾರುಪತ್ರ, ಪ್ರತಿಜ್ಞಾಪತ್ರ.

**सट्टाबट्टा–** पु मेलजोल, चालबाजी। ಹೊಂದಿಕೆ, ಕೂಟ, ಸೇರಿಕೆ, ಧೂರ್ತ ತನ, ಠಕ್ಕು.

**सट्टी–** स्त्री. बाजार। ಸಂತೆ, ಪೇಟೆ

**सठ–** पु. शठ। ದುಷ್ಟ

**सठई, सठता–** स्त्री. दुष्टता, मूर्खता। ದುಷ್ಟತನ, ಮೂರ್ಖತನ.

**सठियाना–** अक्रि साठ वर्ष का होना, वृद्धावस्था के कारण बुद्धि तथा विवेक का नाश होना। ಅರವತ್ತು ವರುಷ ದವನಾಗು, ಮುದುಕನಾಗು,

ವೃದ್ಧಾಪ್ಯದಿಂದ ಬುದ್ಧಿ ಹಾಗೂ ವಿವೇಕ ನಷ್ಟವಾಗು.

**सड़क**– स्त्री मार्ग, राजमार्ग। ಮಾರ್ಗ, ರಾಜಮಾರ್ಗ.

**सडन**– स्त्री. सडने की क्रिया या उसकी दुर्गंध। ಕೊಳೆಯುವಿಕೆ,ಹಳಸುವಿಕೆ, ಕೊಳೆಯುವದರಿಂದ ಹೊರಡುವ ದುರ್ಗಂಧ.

**सड़ना**– अक्रि बिगड़ जाना, बुरी अवस्थामें रहना। ಕೊಳೆ, ಕೆಡು, ನಾಶವಾಗು, ಹಳಸು, ಕೆಟ್ಟ ಸ್ಥಿತಿ ಬರು, ದುರ್ದೆಶೆಯಾಗು.

**सड़सठ**– वि ೬೭। ಅರವತ್ತೇಳು.

**सड़ाइँद, सड़ायँद**– स्त्री. सड़ी हुयी वस्तु की गंध। ಕೊಳೆತ ವಸ್ತುವಿನ ದುರ್ಗಂಧ.

**सड़ान**– स्त्री. सडने की क्रिया। ಕೊಳೆಯುವಿಕೆ, ಕೆಡುವಿಕೆ.

**सडाना**– सक्रि. किसी वस्तुको सडने में प्रवृत्त करना। ಕೊಳೆಯಿಸು,ಕೆಡಿಸು.

**सडाव**– पु दे 'सड़ान'।

**सडियल**– वि. सड़ा हुआ, नीच। ಕೊಳೆತ, ಕೆಟ್ಟ, ತುಚ್ಛ, ನಿರರ್ಥಕ, ನೀಚ.

**सत**– पु. सचाई, सत्व, सार, शक्ति। ನಿಜತ್ವ, ಸತ್ಯತೆ, ಸತ್ವ, ಸಾರ, ಶಕ್ತಿ, ಕಸುವು वि सौ। ನೂರು.

**सतकारना**– सक्रि सत्कार करना। ಸತ್ಕರಿಸು.

**सतजुग**– पु सत्ययुग। ಸತ್ಯಯುಗ.

**सतत**– अव्य.-सर्वदा। ಯಾವಾಗಲೂ, ನಿರಂತರ.

**सतदल**– पु. कमल। ಕಮಲ.

**सतनजा**– पु सात प्रकार के अन्नो का मेल। ಸಪ್ತಧಾನ್ಯ, ಏಳು ಧಾನ್ಯಗಳ ಮಿಶ್ರಣ.

**सतपदी**– स्त्री. **सतफेरा**– पु सप्तपदी। ಸಪ್ತಪದಿ (ಮದುವೆಯೊಳಗಿನ).

**सतपुतिया**– स्त्री. एक प्रकार की तरोई। ಒಂದು ತರದ ಹೀರೆಕಾಯಿ.

**सतयुग**– पु. सत्ययुग। ಸತ್ಯಯುಗ.

**सतरंगा**– वि सात रंगो का। ಏಳು ಬಣ್ಣದ.

**सतरंजी**– स्त्री दे. 'शतरंजी'।

**सतर**– स्त्री. रेखा, पंक्ति। ರೇಖೆ, ಗೆರೆ, ಪಂಕ್ತಿ, ಸಾಲು. वि टेढा, क्रुद्ध। ವಕ್ರ, ಡೊಂಕ, ಕ್ರೋಧಿತ.

**सतराना**– अक्रि क्रोध करना, कुढ़ना। ಕ್ರೋಧಿತನಾಗು, ಸಿಟ್ಟಾಗು,ರೇಗು.

**सतरौंहा**– वि. क्रोधपूर्ण। ಕ್ರೋಧಿತನಾದ, ಕುಪಿತ.

**सतर्क**– वि तर्कयुक्त, सावधान। ತರ್ಕಯುಕ್ತ, ಜಾಗೃತ, ಸಾವಧಾನ, ಎಚ್ಚರಗೊಂಡ.

**सतलडी, सतलरी**– स्त्री सात लडियों की माला। ಏಳು ಎಳೆಯ ಮಾಲೆ.

**सतवती**– स्त्री सती। ಸತಿ, ಪತಿವ್ರತೆ.

**सतसंग**–पु. सत्संग। ಒಳ್ಳೆಯ ಸಂಗತಿ, ಸತ್ಸಂಗ.

**सतसई**– स्त्री सात सौ पद्यों का समूह।

ಏಳುನೂರು ಪದ್ಯಗಳ ಸಂಗ್ರಹ, ಏಳುನೂರು ಪದ್ಯಗಳ ಪುಸ್ತಕ.

**सतह**– स्त्री. पृष्ठभाग । ಪಾತಳಿ, ಪೃಷ್ಠ ಭಾಗ, ಮೇಲ್ಮೈ, ಪದರು.

**सतहत्तर**– वि ೭೭ । ಎಪ್ಪತ್ತೇಳು.

**सताना**– सक्रि दुःख देना । ತ್ರಾಸ ಕೊಡು, ಪೀಡಿಸು, ಗೋಳಾಡಿಸು, ತೊಂದರೆಪಡಿಸು.

**सताळू**– पु एक फल । ಒಂದು ಹಣ್ಣು. ಪಿಚ್ಚೀಸು ಹಣ್ಣು.

**सतावर**– स्त्री शतमूली नामक ओषधि । 'ಶತಮೂಲಿ' ಎಂಬ ಔಷಧ

**सतासी**– वि ೮೭ । ಎಂಭತ್ತೇಳು.

**सती**– स्त्री. पतिव्रता स्त्री, वह स्त्री जो अपने पति के शव के साथ चिता में जले । ಸಾಧ್ವಿ, ಪತಿವ್ರತೆ, ಗಂಡನ ಶವದ ಕೂಡ ಚಿತೆಯಲ್ಲಿ ಬಿದ್ದು ಸಾಯುವ ಸ್ತ್ರೀ.

**सतीत्व**– पु पातिव्रत्य । ಪಾತಿವ್ರತ್ಯ.

**सतुआ**– पु दे 'सत्तू' ।

**सतून**– पु खंभा । ಕಂಬ, ಸ್ತಂಭ.

**सतोगुणी**– वि सद्गुणी । ಸದ್ಗುಣಿ, ಸಾತ್ವಿಕ.

**सत्**– पु. सत्य, सार । ಸತ್ಯ, ಸಾರ. वि सच्चा, उत्तम । ಸತ್ಯವಾದ, ಒಳ್ಳೆಯ, ಉತ್ತಮ.

**सत्कार**– पु. आदर । ಆದರ ಸತ್ಕಾರ, ಅತಿಥಿ ಸೇವೆ.

**सत्कृत**– वि. सत्कार किया हुआ । ಸತ್ಕಾರ ಮಾಡಿದ, ಸತ್ಕಾರ ಹೊಂದಿದ.

**सत्त**– पु सतीत्व, सत्य, सार । ಪಾತಿವ್ರತ್ಯ, ಸತ್ಯ, ಸಾರ, ಮೂಲತತ್ವ

**सत्तर**– वि ೭೦ । ಎಪ್ಪತ್ತು.

**सत्ता**– स्त्री अस्तित्व, अधिकार, शक्ति । ಅಸ್ತಿತ್ವ, ಇರುವಿಕೆ, ಅಧಿಕಾರ, ಶಕ್ತಿ. पु सात बूटियोंवाला ताशका पत्ता । ಏಳು ಚಿಕ್ಕೆಯ ಇಸ್ಪೀಟಿನ ಎಲೆ.

**सत्ताईस**– वि ೨೭ । ಇಪ್ಪತ್ತೇಳು

**सत्तानबे**– वि ೯೭ । ತೊಂಭತ್ತೇಳು.

**सत्तावन**– वि ೫೭ । ಐವತ್ತೇಳು.

**सत्तासी**– वि ೮೭ । ಎಂಭತ್ತೇಳು.

**सत्तू**–पु भूने हुए चने इत्यादि का चूर्ण । ತಂಬಿಟ್ಟು, ಸತ್ತುಗ.

**सत्पथ**– पु. सन्मार्ग । ಸನ್ಮಾರ್ಗ, ಒಳ್ಳೆಯ ಹಾದಿ.

**सत्पुरुष**– पु सज्जन । ಸಜ್ಜನ, ಸತ್ಪುರುಷ

**सत्यत**.– वि सचमुच । ನಿಜವಾಗಿ.

**सत्यनिष्ठ**– वि. सत्यपरायण । ಸತ್ಯಪರಾಯಣ, ಸತ್ಯದಲ್ಲಿ ಭಕ್ತಿಯುಳ್ಳವ.

**सत्यसंकल्प**– वि अपने संकल्पपर अटल रहनेवाला । ದೃಢನಿಶ್ಚಯಿ

**सत्यसंध**–वि सत्यवादी । ತನ್ನ ಪ್ರತಿಜ್ಞೆಯನ್ನು ಪೂರ್ಣ ಮಾಡುವವ, ವಚನ ಪಾಲಿಸುವವ.

**सत्यानास**– पु सर्वनाश । ಸರ್ವನಾಶ.

**सत्यानासी**– वि नाश करनेवाला । ಹಾಳು ಮಾಡುವವ, ನಾಶ ಮಾಡು

ವನ. स्त्री. एक कंटीला पौधा । ಒಂದು ಮುಳ್ಳು ಗಿಡ

**सत्र**– पु. यज्ञ, धन, घर, वह स्थान जहाँपर अनाथो को भोजन दिया जाता है। ಯಜ್ಞ, ಧನ, ಮನೆ, ಅನಾಥಾಲಯ, ಧರ್ಮಛತ್ರ, ಸತ್ರ.

**सत्रह**– वि १७। ಹದಿನೇಳು.

**सत्वर**–क्रिवि. शीघ्र । ಕೂಡಲೆ,ಶೀಘ್ರ ವಾಗಿ, ಬೇಗನೆ, ತ್ವರೆಯಾಗಿ.

**सत्वशाली**–वि. बलवान्। ಬಲವುಳ್ಳವ, ಸಾಹಸಿ, ವೀರ.

**सत्संग**– पु अच्छी संगति । ಒಳ್ಳೆಯ ಸಂಗತಿ, ಸಜ್ಜನರ ಸಂಗತಿ.

**सथिया**– पु. स्वस्तिक चिह्न । ಸ್ವಸ್ತಿಕ ಚಿಹ್ನೆ.

**सद**– वि. नवीन, सौ। ನವ, ಹೊಸ, ನೂರು. अव्य. तुरंत। ಕೂಡಲೇ, ಸದ್ಯಕ್ಕೆ. स्त्री. प्रकृति, अभ्यास। ಪ್ರಕೃತಿ, ಅಭ್ಯಾಸ, ಸ್ವಭಾವ.

**सदई**– अव्य. सर्वदा। ಯಾವಾಗಲೂ.

**सदका**– पु. दान, उतारा। ದಾನ, ದಕ್ಷಿಣೆ, ನಿವಾಳಿ, ಸಮರ್ಪಣೆ.

**सदन**– पु धाम, गृह। ಮನೆ, ಗೃಹ.

**सदफ़**– स्त्री सीपी। ಸಿಂಪು.

**सदमा**– पु दुःख, मानसिक व्यथा, आघात, बडी हानि। ದುಃಖ, ಖೇದ, ಮಾನಸಿಕ ವ್ಯಥೆ, ಆಘಾತ, ಪೆಟ್ಟು, ಧಕ್ಕೆ, ದೊಡ್ಡ ಹಾನಿ.

**सदय**– वि कृपालु। ದಯಾಳು.

**सदर**–वि प्रधान। ಮುಖ್ಯ. पु अध्यक्ष, केंद्रस्थान। ಅಧ್ಯಕ್ಷ, ಕೇಂದ್ರಸ್ಥಾನ.

**सदर आला**– पु. छोटा जज। ಸಬ್ಜಜ್ಜ, ನ್ಯಾಯಾಧೀಶ.

**सदरी**– स्त्री बिना आस्तीन की कुरती। ತೋಳಿಲ್ಲದ ಅಂಗಿ, ಸಣ್ಣ ಅಂಗಿ.

**सदस्य**– पु सभासद। ಸಭಾಸದ.

**सदा**–क्रिवि. सर्वदा, निरंतर। ಯಾವಾಗಲೂ, ನಿರಂತರ.

**सदा**–स्त्री आवाज, प्रतिध्वनि। ಧ್ವನಿ, ಸಪ್ಪಳ, ಪ್ರತಿಧ್ವನಿ, ಕೂಗು.

**सदाक़त**– स्त्री सच्चाई। ಸತ್ಯತೆ.

**सदाचार**– पु. अच्छा चालचलन। ಒಳ್ಳೆಯ ನಡತೆ.

**सदाचारी**– वि सुशील। ಒಳ್ಳೆಯ ನಡತೆಯುವ, ಸುಶೀಲ.

**सदाबरत, सदाबर्त**– पु नित्य का अन्न वितरण। ದೀನ ದುಃಖಿತರಿಗೆ ದಿನಾಲು ಅನ್ನ ನೀಡುವಿಕೆ, ದೀನ ದುಃಖಿತರಿಗೆ ದಿನಾಲು ನೀಡುವ ಅನ್ನ.

**सदाबहार**– वि वह वृक्ष जो सर्वदा हरा रहे या फूले। ಯಾವಾಗಲೂ ಹಸುರಾಗಿರುವ ಅಥವಾ ಹೂವಾಗುವ ಗಿಡ.

**सदारत**– स्त्री सभापतित्व। ಅಧ್ಯಕ್ಷತೆ.

**सदी**– स्त्री शताब्दी। ಶತಮಾನ, ನೂರು ವರ್ಷ, ಶತಾಬ್ದಿ.

**सदृश**– वि समान, तुल्य। ಸಮಾನವಾದ, ಅನುರೂಪವಾದ.

**सदेह**– क्रिवि देह सहित। ದೇಹ

ಸಹಿತ.

सदैव–क्रिवि हमेशा। ಯಾವಾಗಲೂ, ಸರ್ವದಾ, ನಿರಂತರ

सद्गति– स्त्री. अच्छी गति, मोक्ष। ಸದ್ಗತಿ, ಮೋಕ್ಷ.

सद्म– पु घर, युद्ध। ಮನೆ, ಯುದ್ಧ.

सधना– अक्रि पूरा होना, अभ्यस्त होना। ಪೂರ್ಣವಾಗು, ಸಾಧಿಸು, ಕೈಗೂಡು,ಅಭ್ಯಾಸವಾಗು, ಪಳಗು.

सधर– पु. ऊपर का ओंठ। ಮೇಲಿನ ತುಟಿ.

सधवा– स्त्री. सौभाग्यवती। ಸೌಭಾಗ್ಯ ವತಿ, ಸುಮಂಗಲೆ, ಮುತ್ತೈದೆ.

सधाना– सक्रि. पूरा करना, अभ्यस्त करना। ಸಾಧಿಸು, ಸಾಧನೆಮಾಡು, ಪಳಗಿಸು.

सन– पु. एक पौधा। ಸಣಬು, ನಾರು. वि. सन्न, स्तब्ध। ಶಾಂತ, ಸ್ತಬ್ಧ, ಬೆಚ್ಚಿಬಿದ್ದ.

सनई–स्त्री. एक तरह का सन। ಒಂದು ತರದ ಸಣಬು.

सनक– स्त्री धुन, खब्त, झक। ಆಸಕ್ತಿ, ಮರುಳು, ಗೀಳು,ಪೈತ್ಯ, ಹುಚ್ಚು.

सनकना– अक्रि. झक्की या पागल होना। ವಿಕ್ಷಿಪ್ತನಾಗು, ಸಿಟ್ಟಾಗು, ಹುಚ್ಚಾಗು, ಮರುಳಾಗು.

सनकाना– अक्रि. पागल बनाना। ಹುಚ್ಚು ಹಿಡಿಸು,ವಿಕ್ಷಿಪ್ತಮಾಡಿಸು.

सनकार– स्त्री. इशारा। ಸಂಕೇತ, ಸನ್ನೆ.

सनकारना– सक्रि. इशारा करना। ಸಂಕೇತಮಾಡು, ಸನ್ನೆಮಾಡು

सनकियाना–सक्रि. इशारा करना,पागल बनाना। ಸನ್ನೆಮಾಡು, ಹುಚ್ಚು ಹಿಡಿಸು.अक्रि. पागल होना। ಹುಚ್ಚು ಹಿಡಿ, ವಿಕ್ಷಿಪ್ತನಾಗು.

सनकी– वि. पागल, खब्ती। ಹುಚ್ಚ, ಮರುಳ.

सनद–पु. प्रमाण, प्रमाणपत्र। ಪ್ರಮಾಣ, ಪ್ರಮಾಣಪತ್ರ,ಯೋಗ್ಯತಾಪತ್ರಿಕೆ, ಸನದು.

सनद्याफ़्ता– वि. जिसको किसी बात का प्रमाणपत्र मिला है। ಸನದು ಪಡೆದುಕೊಂಡವ, ಪ್ರಮಾಣಪತ್ರ ದೊರಕಿಸಿದವ.

सनना–अक्रि. गूँधा जाना, लीन होना। ನಾದಲ್ಪಡು, ಒಟ್ಟುಗೂಡು,ವಿಲೀನ ವಾಗು, ಮೆತ್ತಿಕೊಳ್ಳು, ಬೆರೆ, ನೇರಿಕೊಳ್ಳು.

सनम–पु. प्रियतम,मूर्ति। ಪ್ರಿಯತಮ, ಪ್ರತಿಮೆ, ಮೂರ್ತಿ.

सनमान–पु. सम्मान। ಸನ್ಮಾನ,ಆದರ.

सनसनाना– अक्रि. हवा के वेग से शब्द होना, खौलते हुए पानी का शब्द होना। ಗಾಳಿಯು ವೇಗವಾಗಿ ಬೀಸುವಾಗ ಸನ್‌ಸನ್ ಸಪ್ಪಳ ವಾಗು, ನೀರು ಕುದಿಯುವಾಗ ಸಳಮಳ ಶಬ್ದವಾಗು.

सनसनाहट– स्त्री. 'सनसन' शब्द। ನೀರು ಕುದಿಯುವ ಹಾಗೂ ಗಾಳಿ

ಬೀಸುವ ಶಬ್ದ.

**सनसनी**– स्त्री उद्वेग, खलबली । ಉದ್ವೇಗ, ಗೊಂದಲ, ಗಾಬರಿ, ಎದೆಗುದಿ, ಕಳವಳ.

**सनातन**– वि. अति प्राचीन, परंपरागत, सदा रहनेवाला । ಅತಿ ಪ್ರಾಚೀನ, ಪರಂಪರಾಗತವಾಗಿ ಬಂದ,ಚಿರಂಜೀವಿ. पु. विष्णु, शिव, ब्रह्म । ವಿಷ್ಣು, ಶಿವ, ಬ್ರಹ್ಮ.

**सनातनी**– पु सनातन धर्म का अनुयायी । ಸನಾತನ ಧರ್ಮದ ಅನುಯಾಯಿ. वि. जो हमेशा से चला आया हो । ಚಿರಕಾಲದಿಂದ ನಡೆಯುತ್ತ ಬಂದ.

**सनाय**–स्त्री. एक पौधा जिस की पत्तियाँ दवाके काममें आती है । ಸೋನಾಮುಖಿ.

**सनाह**– पु. कवच । ಕವಚ.

**सनीड़**– वि. पास का । ಸಮೀಪದ. क्रिवि पासमें । ಸಮೀಪದಲ್ಲಿ.

**सनेह**– पु. स्नेह । ಸ್ನೇಹ, ಪ್ರೇಮ, ಪ್ರೀತಿ.

**सनेहिया, सनेही**– पु. प्रेम करनेवाला । ಪ್ರೇಮ ಮಾಡುವವ, ಸ್ನೇಹಿತ, ಪ್ರಿಯ.

**सन्**– पु. वर्ष । ವರ್ಷ.

**सन्न**-- वि. स्तब्ध, सज्ञाहीन । ಸ್ತಬ್ಧ, ಮೌನ, ಶಾಂತ, ಸಂಜ್ಞಾಹೀನ.

**सन्नाटा**– पु. नि:शब्दता, नीरवता, वायु का तीव्र शब्द । ನಿಃಶಬ್ದತೆ,ನೀರವತೆ, ನಿರ್ಜನತೆ, ಮೌನ, ಶಾಂತತೆ, ಗಾಳಿಯು ಬೀಸುವ ಶಬ್ದ. वि. निर्जन, नीरव । ನಿರ್ಜನ, ಶಾಂತ.

**सन्नाटे में आना** = एकदम स्तब्ध होना । ಒಮ್ಮಿಂದೊಮ್ಮೆ ಶಾಂತನಾಗು, ಆಶ್ಚರ್ಯ ಚಕಿತನಾಗು, ಬೆಕ್ಕಸ ಬೆರಗಾಗು.

**सन्नाह**– पु. दे. ' सनाह ' ।

**सन्निकट**– क्रिवि समीप, निकट । ಸಮೀಪದಲ್ಲಿ, ಹತ್ತರ.

**सन्निधान**– पु. निकटता, आश्रय, समागम । ಸಾಮೀಪ್ಯ, ಆಶ್ರಯ, ಹೊಂದಿಕೆ, ಸೇರಿಕೆ.

**सन्निधि**– स्त्री निकटता, पडोस । ಸಾಮೀಪ್ಯ, ನೆರೆ.

**सन्निवेश**– पु. रखने बैठने बैठाने आदि की क्रिया, स्थिति, घर, आसन, इकट्ठा होना । ಇಡುವ ಕೂಡ್ರುವ, ಕೂಡ್ರಿಸುವ ಮುಂತಾದ ಕ್ರಿಯೆ, ಸ್ಥಿತಿ, ಮನೆ,ಆಸನ, ಕೂಡುವದು, ಸಮೂಹ.

**सन्निहित**– वि समीपका, पास रखा हुआ, तैयार । ಸಮೀಪದಲ್ಲಿದ್ದ, ಸಮೀಪದಲ್ಲಿಟ್ಟ, ಸನ್ನದ್ಧ, ಸಿದ್ಧ.

**सपत्न**– पु दुश्मन, विरोधि । ವೈರಿ, ವಿರೋಧಿ, ಶತ್ರು

**सपत्नी**– स्त्री सौत । ಸವತಿ.

**सपत्नीक**– वि. पत्नी के साथ । ಹೆಂಡತಿಯ ಸಂಗಡ, ಹೆಂಡತಿಯ ಸಹಿತ.

**सपथ**– पु. दे. ' शपथ ' ।

**सपदि**— क्रिवि तत्क्षण । ಕೂಡಲೆ, ಶೀಘ್ರವಾಗಿ.

**सपन, सपना**— पु स्वप्न । ಸ್ವಪ್ನ, ಕನಸು.

**सपरदाई, सफरदाई**—पु. वेश्या के नाच मे तबला सारंगी आदि बजानेवाला। ವೇಶ್ಯೆಯು ಕುಣಿಯುವಾಗ ತಬಲಾ ಮುಂತಾದ ವಾದ್ಯ ಬಾರಿಸುವವ, ಸೂಳೆಯರ ಹಿಮ್ಮೇಳದವ.

**सपरना**— अक्रि पूरा होना, निबटना, हो सकना । ಮುಗಿ, ಪೂರ್ಣವಾಗು, ಸಾಧ್ಯವಾಗು, ಪೂರೈಸು.

**सपराना**— सक्रि काम पूरा करना। ಕೆಲಸ ಮುಗಿಸು, ಪೂರ್ಣಮಾಡು.

**सपाट**— वि एकसा, समतल । ಸಮವಾದ, ಸಮತಲವಾದ, ಚಪ್ಪಟೆಯಾದ, ನುಣುಪಾದ.

**सपाटा**—पु. तेजी, झपट । ನಡೆಯುವ ಅಥವಾ ಓಡುವ ವೇಗ, ಓಟ.

**सैर सपाटा** = घूमना फिरना । ತಿರುಗಾಟ, ಅಡ್ಡಾಡುವಿಕೆ, ಸಂಚಾರ.

**सपुर्द**— स्त्री. दे. 'सुपुर्द'।

**सपूत**— पु. अच्छा पुत्र । ಸುಪುತ್ರ, ಸತ್ಪುತ್ರ.

**सपेत, सपेद**— वि श्वेत। ಬಿಳಿಯ, ಗೌರವರ್ಣದ.

**सपेला, सपोला**— पु साँपका बच्चा । ಹಾವಿನ ಮರಿ.

**सप्त**— वि सात। ಏಳು

**सप्तक**— पु. सात चीजों का समूह। ಏಳು ವಸ್ತುಗಳ ಸಮೂಹ.

**सप्तपदी**— स्त्री. विवाह के समय अग्नि-परिक्रमा की एक विधि । ವಿವಾಹದಲ್ಲಿ ಅಗ್ನಿ ಪ್ರದಕ್ಷಿಣೆಯ ವಿಧಿ.

**सप्तम**— वि. सातवाँ । ಏಳನೆಯ.

**सप्ताह**— पु सात दिनों का समूह, हफ्ता। ವಾರ, ಏಳುದಿನಗಳ ಕಾಲ.

**सफ़**—स्त्री पंक्ति, लंबी चटाई। ಸಾಲು, ಪಂಕ್ತಿ, ವರಸೆ, ಉದ್ದ ಚಾಪೆ.

**सफ़र**—पु. यात्रा । ಪ್ರವಾಸ,ಸಂಚಾರ, ಯಾತ್ರೆ.

**सफरदाई**— पु. दे. 'सपरदाई'।

**सफ़री**— वि. सफर में काम आनेवाला, सफ़र का। ಪ್ರವಾಸದಲ್ಲಿ ಉಪಯೋಗ ಬೀಳುವ, ಪ್ರವಾಸದ. पु. अमरूद, मार्ग व्यय। ಪೇರಲ ಹಣ್ಣು, ಹಾದೀ ವೆಚ್ಚ

**सफल**—वि. कृतार्थ,फलयुक्त । ಕೃತಾರ್ಥ, ಹಣ್ಣುಗಳುಳ್ಳ, ಸಾರ್ಥಕ, ಯಶಸ್ವಿ.

**सफलता**— स्त्री. कामयाबी । ಸಫಲತೆ, ಕೈಗೂಡುವಿಕೆ, ಕಾರ್ಯಸಿದ್ಧಿ.

**सफहा**— पु पृष्ठ । ಪೃಷ್ಟ, ಪುಟ, ಪಾನು

**सफा**— पु दे 'सफहा'। वि. साफ़, निर्मल, चिकना । ಸ್ವಚ್ಛವಾದ, ನಿರ್ಮಲ, ಶುದ್ಧ, ಮೃದುವಾದ.

**सफाई**— स्त्री. स्वच्छता, निर्मलता, निर्णय। ಸ್ವಚ್ಛತೆ, ಸ್ಪಷ್ಟತನ,

ನಿರ್ದೋಷತೆ, ಶುದ್ಧಿ, ನಿರ್ಮಲತೆ, ನಿರ್ಣಯ.

**सफाचट**– वि बिलकुल साफ । ಪೂರ್ಣ ಸ್ವಚ್ಛವಾದ, ನುಣುವಾದ.

**सफीना**– पु. न्यायालय का आज्ञापत्र, किश्ती । ಕೋರ್ಟಿನ ಆಜ್ಞಾಪತ್ರ, ಸಮನ್ಸು, ದೋಣಿ, ನಾವೆ.

**सफीर**– पु एलची, राजदूत । ರಾಯಭಾರಿ, ರಾಜದೂತ. स्त्री. पक्षियो का कलरव । ಪಕ್ಷಿಗಳ ಕಲರವ ಧ್ವನಿ, ಉಲಿತ.

**सफूफ**– पु चूर्ण । ಚೂರ್ಣ, ಪುಡಿ.

**सफ़ेद**– वि श्वेत, शुभ्र । ಬಿಳಿಯ, ಶುಭ್ರ, ಶ್ವೇತ, ಉಜ್ವಲ.

**सफ़ेदपोश**–पु सफेद कपडे पहननेवाला, कुलीन । ಬಿಳಿಯ ಬಟ್ಟೆಗಳನ್ನು ಧರಿಸುವವ, ಕುಲೀನ, ಸಜ್ಜನ, ಮರ್ಯಾದಸ್ಥ

**सफेदा**– पु. जस्ते का चूर्ण या भस्म, खरबूज, आम का एक भेद । ವಂಗ ಭಸ್ಮ, ಒಂದು ಬಗೆಯ ಮಾವಿನ ಹಣ್ಣು, ಒಂದು ಬಗೆಯ ಕರಬೂಜದ ಹಣ್ಣು.

**सफेदी**– स्त्री. धवलता, भीतपर चूना छूहने का कार्य । ಶುಭ್ರತೆ, ಧವಲತೆ, ಬಿಳಿಯತನ, ಸುಣ್ಣ ಬಳೆಯುವಿಕೆ.

**—आना**=वृद्धावस्था आना । ಮುದುಕನಾಗು.

**सब**– वि कुल, सर्व, पूरा । ಒಟ್ಟು. ಎಲ್ಲ, ಪೂರಾ, ಸರ್ವ, ಸಕಲ.

**सबक़**–पु.पाठ, शिक्षा । ಪಾಠ, ಶಿಕ್ಷಣ, ಉಪದೇಶ.

**सबब**– पु कारण, साधन, हेतु । ಕಾರಣ, ಸಾಧನ, ಉದ್ದೇಶ, ಹೇತು.

**सबर**– पु दे. 'सब्र'।

**सबल**– वि. बलवान्, सैन्ययुक्त । ಬಲವುಳ್ಳ, ಶಕ್ತಿವಂತ, ಸೈನ್ಯಯುಕ್ತ. पु. आँखो का एक रोग । ಒಂದು ಕಣ್ಣು ರೋಗ.

**सबा**–स्त्री. सुवह की हवा । ಮುಂಜಾನೆ ಪೂರ್ವ ದಿಕ್ಕಿನಿಂದ ಬೀಸುವ ಗಾಳಿ.

**सबाह**–स्त्री प्रातःकाल, प्रभात । ಪ್ರಾತಃಕಾಲ, ಪ್ರಭಾತ.

**सबील**– स्त्री मार्ग, यत्न, उपाय, वह स्थान जहाँ पथिकों को धर्मार्थ पानी या शरबत पिलाया जाता है । ಮಾರ್ಗ, ಹಾದಿ, ಯತ್ನ, ಉಪಾಯ, ಅರವಟ್ಟಿಗೆ, ಹಾದಿಕಾರರಿಗೆ ಪುಕ್ಕಟೆ ಪಾನಕ ಕುಡಿಸುವ ಸ್ಥಳ.

**सबीह**– वि सुंदर । ಸುಂದರ, ಅಂದವಾದ.

**सबूत**–पु प्रमाण । ಪ್ರಮಾಣ, ಆಧಾರ, ಸ್ಥಿರತ್ವ.

**सबेरा**– पु प्रात.काल । ಮುಂಜಾವು, ಪ್ರಾತಃಕಾಲ.

**सबेरे**– क्रिवि शीघ्र, प्रात.काल । ಬೇಗನೆ, ಬೆಳಿಗ್ಗೆ, ಹೊತ್ತಿಗೆ ಮುಂಚೆ.

**सब्ज़**– वि हरा, ताजा । ಹಸುರಾದ, ನವೀನ, ತಾಜಾ, ಹಸಿ, ಪಕ್ವವಾಗದ.

**सब्ज़ बाग दिखलाना**= काम निकालने के लिये बडी बड़ी आशायें दिलाना। ಕೆಲಸ ಮಾಡಿಸಿಕೊಳ್ಳುವದಕ್ಕಾಗಿ ಆಶೆ ಹಚ್ಚು, ಪ್ರಲೋಭನ ತೋರಿಸು.

**सब्ज़क़दम**–वि. जिसका आगमन अशुभ समझा जाय । ಅಮಂಗಲಕಾರಿ, ಅಶುಭ ಸೂಚಕ.

**सब्ज़ा**– पु हरियाली, एक तरह का घोड़ा, एक रत्न, भंग । ಹಸುರು, ಹುಲ್ಲುಗಾವಲು, ಒಂದು ತರದ ಕುದುರೆ, ಪಚ್ಚೆ, ಮರಕತ, ಬಂಗಿ ಸೊಪ್ಪು.

**सब्ज़ी**– स्त्री हरियाली, हरी तरकारी, भाग। ಹಸುರು, ಹುಲ್ಲುಗಾವಲು, ಪೈರು,ಹಸುರುವಾಣಿ, ಕಾಯಿಪಲ್ಲೆ, ಬಂಗಿ ಸೊಪ್ಪು

**सब्र**– पु. धैर्य, संतोप । ಧೈರ್ಯ, ಸಂತೋಷ, ಸಹನಶೀಲತೆ,ಸೈರಣೆ, ತಾಳ್ಮೆ.

**सभा**– स्त्री. परिषद, समूह, समिति । ಸಭೆ, ಪರಿಷತ್ತು,ಸಮೂಹ,ಸಮಿತಿ, ಮಂಡಲ.

**सभापति**–पु. सभा या समाज के नेता। ಅಧ್ಯಕ್ಷ, ಸಭೆ ಅಥವಾ ಸಮಿತಿಯ ಮುಖ್ಯಸ್ಥ.

**सभासद**– पु सदस्य । ಸದಸ್ಯ.

**सभ्य**– पु. सभासद, सुशिक्षित, चतुर । ಸಭಾಸದ, ಸುಶಿಕ್ಷಿತ, ಚತುರ.

**सभ्यता**– स्त्री सज़्जनता, भलमनसी, संस्कृति, सदस्यता । ಸಜ್ಜನತೆ, ಶಿಷ್ಟತನ, ಸಭ್ಯತೆ, ನಾಗರಿಕತೆ, ಸಂಸ್ಕೃತಿ, ಸದಸ್ಯತ್ವ.

**सम**– वि समान, तुल्य, एकसा । ಸಮಾನ,ಸರಿಯಾದ,ಒಂದೇತರದ, ಸದೃಶ स्त्री. समता । ಸಮಾನತೆ. पु. विष । ವಿಷ, ನಂಜು.

**समकक्ष**– वि बराबर, समान । ಸರಿಯಾದ, ಸಮಾನವಾದ.

**समकालीन**–वि एक ही समय में होनेवाला। ಒಂದೇ ಕಾಲದಲ್ಲಿ ಆಗುವ, ಒಂದೇ ಸಮಯದ.

**समक्ष**– क्रिवि सम्मुख। ಎದುರಿಗೆ, ಸಮಕ್ಷವಾಗಿ.

**समग्र**– वि. कुल । ಎಲ್ಲ, ಪೂರಾ.

**समझ**– स्त्री. ज्ञान, बुद्धि । ಜ್ಞಾನ, ಬುದ್ಧಿ, ತಿಳಿವಳಿಕೆ,ವಿವೇಕ,ಅರಿವು.

**समझदार**–वि.बुद्धिमान। ಬುದ್ಧಿವಂತ, ತಿಳಿವಳಿಕೆಯುಳ್ಳ, ವಿವೇಕಿ. ಅರಿವುಳ್ಳವ

**समझदारी**– स्त्री. बुद्धिमानी । ಬುದ್ಧಿವಂತಿಕೆ, ಅರಿವು, ತಿಳಿವಳಿಕೆ.

**समझना**– अक्रि विचारना, जानना । ತಿಳಿ, ಅರಿ, ಜ್ಞಾನಮಾಡಿಕೊಳ್ಳು, ಗ್ರಹಿಸು.

**समझाना**– सक्रि. दूसरे को समझने में प्रवृत्त करना । ತಿಳಿಸು, ತಿಳಿಹೇಳು, ಬುದ್ಧಿ ಹೇಳು,ಒಪ್ಪಿಸು,ಬೋಧಿಸು.

**समझौता**– पु. मेल, आपस का निपटारा । ಸಂಧಾನ, ರಾಜಿ,ಒಡಂಬ-

ಡಿಕೆ, ಒಪ್ಪಂದ.

**समतल**–वि जिस की सतह ऊबडखाबड़ न हो। ಸಮತಲ, ಸಪಾಟ.

**समता, समताई**– स्त्री. समान होने का भाव, बराबरी। ಸಮಾನತೆ, ಸರಿಜೋಡಿ.

**समत्थ**– वि. समर्थ। ಸಮರ್ಥ.

**समदन**– पु. लड़ाई, भेंट, उपहार। ಯುದ್ಧ, ಸಂಗ್ರಾಮ, ಭೆಟ್ಟಿ, ಸಂದರ್ಶನ, ಕಾಣಿಕೆ.

**समदना**– सक्रि प्रेमपूर्वक मिलना, सौंपना। ಪ್ರೇಮದಿಂದ ಭೆಟ್ಟಿಯಾಗು, ಒಪ್ಪಿಸು, ಕೊಡು.

**समदाना**– सक्रि समर्पित करना, हवाले करना, धरना। ಸಮರ್ಪಿಸು, ಒಪ್ಪಿಸು, ಹಿಡಿ, ತೆಗೆದುಕೊಳ್ಳು.

**समधियाना**– पु. समधी का घर। ಬೀಗನ ಮನೆ.

**समधी**– पु बेटे या बेटी का ससुर। ಮಗ ಅಥವಾ ಮಗಳ ಮಾವ, ಬೀಗ.

**समन्वय**–पु. मेल, संयोग। ಹೊಂದಿಕೆ, ಸಂಯೋಗ.

**समन्वित**– वि संयुक्त। ಕೂಡಿಸಿದ, ಒಂದಾದ, ಜೋಡಿಸಲ್ಪಟ್ಟ.

**समय**–पु. काल, फ़ुरसत, अवसर, उपदेश, धर्म, आचार। ಕಾಲ, ವೇಳೆ, ಸಮಯ, ಬಿಡುವು, ಸಂಧಿ, ಉಪದೇಶ, ಧರ್ಮ, ಆಚಾರ.

**समर**– पु. युद्ध। ಯುದ್ಧ, ಕಾಳಗ.

**समर**– पु. फल, लाभ, संतान, धन। ಫಲ, ಲಾಭ, ಸಂತಾನ, ಧನ, ಸಂಪತ್ತು.

**समरत्थ, समरथ**– वि समर्थ, योग्य, बलवान्। ಸಮರ್ಥ, ಯೋಗ್ಯ, ಶಕ್ತಿವಂತ.

**समरभूमि**– स्त्री **समरांगण**– पु रणक्षेत्र। ರಣಭೂಮಿ

**समर्थक**–पु. समर्थन करनेवाला। ಸಮರ್ಥಿಸುವವ, ಸಹಾಯಕ, ಅನುಮೋದಕ.

**समर्थन**–पु पुष्टीकरण, विवेचन। ಪುಷ್ಟಿ, ಸಮರ್ಥನೆ, ಪೋಷಣೆ, ವಿವೇಚನೆ.

**समर्पण**– पु. उपहार, भेंट, उत्सर्ग। ಕಾಣಿಕೆ, ದಾನ, ಆತ್ಮಸಮರ್ಪಣೆ.

**समर्पना**– सक्रि सौंपना। ಸಮರ್ಪಿಸು, ಕೊಡು, ಒಪ್ಪಿಸು.

**समवेदना**–स्त्री सहानुभूति। ಸಹಾನುಭೂತಿ.

**समष्टि**– स्त्री. समस्त, सबका समूह। ಒಟ್ಟು, ಎಲ್ಲ, ಎಲ್ಲರ ಸಮೂಹ.

**समसास**– स्त्री. नंगी तलवार। ಬಿಚ್ಚುಗತ್ತಿ

**समस्त**– वि कुल, सारा, समासयुक्त। ಎಲ್ಲ, ಸಂಪೂರ್ಣ, ಸಮ, ಸಾಮಾಸಿಕ, ಸಮಾಸವುಳ್ಳ.

**समस्या**– स्त्री. उलझन, कठिन प्रश्न, संघटन, मिश्रण, पद्य का अंतिमांश जिस के आधार पर पूरा पद्य रचा जाता है। ತೊಡಕು, ಕಠಿಣಪ್ರಶ್ನೆ

ಸಂಘಟನೆ, ಮಿಶ್ರಣ, ಪದ್ಯವನ್ನು ಪೂರ್ಣ ಮಾಡಬೇಕಾದ ಪದ್ಯದ ಕೊನೆಯ ಸಾಲು.

**समाँ**– पु समय, काल । ಸಮಯ, ಕಾಲ, ವೇಳೆ, ಹೊತ್ತು.

**समा**– पु आकाश । ಆಕಾಶ.

**समाअत**– स्त्री सुनवाई । ಕೇಳಿಕೆ, ಆಲಿಸುವಿಕೆ.

**समाई**– स्त्री हैसियत, शक्ति । ಅಳವು, ವಿಸ್ತಾರ, ಶಕ್ತಿ, ಸಾಮರ್ಥ್ಯ.

**समाई**– वि सुना हुआ । ಕೇಳಿದ, ಕೇಳಿಕೆಯ, ಎರಡನೆಯವರು ಹೇಳಿದ.

**समागम**– पु भेंट, मिलन, संभोग । ಭೆಟ್ಟಿ, ಸಂಯೋಗ, ಹೊಂದಿಕೆ. ಸಂಭೋಗ.

**समाचार**– पु खबर, संदेश । ಸುದ್ದಿ, ಸಂದೇಶ, ವರ್ತಮಾನ.

**समाचारपत्र**–पु अखबार । ವೃತ್ತಪತ್ರ, ವರ್ತಮಾನಪತ್ರ.

**समाज**– पु समुदाय, मंडली । ಸಮುದಾಯ, ಮಂಡಲಿ, ಸಮಾಜ.

**समाजवाद**– पु. साम्यवाद । ಸಾಮ್ಯವಾದ

**समादेय**–वि आदरणीय । ಆದರಣೀಯ.

**समाधि**–स्त्री. चित्त की एकाग्रता, शांति, निद्रा, योग का चरम फल, समाधान, कब्र, एक काव्यालंकार । ಏಕಾಗ್ರತೆ, ಧ್ಯಾನ, ಶಾಂತಿ, ನಿದ್ದೆ, ಯೋಗದಿಂದಾಗುವ ಸಮಾಧಿ, ಸಮಾಧಾನ, ಗೋರಿ, ಸಮಾಧಿಸ್ಥಾನ, ಒಂದು ಕಾವ್ಯಾಲಂಕಾರ

**समानता**– स्त्री. बराबरी । ಸಮಾನತೆ, ಸಾದೃಶ್ಯ.

**समाना**–अक्रि. भरना, अँटना । ಹಿಡಿಸು, ತುಂಬು. सक्रि. अटाना, भरना । ತುಂಬು, ನೇರಿಸು.

**समाप्त**–वि जिस का अंत हो गया हो । ಪೂರ್ಣವಾದ, ಮುಗಿದ, ಸಮಾಪ್ತವಾದ, ಕೊನೆಗಂಡ.

**समाप्ति**– स्त्री. किसी कार्य का अंत, प्राप्ति । ಅಂತ, ಕೊನೆ, ಮುಗಿತಾಯ, ಪ್ರಾಪ್ತಿ.

**समारंभ**–पु पूरी तैयारी के साथ आरंभ होना । ಪೂರ್ಣ ಸಿದ್ಧತೆಯಿಂದ ಆರಂಭಿಸುವಿಕೆ, ವಿಜೃಂಭಣೆ.

**समारोह**– पु. बड़ा उत्सव, धूमधाम, आरोहण । ದೊಡ್ಡ ಉತ್ಸವ, ಸಡಗರ, ವಿಜೃಂಭಣೆ, ಅಟ್ಟಹಾಸ, ಆರೋಹಣ.

**समालोचक**–पु समालोचना करनेवाला । ವಿಮರ್ಶಕ, ಟೀಕಾಕಾರ, ವಿವೇಚಕ.

**समालोचना**– स्त्री गुण दोष समीक्षा । ವಿಮರ್ಶೆ, ಗುಣದೋಷ ಪರೀಕ್ಷೆ, ಸಮೀಕ್ಷೆ.

**समाविष्ट**– वि. जिस का समावेश हुआ हो । ಸಮಾವೇಶವಾದ, ಹಿಡಿಸಿದ, ಅಂತರ್ಗತ.

**समावेश**–पु. एक पदार्थ का दूसरे पदार्थ के अंतर्गत होना । ಸಮಾವೇಶ

ವಾಗುವಿಕೆ,ಕೂಡಿಕೊಳ್ಳುವಿಕೆ,ಅಂತ ರ್ಗತವಾಗುವಿಕೆ, ಲೀನವಾಗುವಿಕೆ.

**समाहार**–पु समूह। ಸಮೂಹ,ಒಟ್ಟು.

**समाहित**–वि स्वीकृत, स्थापित, केंद्रित, एकत्रीभूत । ಸ್ವೀಕೃತ, ಸ್ಥಾಪಿತ, ಕೇಂದ್ರೀಕರಿಸಿದ, ಕೂಡಿಸಿದ.

**समिति**– स्त्री सभा, समाज, युद्ध । ಸಮಿತಿ, ಸಭೆ, ಮಂಡಲಿ,ಸಮಾಜ, ಯುದ್ಧ.

**समिधा, समिधि**–स्त्री होम की लकडी । ಹೋಮದಲ್ಲಿ ಸುಡುವ ಕಟ್ಟಿಗೆ.

**समीकृत**– वि बराबर किया हुआ । ಸರಿಯಾಗಿ ಭಾಗಮಾಡಿದ.

**समीक्षा**–स्त्री समालोचना, अच्छी तरह की विवेचना। ವಿಮರ್ಶೆ,ವಿವೇಚನೆ.

**समीचीन**– वि योग्य, यतार्थ, न्यायसगत । ಯೋಗ್ಯ, ಉಚಿತ, ಯಥಾರ್ಥ, ನ್ಯಾಯಸಂಗತವಾದ.

**समीप**–वि निकट। ಸಮೀಪ,ಹತ್ತಿರ.

**समीपवर्ती**– वि पास का। ಸಮೀಪದ, ಸಮೀಪದಲ್ಲಿರುವ,ಬಳಿಯಲ್ಲಿರುವ, ಹತ್ತಿರದ

**समीर**–पु. हवा। ಹವೆ,ವಾಯು,ಗಾಳಿ.

**समीरण**–पु वायु, श्वास, पथिक। ಗಾಳಿ, ವಾಯು, ಶ್ವಾಸ, ಹಾದಿಕಾರ.

**समुंद, समुंदर**– पु. समुद्र। ಸಮುದ್ರ.

**समुचित**– वि ठीक, उपयुक्त । ಸರಿಯಾದ, ಯೋಗ್ಯ, ಉಪಯುಕ್ತ.

**समुच्चय**– पु समूह, संग्रह। ಸಮೂಹ, ಸಂಗ್ರಹ.

**समुज्वल**– वि अति उज्वल। ಬಹಳ ಉಜ್ವಲವಾದ

**समुझना**– सक्रि. दे 'समझना'।

**समुदाइ, समुदाय, समुदाव**– पु झुंड, समूह। ಗುಂಪು, ಸಮೂಹ, ಸಮುದಾಯ

**समुन्नत**– वि. बहुत ऊँचा। ಅತ್ಯುನ್ನತ, ಬಹಳ ಎತ್ತರವಾದ.

**समुल्लास**– पु आनंद, परिच्छेद । ಆನಂದ, ಉಲ್ಲಾಸ, ಪರಿಚ್ಛೇದ.

**समुहा**– वि सामने का । ಮುಂದಿನ, ಎದುರಿನ, ಸಮ್ಮುಖದ.

**समुहाना**–अक्रि. सामने होना। ಮುಂದೆ ಬರು, ಎದುರಿಗೆ ಬರು.

**समूचा**– वि सब, समस्त। ಎಲ್ಲ, ಒಟ್ಟು, ಪೂರಾ, ಇಡೀ, ಸಮಸ್ತ.

**समूढ**– वि संचित, ढेर किया हुआ, संशोधित, ठीक, विवाहित, दमन किया हुआ। ಕೂಡಿಸಿದ, ರಾಶಿ ಮಾಡಿದ, ಸಂಗ್ರಹ ಮಾಡಿದ, ಸಂಶೋಧಿತ, ಸರಿಯಾದ, ವಿವಾಹಿತ, ದಮನ ಮಾಡಿದ.

**समूर, समूल**– क्रिवि. जड़से। ಸಮೂಲವಾಗಿ, ಬೇರು ಸಹಿತ. वि जड सहित, पूरा। ಪೂರ್ಣ, ಬೇರು ಸಹಿತವಾದ, ಪುಟ್ಟಪೂರಾ.

**समूह**– पु समुदाय। ಸಮುದಾಯ, ಗುಂಪು, ಜಂಗುಳಿ.

**समृद्ध**– वि धनवान्। ಶ್ರೀಮಂತ, ಧನಸಂಪನ್ನ, ಐಶ್ವರ್ಯವಂತ.

**समृद्धि**– स्त्री ऐश्वर्य, उन्नति । ಐಶ್ವರ್ಯ, ಸಂಪತ್ತು, ಉನ್ನತಿ.

**समेटना**– सक्रि इकट्ठा करना, बटोरना । ಕೂಡಿಸು, ಒಂದುಗೂಡಿಸು, ಗುಂಪು ಮಾಡು, ಮುದುರು, ಸುರುಟು, ಸಂಗ್ರಹ ಮಾಡು.

**समेत**– अव्य सहित । ಸಹಿತ, ಸಹ, ಸಂಗಡ. वि संयुक्त, मिला हुआ । ಸಂಯುಕ್ತ, ಕೂಡಿದ.

**समोना**– सक्रि मिलाना । ಕೂಡಿಸು, ಒಂದುಗೂಡಿಸು.

**समोह**– पु. युद्ध । ಯುದ್ಧ.

**समौरिया**– वि. समवयस्क । ಸಮ ವಯಸ್ಕ, ಓರಗೆಯುವ.

**सम्मत**– वि सहमत । ಸಹಮತ, ಅನುಕೂಲ. पु. राय, सम्मति । ಅಭಿಪ್ರಾಯ, ಸಮ್ಮತಿ

**सम्मति**– स्त्री. राय । ಅಭಿಪ್ರಾಯ, ಸಮ್ಮತಿ.

**सम्मान**– पु. आदर । ಸನ್ಮಾನ, ಆದರ.

**सम्मानना**– सक्रि. आदर करना । ಆದ ರಿಸು. स्त्री. आदर । ಆದರ.

**सम्मानित**– वि. प्रतिष्ठित । ಪ್ರತಿಷ್ಠಿತ, ಮಾನ್ಯ, ಆದರಿಸಲ್ಪಟ್ಟ.

**सम्मार्जनी**–स्त्री. झाड़ू । ಉಡುಗೋಲು, ಕಸಬರಿಗೆ.

**सम्मिलित**– वि मिला हुआ, एकत्र । ಕೂಡಿಸಿದ, ಒಂದಾದ ಸೇರಿಸಿದ.

**सम्मुख**– अव्य सामने । ಎದುರಿಗೆ, ಮುಂದೆ.

**सम्मेलन**– पु. सभा, जमघट । ಸಭೆ, ಗುಂಪು, ಸಮೂಹ, ಸಮ್ಮೇಲನ, ಪರಿಷತ್ತು.

**सम्मोह**– पु भ्रम, संदेह, मूर्छा । ಭ್ರಮೆ, ಮೋಹ, ಸಂದೇಹ, ಮೂರ್ಛೆ.

**सम्मोहन**– पु प्राचीन काल का एक अस्त्र, मोह । ಪ್ರಾಚೀನ ಕಾಲದ ಒಂದು ಅಸ್ತ್ರ, ಮೋಹ.

**सम्यक्**– वि. पूर्ण । ಪೂರ್ಣ, ಎಲ್ಲ, ಸರ್ವ. क्रिवि. भलीभाँति । ಯೋಗ್ಯ ರೀತಿಯಿಂದ, ಸರ್ವ ಪ್ರಕಾರದಿಂದ पु. समूह । ಸಮೂಹ.

**सम्याना**– पु दे 'शामियाना'।

**सम्राज्ञी**– स्त्री. महारानी । ಮಹಾ- ರಾಣಿ, ಚಕ್ರವರ್ತಿನಿ.

**सम्राट्**– पु. बादशाह । ಚಕ್ರವರ್ತಿ, ರಾಜಾಧಿರಾಜ.

**सयान, सयानपन**– पु. समझदारी । ತಿಳಿವಳಿಕೆ, ಬುದ್ಧಿವಂತಿಕೆ, ಜಾಣ್ಮೆ.

**सयाना**– वि बालिग, धूर्त, चतुर । ವಯಸ್ಕ, ತರುಣ, ಧೂರ್ತ, ಬುದ್ಧಿ ವಂತ, ಚತುರ.

**सर**– पु शर, तालाब, जल, गति, चिता । ಬಾಣ, ಕೆರೆ, ಸರೋವರ, ನೀರು, ಗತಿ, ಚಿತೆ, ಅಗ್ನಿ. स्त्री माला । ಮಾಲೆ.

**सर**– पु. शिर, सरदार, आरंभ, शक्ति । ತಲೆ, ಸರದಾರ, ಮುಖಂಡ, ಆರಂಭ, ಶಕ್ತಿ.

**सरजाम, सरअंजाम**– पु. सामग्री, तैयारी, व्यवस्था । ಸಾಮಗ್ರಿ, ವ್ಯವಸ್ಥೆ, ಏರ್ಪಾಡು.

**सरकंडा**– पु एक पौधा, नरकट । ಲಾಳದ ಕಡ್ಡಿ, ಗಲಗು.

**सरक**– स्त्री खुमार, मद्यपात्र, सरकने की क्रिया । ಸೆರೆಯ ಅಮಲು, ಮದ್ಯ ಪಾತ್ರೆ, ಜಾರುವಿಕೆ, ಸರಿಯುವಿಕೆ.

**सरकना**– अक्रि हिलना, हट जाना, खिसकना । ಅಲ್ಲಾಡು, ಸರಿ, ಜಾರು, ಉರುಳು, ನುಸುಳು, ಜಾರಿಹೋಗು, ಓಡಿಹೋಗು.

**सरकश**– वि उद्दंड, दुष्ट, बागी । ಉದ್ದಂಡ, ದುಷ್ಟ, ವಿದ್ರೋಹಿ, ಗಲಾಟೆಖೋರ, ಮೊಂಡ.

**सरकशी**– स्त्री उद्दंडता, बगावत । ದುಷ್ಟತನ, ವಿದ್ರೋಹ, ದಂಗೆ, ಧಾಂಧಲೆ, ಉಪಟಳ.

**सरकार**– स्त्री. गवर्मेंट । ಸರಕಾರ, ರಾಜ್ಯಸಂಸ್ಥೆ, ಪ್ರಭುತ್ವ.

**सरकारी**–वि राजकीय । ರಾಜಕೀಯ, ಸರಕಾರದ, ಪ್ರಭುತ್ವದ.

**सरख़त**–पु. किराये आदि का शर्तनामा, आज्ञापत्र, परवाना । ಬಾಡಿಗೆ ಮುಂತಾದವುಗಳ ಕರಾರುಪತ್ರ, ಆಜ್ಞಾಪತ್ರ, ದಸ್ತೈವಜು

**सरग**– पु स्वर्ग । ಸ್ವರ್ಗ.

**सरग़ना**– पु सरदार, नायक । ಸರದಾರ, ಮುಖಂಡ, ನಾಯಕ.

**सरगर्म**– वि. जोशीला । ಆವೇಶವುಳ್ಳ, ಉತ್ಸಾಹಿ, ಹುರುಪುಳ್ಳ, ಹುಮ್ಮಸ್ಸುಳ್ಳ

**सरगर्मी**–स्त्री जोश, उत्साह । ಆವೇಶ, ಉತ್ಸಾಹ, ಹುರುಪು, ಹುಮ್ಮಸ್ಸು.

**सरगुज़श्त**– स्त्री सरपर बीती बात, हाल, जीवनचरित्र । ಅನುಭವಿಸಿದ ಸಂಗತಿ, ವರ್ಣನೆ, ಪ್ರಸಂಗ, ಜೀವನಚರಿತ್ರೆ.

**सरघा**– स्त्री. मधुमक्खी । ಜೇನ್ನೊಣ.

**सरजा**– पु. सिंह, सरदार । ಸಿಂಹ, ಸರದಾರ, ಮುಖಂಡ, ನಾಯಕ

**सरज़ोर**– वि जबर्दस्त । ಬಲವುಳ್ಳ, ದೃಢ, ಪ್ರಬಲ, ದುಷ್ಟ, ಅವಿಧೇಯ.

**सरणि, सरणी**– स्त्री मार्ग । ಮಾರ್ಗ, ಹಾದಿ.

**सरताज**– पु. सिरताज, श्रेष्ठ व्यक्ति । ಮುಕುಟ, ಕಿರೀಟ, ಶ್ರೇಷ್ಠವ್ಯಕ್ತಿ, ಶಿರೋಮಣಿ.

**सरतापा**– क्रिवि सिर से पैरतक । ನಖಶಿಖಾಂತ, ಮೊದಲಿನಿಂದ ಕೊನೆಯ ವರೆಗೆ.

**सरतारा**– वि. निश्चित । ನಿಶ್ಚಿಂತ

**सरद**– स्त्री शरत् ऋतु । ಶರದೃತು.

**सरदर**– क्रिवि औसनत, सब एक साथ मिलाकर । ಒಟ್ಟಿಗೆ, ಸಗಟಿನಲ್ಲಿ, ಸರಾಸರಿ.

**सरदार**–पु नायक, अगुआ । ನಾಯಕ, ಮುಂದಾಳು, ಶ್ರೀಮಂತ, ಶಾಸಕ.

**सरदारिन**–स्त्री 'सरदार' का स्त्री रूप।

**सरधा**– स्त्री श्रद्धा, शक्ति । ಶ್ರದ್ಧೆ,

ಶಕ್ತಿ.

**सरनदीप**– पु लंका। ಸಿಂಹಳ ದ್ವೀಪ, ಲಂಕಾ.

**सरना**– अक्रि निकलना, चलना, पूरा होना। ಸರಿ,ಹರಿದಾಡು, ಅಲ್ಲಾಡು, ಸರಕು, ಹೊರಡು, ನಡೆದಾಡು, ಪೂರ್ಣವಾಗು, ಮುಗಿ.

**सरनाम**– वि प्रसिद्ध। ಪ್ರಸಿದ್ಧ, ಹೆಸರುವಾಸಿಯಾದ.

**सरनामा**– पु. शीर्षक, पत्रका आरभ, पता। ಶೀರ್ಷಿಕ, ತಲೆಬರಹ, ಪತ್ರದ ಆರಂಭ. ವಿಳಾಸ, ಒಕ್ಕಣೆ.

**सरनी**– स्त्री. रास्ता। ಹಾದಿ, ಮಾರ್ಗ.

**सरपंच**– पु. प्रधानपंच। ಮುಖ್ಯ ಪಂಚ, ಸರಪಂಚ.

**सरपट**– क्रिवि तेज चालसे। ವೇಗ ವಾಗಿ, ನಾಗಾಲೋಟದಿಂದ

**सरपत**– पु एक तरह की घास। ಚಪ್ಪರ ಹೊದಿಸುವ ಒಂದು ತರದ ಹುಲ್ಲು, ಗಲಗು.

**सरपरस्त**– पु संरक्षक। ಸಂರಕ್ಷಕ, ಪೋಷಕ

**सरपरस्ती**– स्त्री संरक्षण। ಸಂರಕ್ಷಣೆ, ಪೋಷಣೆ.

**सरपोश**– पु तश्तरी ढकने का कपडा। ತಟ್ಟೆಯಮೇಲೆ ಹೊದಿಸುವ ಬಟ್ಟೆ, ತಾಟಿನಮೇಲೆ ಹೊದಿಸುವ ಬಟ್ಟೆ.

**सरफराज़**– वि गौरवान्वित। ಗೌರವಾನ್ವಿತ,ಉಚ್ಚ ಪದಕ್ಕೇರಿದ, ಮಾನ್ಯ.

**सरबराह, सरबराहकार**– पु. प्रबंधक, कारिंदा। ವ್ಯವಸ್ಥಾಪಕ, ಕೂಲಿಕಾರರ ಮುಖ್ಯಸ್ಥ.

**सरबराही**– स्त्री. व्यवस्था। ವ್ಯವಸ್ಥೆ, ಏರ್ಪಾಡು, ಆಡಳಿತೆ.

**सरबस**– पु सर्वस्व। ಸರ್ವಸ್ವ, ಎಲ್ಲ

**सरबस्ता**– वि छिपा हुआ, गुप्त। ಮುಚ್ಚಿದ, ಗುಪ್ತ.

**सरम**– स्त्री दे 'शरम'।

**सरमा**–स्त्री जाडा। ಚಳಿಗಾಲ,ಮಾಗಿ.

**सरमा**– स्त्री. दे 'कुतिया'।

**सरल**– वि सीधा, साधु। ಸರಳ, ಸೀಧಾ, ಸುಲಭ, ಸಾಧುವಾದ, ಪ್ರಾಮಾಣಿಕ, ನಿಷ್ಕಪಟವಾದ.

**सरलता**–स्त्री. सादगी,सीधापन,सुगमता, सचाई, आसानी। ಸರಲತನ, ಸುಲಭತನ, ಸಾಧುತ್ವ, ಒಳ್ಳೆಯತನ,ಪ್ರಾಮಾಣಿಕತನ,ಹಗುರತನ.

**सरवत**–स्त्री संपन्नता,वैभव। ಸಮೃದ್ಧಿ, ವೈಭವ.

**सरवर**– पु सरोवर। ಸರೋವರ.

**सरवरि**– स्त्री बराबरी। ಸಮಾನತೆ, ಸರಿ.

**सरवाक**– पु. कटोरा। ಮಣ್ಣಿನ ಬಟ್ಟಲು, ಹಣತೆ.

**सरवान**– पु तंबू। ಡೇರೆ, ಗುಡಾರ, ತಂಬು.

**सरस**– वि रसीला, भावपूर्ण, श्रेष्ठ। ರಸಯುಕ್ತ, ರಸವತ್ತಾದ, ಸಿಹಿಯಾದ, ಭಾವಪೂರ್ಣ, ಶ್ರೇಷ್ಠ.

**सरसई**– स्त्री सरसता, सरस्वती देवी,

फलों के महीन अंकुर या दाने। ರಸವತ್ತಾಗಿರುವಿಕೆ, ಸರಸತೆ, ಭಾವ ಪೂರ್ಣತೆ,ಸರಸ್ವತಿ ದೇವಿ,ಹೀಚು, ಮಿಡಿಗಾಯಿ.

**सरसता**– स्त्री रसयुक्तता । ಸರಸತೆ, ಸವಿ.

**सरसना**–अक्रि पनपना, बढ़ना, शोभित होना, रसपूर्ण होना, उमंग में भरना। ಚಿಗುರು, ಕೊನರು, ಬೆಳೆ, ಕಳಕಳಿಸು, ಚೆಂದ ಕಾಣು, ಶೋಭಿಸು, ರಸಭರಿತವಾಗು, ವೃದ್ಧಿಯಾಗು, ಪ್ರಫುಲ್ಲಿತವಾಗು.

**सरसब्ज**– वि हराभरा, लहलहाता हुआ, प्रसन्न, सफल मनोरथ। ಹಸುರಾದ, ಹಚ್ಚಗಿರುವ, ಕಳಕಳಿಸುವ, ಚೆಂದ ಕಾಣುವ, ಪ್ರಸನ್ನನಾದ, ಸಂತುಷ್ಟನಾದ, ತೃಪ್ತಿ ಪಡೆದ.

**सरसर**– पु भूमिपर रेंगने का शब्द, हवा वहने का शब्द। ಹಾವು ಮುಂತಾದವುಗಳು ಹರಿದಾಡುವಾಗ ಆಗುವ ಸರಸರ ಶಬ್ದ, ಹವೆಯು ಚಲಿಸುವದರಿಂದ ಉಂಟಾಗುವ ಶಬ್ದ.

**सरसराना**–अक्रि वायु का वेग से चलना, साप इत्यादि का रेंगना, सरसर आवाज होना। ವೇಗವಾಗಿ ಗಾಳಿ ಬೀಸು, ಹಾವು ಸರಸರ ಓಡು, ಹರಿದಾಡು, ಸರಸರ ಶಬ್ದವಾಗು.

**सरसराहट**– स्त्री साँप आदि के चलने की आवाज, वायुके वहने का शब्द, खुजली। ಹಾವು ಚಲಿಸುವ ಶಬ್ದ, ಹರಿದಾಡುವ ಶಬ್ದ, ಗಾಳಿ ಬೀಸುವ ಶಬ್ದ, ತೀಟಿ, ನವೆ.

**सरसरी**– क्रिवि जल्दी में। ಅವಸರದಲ್ಲಿ. वि जल्दी में, स्थूल रूप से, मोटे तौरपर। ಅವಸರದ, ಸ್ಥೂಲ ರೀತಿಯ, ಮೇಲು ಮೇಲಿನ, ಸಾಧಾರಣವಾದ.

**—तौरसे** = मोटे तौरसे। ಸ್ಥೂಲ ರೀತಿಯಿಂದ, ಸಾಧಾರಣವಾಗಿ.

**सरसाई**– स्त्री सरसता,अधिकता,शोभा। ಸರಸತೆ, ಸವಿ, ಆಧಿಕ್ಯ,ಸೌಂದರ್ಯ, ಶೋಭೆ.

**सरसाना**–सक्रि रसयुक्त करना,हराभरा करना। ರಸವತ್ತಾಗಿ ಮಾಡು, ಸ್ವಾರಸ್ಯ ಹುಟ್ಟಿಸು, ಚಿಗುರಿಸು, ಬೆಳೆಸು, ಅಭಿವೃದ್ಧಿಗೆ ತರು.

**सरसाम**– पु त्रिदोष ( सन्निपात )। ಸನ್ನಿಪಾತ.

**सरसिज**– पु. कमल । ಕಮಲ.

**सरसी**– स्त्री. छोटा तालाब। ಚಿಕ್ಕಕೆರೆ, ಕೊಳ.

**सरसेटना**– अक्रि डाँटना, फटकारना। ಬೆದರಿಸು, ಗದರಿಸು, ಎಚ್ಚರಿಸು, ಬಯ್ಯು, ಜರೆ.

**सरसो**– स्त्री एक तिल-बीज । ಬಿಳಿ ಸಾಸಿವೆ.

**सरह**– पु. फतिंगा, टिड्डी। ಪತಂಗದ ಹುಳು, ಶಲಭ, ಮಿಡತೆ.

**सरहज**– स्त्री सालेकी स्त्री। ಹೆಂಡತಿಯ

ಸಹೋದರನ ಹೆಂಡತಿ, ವೈದುನನ ಹೆಂಡತಿ.

**सरहद**– स्त्री. सीमा। ಸೀಮೆ, ಗಡಿ, ಎಲ್ಲೆ, ಸರಹದ್ದು.

**सरहदी**–वि सीमा संबंधी। ಸೀಮೆಯ ಸಂಬಂಧದ, ಗಡಿಯ

**सरा**– स्त्री. चिता। ಚಿತೆ, ಶವ ಸಂಸ್ಕಾರದ ಅಗ್ನಿ.

**सरा**– पु. मिट्टी। ಮಣ್ಣು. स्त्री. दे. 'सराय'।

**सराई**– स्त्री सलाकी, पाजामा, ठडक। ಸಲಾಕಿ, ಪಾಯಜಾಮೆ, ಚಳಿ.

**सराग**– पु. शलाका, सींक। ಸಲಾಕಿ, ಸರಳು, ಕಡ್ಡಿ.

**सराना**– सक्रि पूरा करना। ಪೂರ್ಣ ಮಾಡು, ಮುಗಿಸು.

**सराप**– पु. शाप। ಶಾಪ.

**सरापना**– सक्रि. शाप देना। ಶಾಪ ಕೊಡು.

**सरापा**– क्रिवि. सिर से पैर तक, आदि से अंत तक। ಪೂರ್ತಿಯಾಗಿ, ನಖಶಿಖಾಂತವಾಗಿ, ಮೊದಲಿನಿಂದ ಕೊನೆಯ ವರೆಗೆ.

**सराफ़**– पु. सोने चाँदी का व्यापारी। ಬೆಳ್ಳಿ ಬಂಗಾರದ ವ್ಯಾಪಾರಸ್ಥ.

**सराफ़ा**– पु. सराफ़ी का बाजार, सराफ़ी का काम। ಬೆಳ್ಳಿ ಬಂಗಾರದ ವ್ಯಾಪಾರಸ್ಥರ ಪೇಟೆ, ಬೆಳ್ಳಿ ಬಂಗಾರದ ಕೆಲಸ, ಚಿನ್ನ ಬೆಳ್ಳಿಯ ವ್ಯಾಪಾರ.

**सराफ़ी**– स्त्री. सोने चाँदी का व्यापार, रुपये पैसे का लेनदेन। ಬೆಳ್ಳಿ ಬಂಗಾರದ ವ್ಯಾಪಾರ, ಹಣದ ಕೊಡ-ಕೊಳ್ಳುವ ವ್ಯವಹಾರ

**सराब**– स्त्री दे 'शराब'।

**सराबोर**– वि दे. 'शराबोर'।

**सराय**– स्त्री. धर्मशाला, घर। ಧರ್ಮಶಾಲೆ, ಯಾತ್ರಿಕರು ನಿಲ್ಲುವ ಸ್ಥಳ, ಮನೆ, ಛತ್ರ.

**सराव**– पु. मद्यपात्र। ಮದ್ಯಪಾತ್ರೆ.

**सरावग, सरावगी**– पु. जैन। ಜೈನ, ಶ್ರಾವಕ.

**सरावन**– पु हेंगा। ಕುಂಟೆ.

**सरासर**– अव्य एक सिरे से दूसरे सिरे तक, विलकुल, प्रत्यक्ष। ಒಂದು ತುದಿಯಿಂದ ಮತ್ತೊಂದು ತುದಿಯ ವರೆಗೆ, ತೀರ, ಪೂರಾ, ಪ್ರತ್ಯಕ್ಷವಾಗಿ.

**सरासरी**– स्त्री. जल्दी, आसानी, स्थूल, अंदाज। ಅವಸರ,ಗಡಿಬಿಡಿ,ಶೀಘ್ರ, ಸರಾಗ, ಸುಗಮತನ, ಸುಲಭ, ಸ್ಥೂಲವಾದ, ಅಂದಾಜು, ಅನುಮಾನ, ಸುಮಾರು. क्रिवि मोटे तौरपर, जल्दी में। ಸಾಧಾರಣವಾಗಿ ಅನುಮಾನದಿಂದ, ಅವಸರದಿಂದ, ಸುಮಾರಾಗಿ, ಅಂದಾಜಿನಿಂದ.

**सराह**– स्त्री. प्रशंसा। ಹೊಗಳಿಕೆ, ಪ್ರಶಂಸೆ, ಸ್ತುತಿ, ಶ್ಲಾಘನೆ

**सराहना**– सक्रि. प्रशंसा करना। ಹೊಗಳು, ಪ್ರಶಂಸಿಸು, ವರ್ಣಿಸು. स्त्री. तारीफ। ಪ್ರಶಂಸೆ, ಹೊಗಳಿಕೆ,

ಸ್ತುತಿ.

**सराहनीय**– वि प्रशंसनीय । ಸ್ತುತ್ಯ, ಪ್ರಶಂಸನೀಯ, ಕೊಂಡಾಡತಕ್ಕ

**सरि**–स्त्री समता, नदी, माला । ಸಮಾನತೆ, ನದಿ, ಮಾಲೆ. अव्य तक । ವರೆಗೆ.

**सरित, सरिता**– स्त्री नदी । ನದಿ.

**सरियाना**– सक्रि बिखरी हुयी वस्तुओं को ढंग से समेटना, इकट्ठा करना, मारना । ಹವಣಿಸು, ಅತ್ತಿತ್ತ ಬಿದ್ದ ವಸ್ತುಗಳನ್ನು ಕೂಡಿಸಿ ಸರಿಯಾಗಿಡು, ಕೂಡಿಸು, ಹೊಡೆ.

**सरिल**– पु जल । ನೀರು.

**सरिश्त**– स्त्री प्रकृति, स्वभाव, गुण । ಪ್ರಕೃತಿ, ಸ್ವಭಾವ, ಗುಣ. वि. मिश्रित । ಕೂಡಿದ, ಮಿಶ್ರಿತ.

**सरिश्ता**– पु रस्सी, अदालत, दफ्तर, नौकरचाकर, संबंध, मेलजोल । ಹಗ್ಗ, ಹುರಿ, ನ್ಯಾಯಾಲಯ, ಕಚೇರಿ, ಕಾರ್ಯಾಲಯ ವಿಭಾಗ, ಇಲಾಖೆ, ನೌಕರರು, ಸಂಬಂಧ, ಸಲಿಗೆ,ಹೊಂದಿಕೆ,ಬಳಕೆ,ಬಾಂಧವ್ಯ.

**सरिश्तेदार**–पु एक कर्मचारी । ಶಿರಸ್ತೇದಾರ.

**सरिस**– वि सदृश । ಸಮಾನವಾದ, ಹೋಲುವ.

**सरी**– स्त्री नदी । ನದಿ.

**सरीकता**– स्त्री साझा । ಪಾಲುಗಾರಿಕೆ.

**सरीखा**–वि समान, सदृश । ಸಮಾನ, ಸದೃಶ, ಹೋಲುವ.

**सरीफा**– पु. दे 'शरीफा'।

**सरीहन्**– क्रिवि प्रकट रूपसे, स्पष्ट रूपसे । ಪ್ರಕಟವಾಗಿ, ಸ್ಪಷ್ಟವಾಗಿ

**सरुज**– वि रोगी । ಅಸ್ವಸ್ಥ,ಜಡ್ಡಾದ, ರೋಗಿ.

**सरुहना**– अक्रि अच्छा होना । ಆರೋಗ್ಯವಂತನಾಗು, ಜಡ್ಡಿನಿಂದ ಏಳು

**सरुहाना**–सक्रि अच्छा करना । ಆರೋಗ್ಯವಂತನಾಗಿಸು.

**सरुप**– वि रूपवान । ಸುಂದರ.

**सरूर**– पु खुशी, नशा । ಆನಂದ, ಪ್ರಸನ್ನತೆ, ಅಮಲು.

**सरे आम**– क्रिवि खुल्लमखुल्ला । ಪ್ರಕಟವಾಗಿ, ಬಹಿರಂಗವಾಗಿ.

**सरेख, सरेखा**– वि सयाना, चालाक । ವಯಸ್ಕ, ಬುದ್ಧಿವಂತ, ಧೂರ್ತ.

**सरेखना**– सक्रि दे. 'सहेजना'।

**सरेदस्त**– क्रिवि फिलहाल । ಸದ್ಯಕ್ಕೆ, ಈಗ, ಈ ಕ್ಷಣ.

**सरेबाज़ार**– क्रिवि सब के सामने । ಪ್ರಕಟವಾಗಿ, ಬಹಿರಂಗವಾಗಿ.

**सरोंट**– स्त्री. सिकुडना । ನಿರಿಗೆ,ಸುಕ್ಕು.

**सरोकार**–पु.संबंध,प्रयोजन । ಸಂಬಂಧ, ಪ್ರಯೋಜನ, ಉಪಯೋಗ.

**सरोज**– पु कमल । ಕಮಲ.

**सरोजना**– सक्रि. प्राप्त करना । ದೊರಕಿಸು, ಹೊಂದು, ಪಡೆ.

**सरोता**– पु श्रोता । ಕೇಳುವವ. दे 'सरौता'।

**सरोद**– पु एक बाजा । ಒಂದು ವಾದ್ಯ.

सरोरुह– पु. कमल । ಕಮಲ.
सरोसामान– पु. सामग्री । ಉಪಕರಣ ಸಾಮಗ್ರಿಗಳು, ಸಾಮಾನು.
सरौता– पु सुपारी कतरने की कैंची । ಅಡಕೊತ್ತು, ಅಡಿಕೆ ಹೆಚ್ಚುವ ಕತ್ತರಿ.
सरौती– स्त्री. दे ' सरौता ' ।
सर्कार– पु दे. ' सरकार ' ।
सर्कारी– वि. दे ' सरकारी ' ।
सर्ग–पु. अध्याय, सृष्टि, स्वर्ग । ಅಧ್ಯಾಯ, ಪರಿಚ್ಛೇದ, ಸೃಷ್ಟಿ, ಉತ್ಪತ್ತಿ, ಸ್ವರ್ಗ.
सर्द– वि ठंडा, सुस्त, धीमा । ತಣ್ಣಗಾದ, ತಂಪನ್ನು, ಶೀತಲ, ಉತ್ಸಾಹವಿಲ್ಲದ, ಆಲಸಿ, ಮಂದ, ಮೆತ್ತಗಾದ.
सर्दमिज़ाज– वि उत्साहहीन, कठोर हृदय । ಉತ್ಸಾಹಹೀನ, ಕಠೋರ, ನಿರ್ದಯಿ
सर्दी– स्त्री. ठंडक, जुकाम । ಶೈತ್ಯ, ತಂಪು, ಥಂಡಿ. ನೆಗಡಿ
सर्प– पु साँप । ಸರ್ಪ, ಹಾವು.
सर्फ़– वि खर्च किया हुआ । ಖರ್ಚು ಮಾಡಿದ, ವ್ಯಯಮಾಡಿದ. पु व्यय । ವ್ಯಯ, ಖರ್ಚು, ವೆಚ್ಚ.
सर्फ़ा– पु. व्यय । ವ್ಯಯ, ಖರ್ಚು, ವೆಚ್ಚ.
सर्बस– पु सर्वस्व । ಸರ್ವಸ್ವ.
सर्राफ़, सर्राफ़ा– पु. दे ' सराफ ', ' सराफा ' ।
सर्राफ़ी– स्त्री. दे ' सराफी ' ।
सर्व– वि सब । ಎಲ್ಲ, ಸಕಲ
सर्वत:– क्रिवि. सब ओर, सब प्रकारसे। ಎಲ್ಲ ಕಡೆಗೆ, ಎಲ್ಲ ರೀತಿಯಿಂದ. ಪೂರ್ಣವಾಗಿ.
सर्वत्र– अव्य. सब जगह । ಎಲ್ಲಕಡೆಗೆ, ಎಲ್ಲೆಲ್ಲೂ.
सर्वथा– क्रिवि सब प्रकार से, पूर्णत: । ಎಲ್ಲ ರೀತಿಯಿಂದ, ಪೂರ್ಣವಾಗಿ, ತೀರ.
सर्वदा–क्रिवि. हमेशा। ಯಾವಾಗಲೂ, ಸದಾ.
सर्वनाश– पु. विध्वंस । ವಿಧ್ವಂಸ, ಸರ್ವನಾಶ, ಹಾಳು.
सर्वमंगला– स्त्री. पार्वती, दुर्गा, लक्ष्मी । ಪಾರ್ವತಿ, ದುರ್ಗಾ, ಲಕ್ಷ್ಮಿ.
सर्वश्रेष्ठ–वि सब से अच्छा। ಎಲ್ಲಕ್ಕಿಂತ ಶ್ರೇಷ್ಠ.
सर्वस– पु. दे. ' सर्वस ' ।
सर्वसाधारण– पु. जनता । ಸಾಮಾನ್ಯ ಜನತೆ, ಜನಸಾಮಾನ್ಯರು. वि. सामान्य । ಸಾಮಾನ್ಯ, ಸಾಧಾರಣ.
सर्वांगीन– वि सर्वांग व्यापक । ಎಲ್ಲ ಅಂಗಗಳಲ್ಲಿ ವ್ಯಾಪಕವಾದ, ಎಲ್ಲ ಅಂಗಗಳನ್ನೂ ಒಳಗೊಂಡ.
सर्वाधिकार–पु. पूर्ण अधिकार । ಪೂರ್ಣ ಅಧಿಕಾರ
सर्वेश, सर्वेश्वर– पु. सब का मालिक, ईश्वर । ಎಲ್ಲರ ಒಡೆಯ. ದೇವರು.
सलग– वि संपूर्ण । ಪೂರ್ಣ, ಎಲ್ಲ.
सलगम– पु दे. ' शलजम ' ।

सलतनत–स्त्री राज्य, सुभीता। ರಾಜ್ಯ, ಶಾಸನ, ಆಳಿಕೆ, ಸೌಕರ್ಯ.

सलना–अक्रि गड़ना, छिदना। ಚುಚ್ಚು, ಒಳಸೇರಿಸು, ಛೇದಿಸು, ಗಾಯವಾಗು, ಹೊಗು, ತೂತು ಬೀಳು.

सलब– वि बरबाद। ನಷ್ಟ, ನಾಶವಾದ.

सलमा– पु सोने या चाँदी के तार। ಬೆಳ್ಳಿ, ಅಥವಾ ಬಂಗಾರದ ತಾರು, ಸರಿಗೆ, ಜರತಾರಿ.

सलवात– स्त्री शुभ कामनायें, सलाम, दुर्वचन। ಶುಭೇಚ್ಛೆ, ಶುಭವನ್ನು ಬಯುಸುವದು, ನಮಸ್ಕಾರ, ದುರ್ವಚನ, ಬೈಗಳು

सलसलाना–सक्रि. खुजलाना। ತುರಿಸು, ಚಕ್ಕುಲಗುಳಿಮಾಡು अक्रि रेंगना, खुजली होना। ಸರಿದಾಡು, ದೇಕು, ಹರಿದಾಡು, ನವೆಯಾಗು, ತುರಿ, ನಸನಸೆಯಾಗು

सलहज– स्त्री दे. 'सरहज'।

सलाई– स्त्री शलाका, पतली छड़। ಸಲಾಕಿ, ಸೂಜಿ, ಕಡ್ಡಿ, ದೀಪದ ಕಡ್ಡಿ, ಬೆಂಕಿಕಡ್ಡಿ.

सलाक– स्त्री शलाका, सलाई, वाण। ಸಲಾಕಿ, ಕಡ್ಡಿ, ಬಾಣ.

सलाजीत– स्त्री शिलाजीत। ಶಿಲಾಜಿತು, ಶಿಲಾರಸ.

सलाबत–स्त्री दृढ़ता। ದೃಢತೆ, ಧಾರ್ಢ್ಯ.

सलाम– पु. प्रणाम। ಪ್ರಣಾಮ, ನಮಸ್ಕಾರ.

सलामत– वि. सकुशल, स्वस्थ। ಸಕುಶಲ, ಕ್ಷೇಮ, ಭದ್ರ, ಸುರಕ್ಷಿತ, ಸ್ವಸ್ಥ, ನಿರೋಗಿ. क्रिवि खैरियत से, कुशलपूर्वक। ಕ್ಷೇಮವಾಗಿ, ಕುಶಲಪೂರ್ವಕ, ಸಕುಶಲ.

सलामती– स्त्री आरोग्य, खैरियत। ಆರೋಗ್ಯ, ಕ್ಷೇಮ, ಕುಶಲ.

सलामी– स्त्री. प्रणाम करने की क्रिया, तोप या बंदूकों का किसी माननीय व्यक्ति के आदरार्थ दागना। ಸಲಾಮು ಮಾಡುವದು, ಪ್ರಣಾಮ ಮಾಡುವ ರೀತಿ, ಮಾನ್ಯ ವ್ಯಕ್ತಿಯ ಆದರಾರ್ಥವಾಗಿ ತೋಪು ಅಥವಾ ಬಂದೂಕು ಹಾರಿಸುವದು.

सलाह– स्त्री राय, सम्मति, परामर्श, सुलह। ಅಭಿಪ್ರಾಯ, ಸಲಹೆ, ಸಮ್ಮತಿ, ವಿಚಾರ, ಆಲೋಚನೆ, ಒಪ್ಪಂದ.

सलाहकार, सलाही– पु. सलाह देनेवाला। ಸಲಹೆಗಾರ, ಉಪದೇಶಕ, ಮಂತ್ರಾಲೋಚಕ.

सलिल– पु. पानी। ನೀರು.

सलीक़ा–पु काम करने का अच्छा ढंग, तमीज, हुनर, लियाक़त, योग्यता, बरताव, सभ्यता। ಹಸ್ತ ಕೌಶಲ್ಯ, ದಕ್ಷತೆ, ನಡೆನಳಿ, ಶಿಷ್ಟತೆ, ಕಲೆ, ಯೋಗ್ಯತೆ, ಅಳವು, ಆಚರಣೆ, ಸಭ್ಯತೆ.

सलीक़ामंद– वि शिष्ट, हुनरमंद, तमीजदार। ಶಿಷ್ಟ, ಸಭ್ಯ, ಕಲಾ–

ಕುಶಲ, ತಿಳಿವಳಿಕೆಯುಳ್ಳ, ಸುಸಂಸ್ಕೃತ.

सलीम– वि ठीक, साफ दिलका, स्वस्थ, गंभीर, सहनशील । ಸರಿಯಾದ, ಸ್ವಚ್ಛ ಹೃದಯದ, ಸ್ವಸ್ಥ, ನಿರೋಗಿ, ಗಂಭೀರ, ಸಹನಶೀಲ.

सलीस–वि सरल, मुहावरेदार। ಸರಲ, ಸುಲಭ, ಅಲಂಕಾರಿತ.

सलूक– पु. व्यवहार, आचरण, मेल, भलाई । ವ್ಯವಹಾರ, ಆಚರಣೆ, ನಡತೆ, ವರ್ತನೆ, ಹೊಂದಿಕೆ, ಘನಿಷ್ಠತೆ, ಉಪಕಾರ, ಕಲ್ಯಾಣ, ಹಿತ.

सलूना– वि नमकीन, लावण्यमय । ಉಪ್ಪುಳ್ಳ, ಉಪ್ಪಿನ, ಸುಂದರ, ಕಾಂತಿಯುಕ್ತ.

सलैला– वि फिसलनेवाला। ಜಾರುವ.

सलोतर, सलोतरी– पु. घोडों की चिकित्सा करनेवाला । ಅಶ್ವವೈದ್ಯ, ಪಶುವೈದ್ಯ.

सलोन,सलोना,सलौना–वि दे 'सलूना'।

सलोनो– पु. रक्षाबंधन, श्रावणी । ರಕ್ಷಾಬಂಧನ, ಶ್ರಾವಣಿ

सल्तनत– स्त्री दे. 'सलतनत'।

सल्लाह– स्त्री दे. 'सलाह'।

सल्लू– पु चमडे की डोरी। ಜೋಡಿನ ಬಾರು.

सवगात– स्त्री. दे 'सौगात'।

सवत, सवति– स्त्री. सौत । ಸವತಿ, ಸಪತ್ನಿ.

सवया– स्त्री सखी। ಗೆಳತಿ, ಸಖಿ.

सवर्ण– वि. सजातीय, समान । ಸಜಾತೀಯ, ಒಂದೇಜಾತಿಯ, ಸಮಾನ.

सवा– वि चौथाई सहित । ಕಾಲು ಸಹಿತವಾಗಿ. पु एक और चौथाई। ಒಂದೂಕಾಲು.

सवाई– वि सवा, बढकर । ಕಾಲು ಸಹಿತವಾಗಿ, ಹೆಚ್ಚಾಗಿ. स्त्री. चतुर्थांश व्याजपर ऋण देने का व्यवहार। ಚತುರ್ಥಾಂಶ ಬಡ್ಡಿಯಿಂದ ಸಾಲ ಕೊಡುವ ವ್ಯವಹಾರ.

सवाद– पु स्वाद । ಸ್ವಾದ, ರುಚಿ.

सवादिक– वि सुस्वादु । ಸುಸ್ವಾದ, ರುಚಿಕರ.

सवाब– पु. सत्यता, पुण्य, भलाई। ಸತ್ಯತೆ, ಪುಣ್ಯ, ಒಳ್ಳೆಯತನ, ಕಲ್ಯಾಣ. वि ठीक। ಸರಿಯಾದ.

सवाया– वि. एक और चौथाई । ಒಂದೂಕಾಲು.

सवार– पु. अश्वारोही, वह जो किसी चीज़पर चढा हो । ಅಶ್ವಾರೋಹಿ, ಕುದುರೆಯಮೇಲೆ ಕೂತು ಯುದ್ಧ ಮಾಡುವ ಸೈನಿಕ, ವಾಹನದಮೇಲೆ ಕೂತವ. वि. सवारीपर चढा हुआ। ವಾಹನದಮೇಲೆ ಕೂತ, ಆರೂಢ. क्रिवि. सवेरे, शीघ्र । ಬೆಳಗು ಮುಂಜಾನೆ, ಶೀಘ್ರವಾಗಿ.

सवारना– सक्रि दे 'सँवारना'।

सवारा– पु. तडका । ಮುಂಜಾವು, ಪ್ರಾತಃಕಾಲ, ನಸುಕು

सवारी– स्त्री वाहन, सवार होने की

क्रिया। ವಾಹನ, ಹತ್ತುವಿಕೆ, ಆರೋಹ.

**सवाल**– पु. प्रश्न, निवेदन। ಪ್ರಶ್ನೆ, ಕೇಳಿಕೆ,ಅರ್ಜಿ,ನಿವೇದನೆ, ಪ್ರಾರ್ಥನೆ.

**सवालजवाब**– पु वादविवाद, तकरार। ವಾದವಿವಾದ,ಚರ್ಚೆ, ಪ್ರಶ್ನೋತ್ತರ, ತಕರಾರು, ವಾಗ್ವಾದ, ತಂಟೆ

**सवालात**– पु. 'सवाल' का बहुवचन। ಪ್ರಶ್ನೆಗಳು.

**सवेरा**-- पु. प्रात काल। ಮುಂಜಾವು, ಪ್ರಾತಃಕಾಲ.

**सवैया**–पु एक छंद, सवा सेर की तौल। ಒಂದು ವೃತ್ತ, ಒಂದೂ ಕಾಲು ಸೇರಿನ ತೂಕ.

**सव्यसाची**– पु अर्जुन। ಅರ್ಜುನ.

**सशंकना**– अक्रि सशंक होना। ಸಂಶಯ ಹುಟ್ಟು, ಸಂದೇಹ ಪಡು, ಅಂಜು.

**सस, ससि**– पु. शशि। ಚಂದ್ರ, ಶಶಿ.

**ससक, ससा**– पु खरगोश। ಮೊಲ.

**ससरना**– अक्रि. सरकना। ಸರಿದು ಹೋಗು, ಜಾರಿಕೊಳ್ಳು.

**ससाना**– अक्रि काँपना। ನಡುಗು, ಅಂಜು.

**ससुर**– पु पत्नी या पति का पिता। ಮಾವ, ಹೆಂಡತಿ ಅಥವಾ ಗಂಡನ ತಂದೆ

**ससुरा**– पु. दे. 'ससुर'। स्त्री. ससुराल। ಮಾವನ ಮನೆ. पु. एक तरह की गाली। ಒಂದು ಬೈಗಳು.

**ससुरार, ससुरारि, ससुराल**– स्त्री ससुर का घर। ಮಾವನ ಮನೆ.

**सस्ता**– वि. थोडे दाम का, मंद। ಅಗ್ಗ, ಕಡಿಮೆ ಬೆಲೆಯ, ಮಂದ, ಬೆಲೆ ಇಳಿದ.

**—सस्ते छूटना** = किसी काम का कम परिश्रम या व्यय में पूरा होना। ಸುಲಭವಾಗಿ ಅಥವಾ ಕಡಿಮೆ ಖರ್ಚಿನಲ್ಲಿ ಕೆಲಸ ಸಾಧಿಸು.

**सस्ताना**– अक्रि किसी वस्तु का दाम कम होना। ಬೆಲೆ ಇಳಿ,ಬೆಲೆ ಕಡಿಮೆಯಾಗು, ಅಗ್ಗವಾಗು. सक्रि. कम दामपर बेचना। ಬೆಲೆ ಇಳಿಸು, ಕಡಿಮೆ ಬೆಲೆಗೆ ಮಾರು, ಅಗ್ಗವಾಗಿ ವಿಕ್ರಯಿಸು.

**सस्ती**– स्त्री. सस्तापन। ಬೆಲೆ ಇಳಿಯುವಿಕೆ, ಅಗ್ಗ.

**सस्नेह**– वि. स्नेहयुक्त। ಸಸ್ನೇಹ, ಪ್ರೀತಿಯುಳ್ಳ.

**सह**– अव्य सहित। ಸಹಿತ, ಸಂಗಡ, ಉಳ್ಳ, ಯುಕ್ತ, ಕೂಡ. वि समर्थ, योग्य। ಯೋಗ್ಯ, ಸಮರ್ಥ.

**सहकार**– पु सहायक, सहयोग, आम्रवृक्ष। ಸಹಾಯಕ, ಸಹಯೋಗ, ಸಹಾಯ, ಮಾವಿನ ಮರ.

**सहकारी**– पु सहायक, साथी। ಸಹಾಯಕ, ಸಹಕರಿಸುವವ.

**सहगमन**–पु सती होना, साथ जाना। ಗಂಡನ ಚಿತೆಯಲ್ಲಿ ಹಾರಿ ಸಾಯುವದು, ಸತಿಹೋಗುವಿಕೆ, ಸಂಗಡ

ಹೋಗುವಿಕೆ.

**सहगामी**– पु साथी । ಸಂಗಡಿಗ, ಸಹಾಯಕ, ಜೊತೆಗಾರ

**सहचर**–पु सेवक, मित्र। ಸಂಗಡ ಇರುವವ, ಸೇವಕ, ಆಳು, ಮಿತ್ರ.

**सहचरी, सहचारिणी**– स्त्री. साथ रहनेवाली, सखी, पत्नी । ಸಂಗಡ ಇರುವವಳು, ಗೆಳತಿ, ಹೆಂಡತಿ.

**सहचारी**– पु. दे. 'सहचर'।

**सहज**–वि स्वाभाविक, सरल, जो साथ पैदा हो। ಸ್ವಾಭಾವಿಕ, ಪ್ರಾಕೃತಿಕ, ಸರಲ, ಸುಲಭ, ಸಹೋದರ.

**सहजानि**– स्त्री. पत्नी । ಪತ್ನಿ, ಹೆಂಡತಿ

**सहजें**– क्रिवि सहजही, अनायास । ಸಹಜವಾಗಿ, ಅನಾಯಾಸವಾಗಿ

**सहताना**–अक्रि सुस्ताना। ವಿಶ್ರಮಿಸು, ವಿಶ್ರಾಂತಿ ತೆಗೆದುಕೊಳ್ಳು

**सहदानी**–स्त्री निशानी। ಸಂಜ್ಞೆ, ಚಿಹ್ನೆ

**सहदूल**–पु. शार्दूल, व्याघ्र। ಶಾರ್ದೂಲ, ವ್ಯಾಘ್ರ.

**सहधर्मिणी**–स्त्री. पत्नी । ಹೆಂಡತಿ, ಪತ್ನಿ.

**सहन**–पु सहिष्णुता, क्षमा। ಸಹಿಷ್ಣುತೆ, ತಾಳ್ಮೆ, ಸೈರಣೆ, ಕ್ಷಮೆ

**सहन**–पु आँगन, एक प्रकार का बढ़िया रेशमी कपड़ा । ಅಂಗಳ, ಚೌಕಿ, ಮನೆಯ ಮುಂದಿನ ಅಥವಾ ನಡುವಿನ ಬೈಲು, ಒಂದು ತರದ ರೇಷ್ಮೆ ಬಟ್ಟೆ.

**सहनशील**–वि सहनेवाला। ಸಹಿಸುವವ, ತಾಳ್ಮೆಯುಳ್ಳವ, ಸೈರಣೆಯುಳ್ಳವ, ಸಹಿಷ್ಣು.

**सहना**–सक्रि भोगना, झेलना। ಸಹಿಸು, ಸೈರಿಸು, ತಾಳು ಭೋಗಿಸು, ಫಲ ಅನುಭವಿಸು.

**सहनाई**– स्त्री दे. 'शहनाई'।

**सहपाठी**– पु साथ पढ़नेवाला। ಸಂಗಡ ಓದುವವ, ಕೂಡಿ ಕಲಿಯುವವ, ಒಡನೋದಿ.

**सहभोज, सहभोजन**– पु एक साथ खाना। ಕೂಡಿ ಊಟಮಾಡುವಿಕೆ, ಸಹಭೋಜನ

**सहम**– पु. डर, संकोच । ಅಂಜಿಕೆ, ಸಂಕೋಚ, ಹೆದರಿಕೆ, ಭಯ.

**सहमत**– वि. जिस का मत दूसरे से मिलता हो । ಒಮ್ಮತದ, ಒಂದೇ ಅಭಿಪ್ರಾಯದ, ಒಪ್ಪಿಗೆಯುಳ್ಳ

**सहमना**– अक्रि डरना । ಅಂಜು, ಹೆದರು, ಭಯಪಡು.

**सहमाना**– सक्रि. डराना। ಅಂಜಿಸು, ಹೆದರಿಸು, ಬೆದರಿಸು

**सहमृता**– स्त्री साथमें मरनेवाली । ಸಂಗಡ ಸಾಯುವವಳು, ಸತಿಯಾಗುವವಳು

**सहयोग**– पु सहायता । ಸಹಾಯ, ಸಹಯೋಗ, ಸಹಕಾರ

**सहर**– पु. प्रात:काल, तड़का, टोना । ಪ್ರಾತಃಕಾಲ, ಮುಂಜಾವು, ಜಾದು, ತಂತ್ರ.

**सहरा**– पु खाली मैदान, जंगल । ಬೈಲು, ಮೈದಾನ, ಅರಣ್ಯ, ಕಾಡು.

**सहराई**– वि जंगली । ಕಾಡು, ವನ್ಯ

**सहराना**– सक्रि. दे 'सहलाना'।

**सहल**– वि. सरल, आसान । ಸರಲ, ಸುಲಭ.

**सहलाना**– सक्रि किसी वस्तुपर धीरे धीरे हाथ फेरना । ಸಾವಕಾಶವಾಗಿ ಕೈಯಾಡಿಸು, ಮೃದಡವು,ಮೃದುವಾಗಿ ಮೈ ತಿಕ್ಕು. अक्रि सिहरना। ನಡುಗು, ಕಂಪಿಸು, ಚಕ್ಕುಲಗುಲಿಯಾಗು.

**सहवासी** पु एक साथ रहनेवाला । ಜೊತೆಯಲ್ಲಿ ವಾಸಿಸುವವ, ಸಹವಾಸಿ.

**सहव्रता**– स्त्री पत्नी । ಹೆಂಡತಿ, ಪತ್ನಿ.

**सहस**– पु. सहस्र । ಸಹಸ್ರ, ಸಾವಿರ.

**सहसा**–क्रिवि अचानक । ಒಮ್ಮಿಂದೊಮ್ಮೆ, ಅಕಸ್ಮಾತ್ತಾಗಿ, ಫಕ್ಕನೆ, ತಟಕ್ಕನೆ, ಕೂಡಲೆ.

**सहसानन**– पु शेषनाग । ಶೇಷನಾಗ.

**सहस्र**– वि. हजार । ಸಾವಿರ

**सहस्ररश्मि**– पु. सूर्य । ಸೂರ್ಯ.

**सहाइ, सहाई**– स्त्री सहायता। ಸಹಾಯ. पु सहायक । ಸಹಾಯಕ

**सहाध्यायी**– पु दे 'सहपाठी'।

**सहानुभूति**– स्त्री हमदर्दी । ಸಹಾನುಭೂತಿ.

**सहायता**– स्त्री मदद । ಸಹಾಯ.

**सहार**– पु. सहनशीलता । ಸೈರಣೆ, ತಾಳ್ಮೆ, ಸಹನಶೀಲತೆ.

**सहारना**– सक्रि. सहना । ಸಹಿಸು, ಸೈರಿಸು, ತಾಳು, ಅನುಭವಿಸು.

**सहारा**– पु आश्रय, सहायता । ಆಶ್ರಯ, ಆಧಾರ, ಸಹಾಯ, ನೆರವು, ಆಸರೆ, ಬೆಂಬಲ, ಒತ್ತಾಸೆ.

**सहालग**– पु. लगन, विवाह के दिन । ಲಗ್ನಗಳು ಆಗುವ ದಿನ, ಲಗ್ನದ ಮುಹೂರ್ತಗಳಿರುವ ಕಾಲ, ವಿವಾಹ ಕಾಲ

**सहावल**– पु राजगीरो का दीवार की सिधाई नापने का लट्टूनुमा। ಲಂಬ ಸೂತ್ರ,ಗೋಡೆಯ ಸರಳತೆಯನ್ನು ನೋಡಲು ಉಪಯೋಗಿಸುವ ಉಪ್ಪಾರರ ಉಪಕರಣ.

**सहिजन**– पु. एक वृक्ष तथा उसकी फलियाँ। ನುಗ್ಗೆ ಗಿಡ,ನುಗ್ಗೆ ಕಾಯಿ.

**सहिदान**–पु **सहिदानी**– स्त्री. पहिचान की वस्तु, निशानी। ಗುರುತು,ಚಿಹ್ನೆ, ಗುರುತಿನ ವಸ್ತು.

**सहिष्णु**– वि. सहनशील। ಸಹನಶೀಲ, ತಾಳ್ಮೆಯುಳ್ಳವ.

**सहिष्णुता**– स्त्री सहनशीलता। ಸಹನಶೀಲತೆ.

**सही**– स्त्री हस्ताक्षर । ಸಹಿ, ರುಜು. वि ठीक, सच । ನಿಜವಾದ, ಸರಿಯಾದ, ಶುದ್ಧ, ಸತ್ಯವಾದ. क्रिवि निश्चय, अवश्य ही। ನಿಶ್ಚಯವಾಗಿ, ಅವಶ್ಯವಾಗಿ.

**सहीसलामत**– वि. स्वस्थ, तन्दुरस्त, जिसमें कोई न्यूनता न आयी हो । ಸ್ವಸ್ಥ, ಸೌಖ್ಯವಾದ, ಕ್ಷೇಮ,

ನಿರ್ದೋಷ, ನ್ಯೂನತೆಯಿಲ್ಲದ.

सहुं–क्रिवि सामने। ಎದುರಿಗೆ,ಮುಂದೆ.

सहूलियत– स्त्री. सुगमता, अदब । ಸೌಲಭ್ಯ, ಸೌಕರ್ಯ, ಸವಲತ್ತು, ಮರ್ಯಾದೆ.

सहृदय– वि. रसिक, दयालु । ರಸಿಕ, ದಯಾಳು, ಸಹಾನುಭೂತಿ ಯುಳ್ಳವ.

सहेजना–सक्रि समझाकर सुपुर्द करना, संभालना, देखभालकर रखना। ತಿಳಿಸಿ ಹೇಳಿ ಒಪ್ಪಿಸು,ನಿರ್ವಹಿಸು,ಚೆನ್ನಾಗಿ ಪರೀಕ್ಷಿಸಿ ಇಡು, ಸರಿಪಡಿಸು.

सहेजवाना– सक्रि सहेजने का कार्य दूसरे से कराना। ಎರಡನೆಯವರಿಂದ ಚೆನ್ನಾಗಿ ಪರೀಕ್ಷೆ ಮಾಡಿಸು,ಸಂರಕ್ಷಣೆ ಮಾಡಿಸು,ಪರೀಕ್ಷೆ ಮಾಡಿಸು, ಸರಿಪಡಿಸು.

सहेट, सहेत–पु मिलन-स्थान। ಮಿಲನ ಸ್ಥಳ, ಕೂಡುವ ಸ್ಥಳ, ಸಂಕೇತ ಸ್ಥಾನ.

सहेतुक– वि हेतुयुक्त । ಉದ್ದೇಶ ಪೂರ್ವಕ.

सहेली– स्त्री. सखी । ಗೆಳತಿ, ಸಖಿ, ಜತೆಗಾರ್ತಿ

सहैया– वि. सहनेवाला । ಸಹಿಸುವವ. पु. सहायक। ಸಹಾಯಕ.

सहोदर– पु सगा भाई। ಸಹೋದರ, ಅಣ್ಣ ಅಥವಾ ತಮ್ಮ

सह्य– वि. सहने योग्य । ಸಹಿಸತಕ್ಕ, ಸಹಿಸಲು ಯೋಗ್ಯವಾದ पु एक पहाड़। ಸಹ್ಯ ಪರ್ವತ.

साँई– पु स्वामी, पति, ईश्वर, फकीरो की एक उपाधि। ಸ್ವಾಮಿ,ಒಡೆಯ, ಪತಿ, ಮುಸಲ್ಮಾನ ಫಕೀರರ ಒಂದು ಪದವಿ, ಸನ್ಯಾಸಿ.

साँकडा–पु पैर का एक गहना। ಕಾಲಿನ ಒಂದು ಆಭರಣ, ಕಾಲು ಸರಪಳಿ.

साँकर, साँकरी– स्त्री. जंजीर, सिकड़ी, कष्ट, दु:ख। ಸರಪಳಿ, ಕಾಲು ಸರಪಳಿ, ಚಿಲಕ, ಕಷ್ಟ, ದುಃಖ. वि तंग। ಇಕ್ಕಟ್ಟಾದ, ಸಂಕೀರ್ಣ.

साँकल– स्त्री जंजीर, बेड़ी । ಸರಪಳಿ, ಬೇಡಿ, ಸಂಕೋಲೆ.

सांगोपांग– क्रिवि. पूर्णरूपसे । ಪೂರ್ಣವಾಗಿ.

साच–वि सच। ನಿಜವಾದ,ಸತ್ಯವಾದ. पु. सत्य। ನಿಜ, ಸತ್ಯ,ವಾಸ್ತವಿಕತೆ.

साँचला– वि. सत्यवादी। ಸತ್ಯವಾದಿ, ಸತ್ಯಸಂಧ.

साँचा– पु. वह उपकरण जिसमे कोई तरल या गीला पदार्थ रखकर कोई विशेष प्रकार की कोई वस्तु बनाई जाती है, बेलबूटा छापने का ठप्पा, छापा। ಪಡಿಯಚ್ಚು, ಅಚ್ಚುಹಾಕುವ ಉಪಕರಣ,ನಮೂನೆ,ಮಾದರಿ. साँचे में ढला हुआ = अति सुदर । ಅತ್ಯಂತ ಸುಂದರ

साँचिया–पु साचा बनानेवाला। ಪಡಿಯಚ್ಚು ಮಾಡುವವ

साँची–पु एक तरह का पान। ಒಂದು

तरद ಎಲೆ.

साँझ–स्त्री. संध्या। ಸಂಜೆ, ಸಾಯಂಕಾಲ.

साँझा– पु दे. 'साझा'।

साँट– स्त्री छड़ी, कोड़ा । ಕೋಲು, ಬಡಿಗೆ, ಚಬಕ, ಬಾರಕೋಲು.

साँटा– पु ईख, कोड़ा। ಕಬ್ಬು, ಬಾರ-ಕೋಲು, ಚಾವಟಿ.

साँटिया– पु. डुग्गी पीटनेवाला । ಡಂಗುರ ಹೊಡೆಯುವವ.

साँटी– स्त्री छड़ी, बदला, प्रतीकार, मेलमिलाप। ಕೋಲು, ಬೆತ್ತ, ನೇಡು, ಪ್ರತೀಕಾರ, ಹೊಂದಿಕೆ, ಸೇರಿಕೆ, ಒಪ್ಪಂದ

साँठ– पु. साँकड़ा, सरकंडा, अन्न पीटने का डंडा, गन्ना, संयोग । ಕಾಲು ಸರಪಳಿ, ಗೊಲಸು, ಗಲಗು, ಲಾಳದ ಕಡ್ಡಿ, ತೆನೆ ಬಡೆಯುವ ಕೋಲು, ಕಬ್ಬಿನ ತುಂಡು, ಸಂಯೋಗ, ಸಂಬಂಧ.

सांठना-- संक्रि. पकड़े रहना । ಹಿಡಿದು ಕೊಳ್ಳು.

सांठगांठ– स्त्री. मेलजोल, गुप्त संबंध । ಸಂಬಂಧ, ಕೂಡಿಕೆ, ಹೊಂದಿಕೆ, ಗಂಟುಬೀಳುವಿಕೆ, ಗುಪ್ತಸಂಬಂಧ.

सांठी– स्त्री पूंजी। ಮೂಲಧನ, ಬಂಡವಾಳ.

सांड–पु दागकर छोड़ा हुआ बैल, मस्त बैल। ಗೂಳಿ, ಮದವೇರಿದ ಎತ್ತು.

सांडनी– स्त्री ऊंटनी। ಹೆಣ್ಣು ಒಂಟೆ.

साँड़िया–पु शीघ्रगामी ऊँट, ऊँटनी का सवार । ವೇಗವಾಗಿ ಹೋಗುವ ಒಂಟೆ, ಒಂಟೆಯಮೇಲೆ ಹತ್ತುವವ, ಒಂಟೆ ಸವಾರ.

सांत्वन– पु. सांत्वना– स्त्री तसल्ली । ಸಾಂತ್ವನೆ, ಸಮಾಧಾನ, ಸಂತೈಸುವಿಕೆ, ಆಶ್ವಾಸನ.

सांधना–सक्रि मिलाना, सानना, निशाना लगाना । ಕೂಡಿಸು, ಜೋಡಿಸು, ಸಾಧಿಸು, ಸಂಧಾನ ಮಾಡು, ನಾದು, ಗುರಿಹಿಡಿ.

साँप– पु सर्प। ಸರ್ಪ, ಹಾವು.

—छछूंदर की दशा = बड़े असमंजस की अवस्था। ಇಕ್ಕಟ್ಟು, ಉಭಯ ಸಂಕಟ.

साँपत्तिक, साँपद– वि आर्थिक । ಆರ್ಥಿಕ, ಹಣಸಂಬಂಧದ.

साँपिन– स्त्री सर्पिणी। ಹೆಣ್ಣು ಸರ್ಪ.

साँप्रत–अव्य अभी, इस समय। ಈಗ, ಸದ್ಯಕ್ಕೆ, ಈ ಸಮಯಕ್ಕೆ.

साँप्रदायिक–वि संप्रदाय का। ಸಂಪ್ರದಾಯ ಸಂಬಂಧದ, ಧಾರ್ಮಿಕ.

सांभर– पु एक नमक, एक प्रकार का हरिन, पाथेय । ಒಂದು ತರದ ಉಪ್ಪು, ಒಂದು ಪ್ರಕಾರದ ಜಿಗರೆ, ಪ್ರವಾಸದ ಖರ್ಚು.

साँवर, साँवरा– वि दे 'साँवला'।

साँवला, सांवलिया–वि. श्याम रंग का। ಶ್ಯಾಮ ವರ್ಣದ. पु. श्रीकृष्ण । ಶ್ರೀಕೃಷ್ಣ.

साँवा– पु एक कदन्न। ಸಾವೆಯಕ್ಕಿ.

**साँस**– स्त्री श्वास, फुरसत, अवकाश। ಶ್ವಾಸ, ಉಸಿರು, ಬಿಡುವು, ಅವಕಾಶ.
**—तक न लेना** = बिलकुल मौन रहना। ಏನೂ ಮಾತಾಡದಿರು, ಮೌನವಾಗಿರು.
**—फूलना** = साँस का जल्दी जल्दी चलना। ತೇಕು ಹತ್ತು, ಬೇಗಬೇಗನೆ ಉಸುರಾಡಿಸು, ಮೇಲುಸಿರುಬರು.
**—रहते** = जीवित रहते। ಜೀವದಿಂದಿದ್ದಾಗ, ಜೀವನ ಕಾಲದಲ್ಲಿ.
**—उखडना या टूटना** = बडी कठिनाई से साँस लेना। ಕಷ್ಟದಿಂದ ಉಸುರಾಡಿಸು (ಮರಣ ಸಮಯದಲ್ಲಿ)
**—लेना** = सुस्ता लेना। ವಿಶ್ರಮಿಸು, ವಿಶ್ರಾಂತಿ ತೆಗೆದುಕೊಳ್ಳು.
**साँसत, साँसति**– स्त्री. साँस रुकने जैसा कष्ट, यातना, झंझट। ಉಸಿರುಗಟ್ಟುವಿಕೆ, ಉಸಿರುಗಟ್ಟಿದಂಥ ತ್ರಾಸ, ಯಾತನೆ, ಗೊಂದಲ, ಜಗಳ.
**साँसतघर**– पु काल कोठरी। ಕತ್ತಲ ಕೋಣೆ.
**साँसना**– सक्रि शासन करना, कष्ट देना। ಶಾಸನ ಮಾಡು, ಶಿಕ್ಷಿಸು, ದಂಡಿಸು, ತೊಂದರೆ ಪಡಿಸು, ತ್ರಾಸ ಕೊಡು
**साँसा**– पु श्वास, प्राण, कष्ट, चिंता, भय। ಶ್ವಾಸ, ಪ್ರಾಣ, ಕಷ್ಟ, ಚಿಂತೆ, ಭಯ.
**साँसारिक**– वि. लौकिक। ಲೌಕಿಕ, ಸಂಸಾರ ಸಂಬಂಧವಾದ, ಪ್ರಾಪಂಚಿಕ.
**सांस्कृतिक**– वि संस्कृति संबंधी। ಸಂಸ್ಕೃತಿ ಸಂಬಂಧವಾದ.
**सा**- अव्य समान। ಅಂಥ, ಸಮಾನವಾದ, ಸದೃಶ.
**साअत, साइत**–स्त्री. शुभलग्न, ढाई घड़ी का समय। ಮುಹೂರ್ತ, ಶುಭ ವೇಳೆ, ಎರಡೂವರೆ ಗಳಿಗೆಯ ಕಾಲ.
**साइयाँ**– पु. स्वामी, पति। ಸ್ವಾಮಿ, ಒಡೆಯ, ಪತಿ
**साईं**– पु दे. 'साँइ'।
**साई**– स्त्री पेशगी दिया गया धन। ಮುಂಗಡ, ಸಂಚಕಾರ. पु प्रयत्न करनेवाला। ಪ್ರಯತ್ನಶೀಲ.
**साईस**– पु घोडे की सेवा करनेवाला नौकर। ಕುದುರೆಯಾಳು, ಕುದುರೆಯ ವ್ಯವಸ್ಥೆ ಮಾಡುವ ನೌಕರ.
**साईसी**– स्त्री साईस का काम या पद। ಕುದುರೆಯಾಳಿನ ಕೆಲಸ
**साकट, साकत**– पु गुरुरहित व्यक्ति, मद्यमांस खानेवाला। ಗುರುರಹಿತ ವ್ಯಕ್ತಿ, ಮದ್ಯ ಮಾಂಸ ತಿನ್ನುವವ
**साकन, साकिन**– वि. निवासी, एक स्थानपर चुपचाप ठहरा हुआ। ನಿವಾಸಿ, ವಾಸಿಸುವವ, ರಹಿವಾಸಿ, ಒಂದು ಸ್ಥಳದಲ್ಲಿ ತಂಗಿದ.
**साकल**– स्त्री जंजीर। ಸರಪಣಿ.
**साका**– पु संवत्, समय, इच्छा, नामवरी। ಸಂವತ್ಸರ, ಶಕ, ಸಮಯ, ಇಚ್ಛೆ, ಖ್ಯಾತಿ, ಪ್ರಸಿದ್ಧಿ.

**साकार**– वि मूर्तिमान् । ಸಾಕಾರ, ಮೂರ್ತಿವಂತ, ದೇಹಧಾರಿ

**साकिन**– वि. निवासी । ನಿವಾಸಿ, ವಾಸಿಸುವವ.

**साकी**– पु मद्य पिलानेवाला, प्रेमिका या प्रिय के लिये प्रयुक्त होनेवाला एक शब्द । ನೆರೆ ಕುಡಿಸುವವ, ಪ್ರಿಯತಮ ಹಾಗೂ ಪ್ರಿಯತಮೆ-ಯೆನಲುವಾಗಿ ಉಪಯೋಗಿಸಲ್ಪಡುವ ಶಬ್ದ.

**साकेत, साकेतन**– पु अयोध्या । ಅಯೋಧ್ಯೆ.

**साक्षर**– वि. पढालिखा । ಸಾಕ್ಷರ, ಕಲಿತವ.

**साक्षात्**– अव्य प्रत्यक्ष, सामने । ಪ್ರತ್ಯಕ್ಷವಾಗಿ, ಪ್ರಕಟವಾಗಿ, ಎದುರಿಗೆ.

**साक्षी**– स्त्री. गवाही । ಸಾಕ್ಷ್ಯ, ಪ್ರಮಾಣ. पु. गवाह । ಸಾಕ್ಷಿದಾರ, ಸಾಕ್ಷಿ.

**साख**– पु. कीर्ति, धाक, मर्यादा, प्रामाणिकपन, प्रतीति । ಕೀರ್ತಿ, ಪ್ರಭಾವ, ಆಟೋಪ, ಮರ್ಯಾದೆ, ಪ್ರತಿಷ್ಠೆ, ಪತ್ತು, ಪ್ರಾಮಾಣಿಕತನ, ನಂಬಿಕೆ. स्त्री शाखा, पीढी । ಶಾಖೆ, ಕುಲ, ವಂಶಾವಳಿ.

**साखर**– वि पढ़ालिखा । ಓದುಬರಹ ಬಲ್ಲವ.

**साखी**– पु. गवाह । ಸಾಕ್ಷಿದಾರ. स्त्री. गवाही, ज्ञानविषयक पद्य । ಸಾಕ್ಷ್ಯ, ಪ್ರಮಾಣ, ಜ್ಞಾನ ಸಂಬಂಧದ ಪದ್ಯ.

**साखू**–पु. सखुआ वृक्ष । ತೇಗಿನ ಮರ, ಸಾಗವಾನಿ.

**साग**– पु शाख, तरकारी । ಪಲ್ಲೆ, ಸೊಪ್ಪು, ತರಕಾರಿ.

**सागपात**– पु सूखा भोजन । ಪಲ್ಲೆ ರೊಟ್ಟಿ ( ಒಣ ಮತ್ತು ಸಾದಾ ಆಹಾರ )

**सागर**– पु समुद्र । ಸಮುದ್ರ.

**साग़र**– पु. शराब पीने का कटोरा, प्याला । ನೆರೆ ಕುಡಿಯುವ ಪಾತ್ರೆ, ಬಟ್ಟಲು, ಗ್ಲಾಸು.

**सागू**– पु. ताड़ की जाति का एक प्रकार का वृक्ष । ಸಬ್ಬಕ್ಕಿಯ ಮರ.

**सागूदाना**– पु सागू नामक वृक्ष के तने का गूदा । ಸಬ್ಬಕ್ಕಿ, ಸಾಬೂದಾಣೆ.

**सागून, सागौन**– पु. साखू । ತೇಗದ ಮರ, ಸಾಗವಾನಿ

**साज**– पु सजावट की चीजें, सजावट, तैयारी । ಶೃಂಗಾರ ಸಾಮಗ್ರಿ, ಸಜ್ಜುಗೊಳಿಸುವಿಕೆ, ಶೃಂಗರಿಸುವಿಕೆ, ಸಿದ್ಧತೆ. वि सदृश । ಅಂತೆ, ಸಮಾನ, ಸದೃಶ.

**साज़**– पु. सजावट का काम, सामग्री, तैयारी, लड़ाई में काम आनेवाले हथियार, मेलजोल, वाद्य, बाजा । ಶೃಂಗಾರ ಸಾಮಗ್ರಿ, ಸಿದ್ಧತೆ, ಸನ್ನಾಹ, ತಯಾರಿ, ಉಪಕರಣ, ಯುದ್ಧದಲ್ಲಿ ಉಪಯೋಗಿಸುವ ಆಯುಧಗಳು, ಸಂಬಂಧ, ಮೈತ್ರಿ, ಘನಿಷ್ಠತೆ, ವಾದ್ಯ. वि. बनानेवाला

तैयार करनेवाला । ಮಾಡುವವ, ತಯಾರಿಸುವವ (ಉದಾ–घड़ीसाज)

**साजन**– पु पति, प्रेमी, ईश्वर, सज्जन। ಪತಿ, ಗಂಡ, ಪ್ರಿಯ, ಇನಿಯ, ಈಶ್ವರ, ಸಜ್ಜನ.

**साजना**– सक्रि सँवारना, सजाना। ಸಜ್ಜುಗೊಳಿಸು, ಸರಿಪಡಿಸು, ಶೃಂಗರಿಸು, ಸಿದ್ಧಪಡಿಸು, ಅಲಂಕರಿಸು.

**साज़बाज**–पु तैयारी, मेलजोल। ಸಿದ್ಧತೆ, ಸನ್ನಾಹ, ಶೃಂಗಾರ, ಹೊಂದಿಕೆ, ಮೈತ್ರಿ.

**साजसामान**– पु सामग्री, ठाटबाट। ಸಾಮಗ್ರಿ, ಸಾಮಾನು, ದ್ರವ್ಯ, ಶೃಂಗಾರ.

**साजा**– वि सुंदर, साफ। ಸುಂದರವಾದ, ಚೆಂದವಾದ, ಸ್ವಚ್ಛ.

**साज़िश**– स्त्री षड्यंत्र, मेल। ಒಳಸಂಚು, ಪಿತೂರಿ, ಹೊಂದಿಕೆ, ನೇರಿಕೆ, ನೆರವು.

**साझा**–पु हिस्सा, मेल। ಪಾಲು, ಭಾಗ, ಹಿಸ್ಸೆ, ಪಾಲುಗಾರಿಕೆ, ಸೇರಿಕೆ.

**साझी, साझेदार**–पु. हिस्सेदार। ಪಾಲುಗಾರ, ಭಾಗಸ್ಥ.

**साझेदारी**– स्त्री हिस्सेदारी। ಪಾಲುಗಾರಿಕೆ.

**साटक**–पु भूसा, तुच्छ वस्तु। ಹೊಟ್ಟು, ಉಬ್ಬಲು, ಜಳ್ಳು, ತುಚ್ಛ ವಸ್ತು

**साटन**– पु. एक रेशमी कपडा। ಒಂದು ತರದ ರೇಶ್ಮೆ ಬಟ್ಟೆ, ಸಾಟೀನುಬಟ್ಟೆ

**साटना**– सक्रि चिपकाना, जोडना। ಅಂಟಿಸು, ಹೊಂದಿಸು, ಜೋಡಿಸು, ನೇರಿಸು, ಜಂಟಿಸು.

**साटा**–पु बदला। ವಿನಿಮಯ, ಬದಲು, ಪ್ರತಿ, ಬದಲಿ.

**साठ**– वि ६०। ಅರವತ್ತು.

**साठनाठ**– वि निर्धन, शुष्क, नीरस, तहसनहस। ಬಡವ, ದರಿದ್ರ, ಶುಷ್ಕ, ನೀರಸ, ಯದ್ವಾತದ್ವಾ, ತಿರುವು-ಮುರುವು.

**साठसाती**– स्त्री. दे 'साढसाती'।

**साठा**– पु ईख। ಕಬ್ಬು. वि साठ वर्ष की आयुवाला। ಅರವತ್ತು ವರುಷದವ.

**साठी**–स्त्री. एक तरह का धान। ಒಂದು ಜಾತಿಯ ಭತ್ತ.

**साड़ी**– स्त्री स्त्रियो की धोती। ಸೀರೆ.

**साढसाती**–स्त्री. शनिदशाविशेष। ಏಳು ವರ್ಷದ ಶನಿ ದಶೆ, ಶನಿಪ್ರಭಾವದ ಏಳು ವರ್ಷ.

**साढ़ी**– स्त्री. दूध के ऊपर की मलाई। ಹಾಲಿನ ಕೆನೆ.

**साढे**– वि आधा सहित। ಅರ್ಧ ಸಹಿತವಾಗಿ, ಅರ್ಧ ಸೇರಿದ, ಅರ್ಧ ಹೆಚು.

**साढेसाती**– स्त्री दे 'साढसाती'।

**सात**– वि ७। ಏಳು, ಸಪ್ತ

**—पाँच** = धूर्तता। ಧೂರ್ತತನ, ರಕ್ಕು, ಮೋಸಗಾರಿಕೆ.

**—फेरी** = विवाह की एक रस्म। ಸಪ್ತಪದಿ.

**—समुद्र पार** = बहुत दूर। ಬಹಳ

—खेल = मनोविनोद । ಮನೋವಿನೋದ.

—छूटना = हँसना । ನಗು.

—समझना=सहज मानना । ಸಾಮಾನ್ಯವೆಂದು ತಿಳಿ.

—में उड़ाना=किसी बात को ठिठोली में टाल देना । ನಗು ನಗುತ್ತ ಮಾತು ಹಾರಿಸು, ನಗೆಯಾಡುತ್ತ ಮಾತು ಮರೆಯಿಸು.

**हँसीदिल्लगी, हँसीमज़ाक**– वि. विनोद, परिहास । ನಗಚಾಟಿಕೆ, ವಿನೋದ, ತಮಾಷೆ, ಪರಿಹಾಸ.

**हँसौड़, हँसोर**– वि. हास्यप्रिय, विनोद-शील । ಹಾಸ್ಯಪ್ರಿಯ, ವಿನೋದಿ, ಹಾಸ್ಯಗಾರ, ನಗಿಸುವವ.

**हँसोहाँ**– वि थोड़ा हँसता हुआ, हास्य-युक्त । ನಗುವ, ನಗುತ್ತಿರುವ, ಹಾಸ್ಯಯುಕ್ತ.

**हक़**– पु. अधिकार, स्वत्व, न्यायपक्ष, कोई काम करने या किसी से कराने का अधिकार । ಅಧಿಕಾರ, ಸ್ವತ್ವ, ನ್ಯಾಯಪಕ್ಷ, ಯಾವದೊಂದು ಕೆಲಸ ಮಾಡುವ ಅಥವಾ ಎರಡನೆಯವರಿಂದ ಮಾಡಿಸುವ ಅಧಿಕಾರ. वि. सत्य, योग्य, उचित । ಸತ್ಯ, ಯೋಗ್ಯವಾದ, ನ್ಯಾಯವಾದ, ಉಚಿತವಾದ, ಯುಕ್ತವಾದ.

**हक़ में** = विषय में, पक्ष में । ವಿಷಯದಲ್ಲಿ, ಪಕ್ಷದಲ್ಲಿ.

**हक़ आदा करना** = कर्तव्य पालन करना । ಕರ್ತವ್ಯ ಪಾಲನೆ ಮಾಡು.

**हकदार**– वि अधिकारी । ಅಧಿಕಾರಿ, ಒಡೆಯ, ಬಾಧ್ಯಸ್ಥ, ಹಕ್ಕುದಾರ.

**हकनाहक**–अव्य व्यर्थही, जबरदस्ती । ವ್ಯರ್ಥ, ಅಕಾರಣ, ಅನ್ಯಾಯವಾಗಿ.

**हक़बक़ाना**– अक्रि. स्तंभित होना, घबड़ाना । ಚಕಿತನಾಗು, ವಿಸ್ಮಯಗೊಳ್ಳು, ಕಕ್ಕಾಬಿಕ್ಕಿಯಾಗು, ಗಾಬರಿಯಾಗು, ಅಂಜು.

**हकम**– पु. न्यायकर्ता, पंच । ನ್ಯಾಯ ಮಾಡುವವ, ಪಂಚ.

**हकला**– वि हकलानेवाला । ತೊದಲು ಮಾತಾಡುವವ, ಉಗ್ಗುವವ.

**हकलाना**–अक्रि अटक अटककर बोलना । ತೊದಲು, ಉಗ್ಗು, ಗುಕ್ಕಿ ಮಾತಾಡು.

**हकलापन**– पु. हकलाना । ಉಗ್ಗುವಿಕೆ, ತೊದಲುವಿಕೆ.

**हकलाहा**– वि हकलानेवाला । ಉಗ್ಗುವವ, ತೊದಲುವವ.

**हकारना**– सक्रि पाल तानना, झंडा उठाना । ಹಾಯಿ ಕಟ್ಟು, ಹಾಯಿ ಬಿಗಿ, ಹಡಗದ ಪಟ ಬಿಗಿ, ಬಾವುಟ ಹಾರಿಸು, ನಿಶಾನಿ ಕಟ್ಟು, ಪತಾಕೆ ಏರಿಸು.

**हक़ीकत**– स्त्री सचाई, तत्व, तथ्य, सत्यवृत्त । ಸತ್ಯತೆ, ತತ್ವ, ವಾಸ್ತವಿಕತೆ, ನಿಜ, ತಥ್ಯ, ಸಾರ, ಸತ್ಯವೃತ, ನಿಜ ಸಂಗತಿ.

**हक़ीक़त में** = वास्तवमें । ನಿಜವಾಗಿ,

ವಾಸ್ತವಿಕವಾಗಿ.

हकीकी– वि असली, सगा। ನಿಜವಾದ, ಯಥಾರ್ಥವಾದ, ಸ್ವಂತ.

हकीम– पु. वैद्य, पंडित। ವೈದ್ಯ, ಹಕೀಮ, ಪಂಡಿತ, ವಿದ್ವಾನ್.

हकीमी– स्त्री यूनानी चिकित्सा, हकीम का पेशा। ಯೂನಾನಿ ವೈದ್ಯಶಾಸ್ತ್ರ, ಹಕೀಮನ ಉದ್ಯೋಗ, ವೈದ್ಯವೃತ್ತಿ.

हकीयत– स्त्री. अधिकार, वह वस्तु जिसपर अधिकार हो। ಅಧಿಕಾರ, ಸ್ವಾಮಿತ್ವದ, ಸ್ವತ್ವ, ಅಧಿಕಾರದಲ್ಲಿದ್ದ ವಸ್ತು, ಹಕ್ಕು ಇರುವ ವಸ್ತು.

हकीर–वि तुच्छ, घृणित, दुबलापतला। ತುಚ್ಛ, ತಿರಸ್ಕೃತ, ದುರ್ಬಲ.

हकूमत– स्त्री. दे. 'हुकूमत'।

हक्काक– पु. नगो आदिपर अक्षर या मोहर खोदनेवाला। ರತ್ನದ ಕೆಲಸ ಮಾಡುವವ, ನಗಗಳ ಮೇಲೆ ನಕಾಸಿ ಕೆಲಸ ಮಾಡುವವ

हक्काबक्का– वि. घबडाया हुआ, भौचक। ಬೆದರಿದ, ಬೆಚ್ಚಿಬಿದ್ದ, ಬೆರಗಾದ, ಆಶ್ಚರ್ಯಚಕಿತ, ದಿಗಿಲುಗೊಂಡ, ಕಕ್ಕಾಬಿಕ್ಕಿಯಾದ.

हगना–अक्रि मलोत्सर्ग करना। ಹೇಲು, ಬೈಲಿಗೆ ಹೋಗು, ಹಿತ್ತಲಿಗೆ ಹೋಗು.

हगाना– सक्रि. हगने की क्रिया में सहायता देना। ಹೇಲಿಸು, ಹೇಲುವಂತೆ ಮಾಡು.

हगास–स्त्री. मलत्याग करने की इच्छा। ಮಲತ್ಯಾಗಮಾಡುವ ಇಚ್ಛೆ, ಭೇದಿ.

हगोड़ा– वि. बहुत हगनेवाला। ಬಹಳ ಹೇಲುವವ.

हचकना– अक्रि धक्के से हिलना। ಧಕ್ಕೆ ತಗಲಿ ಅಲ್ಲಾಡು, ಪೆಟ್ಟು ತಿಂದು ಹೊಯ್ದಾಡು.

हचका– पु. धक्का, झोंका। ಧಕ್ಕೆ, ಪೆಟ್ಟು, ಹೊಡೆತ.

हचकाना–सक्रि धक्का देकर हिलाना। ಧಕ್ಕೆ ಹೊಡೆದು ಅಲ್ಲಾಡಿಸು, ಹೊಯ್ದಾಡಿಸು.

हचकोला– पु दे. 'हचका'।

हचना– अक्रि दे 'हिचकना'।

हज़–पु. मुसलमानो की मक्केकी यात्रा। ಮುಸಲ್ಮಾನರ ಮಕ್ಕಾ ಯಾತ್ರೆ.

हज़म– वि पचा हुआ। ಪಚನವಾದ, ಕರಗಿದ. पु. पचने की क्रिया। ಅರಗುವಿಕೆ, ಪಚನಕ್ರಿಯೆ.

—होना = पचना। ಪಚನವಾಗು, ಕರಗು.

—करना = पचा जाना, उड़ा लेना। ಅರಗಿಸಿಕೊಳ್ಳು, ಎತ್ತಿಹಾಕು, ತಿಂದುಬಿಡು.

हज़रत–पु महाशय, महात्मा, सामिप्य। ಮಹಾಶಯ, ಮಹಾನುಭಾವ, ಮಹಾತ್ಮ, ಸಾಮೀಪ್ಯ.

हजाम– पु. नाई। ನಾವಲಿಗ, ಕೆಲಸಿಗ, ಕ್ಷೌರಿಕ, ನಾಪಿತ.

हजामत– स्त्री. क्षौर, मुंडन, बाल बनाने

की मजदूरी। ಕ್ಷೌರ,ಆಯುಷ್ಕರ್ಮ, ಬೋಳಿಸುವಿಕೆ, ಹಜಾಮತ್ತು, ಕ್ಷೌರದ ಕೂಲಿ.

हज़ार– वि. सहस्र । ಸಾವಿರ. क्रिवि चाहे जितना । ಬೇಕಾದಷ್ಟು, ಬಹಳ.

हज़ारा– वि सहस्रदल, हजार पद्यो का ग्रंथ, फौवारा । ಸಹಸ್ರ ದಲವುಳ್ಳ. ಸಾವಿರ ಪದ್ಯಗಳ ಗ್ರಂಥ, ಕಾರಂಜಿ, ಬುಗ್ಗೆ.

हज़ारी– पु एक हजार सैनिको का सेनापति । ಸಾವಿರ ಸೈನಿಕರ ಸೇನಾಪತಿ.

हज़ारों– वि कई हजार, बहुत । ಸಾವಿರಾರು, ಬಹಳ.

हजूरी– पु. हमेशा पासमें रहनेवाला नौकर । ಯಾವಾಗಲೂ ಹತ್ತಿರ ಇರುವ ಸೇವಕ.

हजो– स्त्री निंदा, शिकायत । ನಿಂದೆ, ಬೈಗಳು, ಕೇಡು, ದೂರು.

हज्ज– पु दे. ' हज '।

हज्जाम– पु दे ' हजाम '।

हटक– स्त्री निषेध । ನಿಷೇಧ, ತಡೆಯುವಿಕೆ, ಅಡ್ಡಿ.

हटकन– स्त्री हटकने या मना करने की क्रिया, गायों तथा अन्य चौपायों के हॉकने की छड़ी । ಅಟ್ಟುವಿಕೆ,ಹೊಡೆಯುವಿಕೆ,ದನಕರುಗಳನ್ನು ಅಟ್ಟುವ ಬಡಿಗೆ.

हटकना– अक्रि रुकना । ತಡೆ, ಬೆಚ್ಚು, ನಿಲ್ಲು सक्रि दे ' हटकाना '।

हटका– पु. किवाडो को खुलने से रोकने के लिये लगाया हुआ काठ । ಅಗಳಿ, ಚಿಲಕ.

हटकाना– सक्रि रोकना, मना करना । ತಡೆ, ನಿಷೇಧಿಸು, ದನಕರುಗಳನ್ನು ಒಂದು ಕಡೆಗೆ ಹೋಗಗೊಡದೆ ಮತ್ತೊಂದು ಕಡೆಗೆ ಹೊಡೆದುಕೊಂಡು ಹೋಗು.

हटकि– क्रिवि अकारण । ಅಕಾರಣವಾಗಿ.

हटतार– स्त्री. हड़ताल, माला का सूत । ಹರತಾಳ, ಮುಷ್ಕರ, ಮಾಲೆ ಕಟ್ಟುವ ದಾರ.

हटताल– स्त्री दे ' हड़ताल '।

हटना– अक्रि सरकना, दूर होना, अलग होना, टलना, प्रतिज्ञापर दृढ न रहना, विमुक्त होना । ಜಾರು, ಸರಿ, ಸರಕು, ಅಗಲು, ಬೇರೆಯಾಗು, ಹಿಮ್ಮೆಟ್ಟು, ಹಿಂಜರಿ, ತೊಲಗು, ಕದಲು, ಜರಗು, ನೀಗು, ಕಳೆ, ಚ್ಯುತನಾಗು, ಪ್ರತಿಜ್ಞೆ ಪಾಲಿಸದಿರು, ವಿಮುಖನಾಗು.

हटवया, हवा–पु. हाट में बैठकर सौदा बेचनेवाला, दूकानदार । ಸಂತೆಯಲ್ಲಿ ಕುಳಿತು ಸರಕು ಮಾರುವವ,ಅಂಗಡಿಕಾರ, ವ್ಯಾಪಾರಿ.

हटवाई– स्त्री. क्रयविक्रय । ಮಾರಾಟ, ವ್ಯಾಪಾರ.

हटवाना– सक्रि हटाने का काम दूसरे से

कराना । ಸರಿಸು, ತೊಲಗಿಸು, ಹಿಮ್ಮೆಟ್ಟಿಸು, ನೂಕು, ಅಗಲಿಸು.

**हटवार**– पु. सौदागर, व्यापारी । ವ್ಯಾಪಾರಸ್ಥ, ಅಂಗಡಿಕಾರ.

**हटाना**– सक्रि दूर कराना, खिसकाना, डिगाना । ಅಗಲಿಸು, ಬೇರ್ಪಡಿಸು, ಸರಿಸು, ಜರುಗಿಸು, ತೊಲಗಿಸು, ತಳ್ಳು, ನೂಕು, ದಬ್ಬು, ಹಿಮ್ಮೆಟ್ಟಿಸು, ತೊಲಗಿಸು, ಪ್ರತಿಜ್ಞಾಭಂಗ ಮಾಡಿಸು.

**हटुआ**–पु. दूकानदार, अन्न तौलनेवाला। ಅಂಗಡಿಕಾರ, ಕಾಳು ಅಳೆಯುವವ.

**हटौती**– स्त्री. शरीर की गठन । ಶರೀರ ರಚನೆ, ಮೈಕಟ್ಟು.

**हट्ट**– पु हाट, दूकान । ಪೇಟೆ, ಸಂತೆ, ಅಂಗಡಿ.

**हट्टाकट्टा, हट्टाबट्टा**– वि. हृष्टपुष्ट, मोटा-ताजा । ಗಟ್ಟಿಮುಟ್ಟಾದ, ಗಡುತರ, ಕೊಬ್ಬಿದ, ಬಲಿಷ್ಠ

**हट्टी**– स्त्री. दूकान । ಅಂಗಡಿ.

**हठ**– पु. दुराग्रह, प्रतिज्ञा, प्रण, टेक । ದುರಾಗ್ರಹ, ಹಟ, ಮೊಂಡಾಟ, ಪ್ರತಿಜ್ಞೆ, ಮುಷ್ಕರ, ದೃಢವಾಗಿರು-ವಿಕೆ.

**—पकडना** = दुराग्रह करना। ದುರಾಗ್ರಹ ಮಾಡು, ಹಟ ಮಾಡು.

**हठधर्म**– पु दुराग्रह, कट्टरता। ದುರಾಗ್ರಹ.

**हठधर्मी**– पु दुराग्रही । ಹಟಮಾರಿ, ದುರಾಗ್ರಹಿ.

**हठना**– अक्रि हठ करना । ಹಟಹಿಡಿ, ದುರಾಗ್ರಹ ಮಾಡು, ಮೊಂಡತನ ಮಾಡು, ಮುಷ್ಕರ ಹಿಡಿ.

**हठशील**– वि दे 'हठी'।

**हठात्**– क्रिवि हठपूर्वक, दुराग्रह से, अवश्य । ಹಠಾತ್ತಾಗಿ, ಹಟಪೂರ್ವಕವಾಗಿ, ದುರಾಗ್ರಹದಿಂದ, ಬಲಾತ್ಕಾರದಿಂದ, ಅವಶ್ಯವಾಗಿ.

**हठिका**–स्त्री. कोलाहल । ಕೋಲಾಹಲ.

**हठी**–वि हठ करनेवाला । ಹಟಮಾರಿ, ಚಂಡಿಖೋರ, ಮೊಂಡ.

**हटीला**– वि दृढ़ संकल्पवाला, हठी । ದೃಢ ಪ್ರತಿಜ್ಞೆಯುವ, ದೃಢ ಸಂಕಲ್ಪದವ, ಹಟಮಾರಿ, ಚಂಡಿಖೋರ, ಮೊಂಡ.

**हड**– स्त्री. एक बड़ा वृक्ष तथा उस के फल, एक आभूषण । ಅಳಲೆಕಾಯಿ ಮರ, ಅಳಲೆಕಾಯಿ, ಒಂದು ಆಭರಣ

**हडकंप**– पु हलचल । ಕೋಲಾಹಲ, ಗದ್ದಲ, ದಾಂಧಲೆ, ಗಲಭೆ.

**हडक**– स्त्री गहरी चाह, उत्कट अभिलाषा । ಹಂಬಲ, ಉತ್ಕಟ ಇಚ್ಛೆ, ಬಲವಾದ ಆಸೆ.

**हडकना**– अक्रि व्याकुल होना । ವ್ಯಾಕುಲನಾಗು, ಹಂಬಲಿಸು.

**हडकाना**– सक्रि किसी के पीछे लगाना, व्याकुल बनाना । ಹಂಬಲ ಹುಟ್ಟಿಸು, ಹಾತೊರೆಯಿಸು.

**हडकाया**– वि जो किसी चीज को प्राप्त

करने के लिये व्याकुल हो, पागल । ಹಂಬಲಿಸಿದವ,ಹಾತೊರೆಯುವವ, ಒಂದು ವಸ್ತುವಿಗಾಗಿ ಹು ಚ್ಚು ಹಿಡಿದವ.

**हडगीला**–वि. एक पक्षी । ಒಂದು ಪಕ್ಷಿ.

**हडजोड**– पु. एक लता । ಒಂದು ಬಳ್ಳಿ.

**हडताल**– स्त्री किसी बातपर असंतोष प्रकट करने के लिये दूकान बंद करना या काम बंद करना । ಹರತಾಳ, ಅಸಂತೋಷವನ್ನು ವ್ಯಕ್ತಪಡಿಸಲು ಒಟ್ಟಾಗಿ ಅಂಗಡಿ ಮುಚ್ಚುವಿಕೆ ಅಥವಾ ತಾವು ಮಾಡುವ ಕೆಲಸ ವನ್ನು ನಿಲ್ಲಿಸುವಿಕೆ.

**हडना**– अक्रि. तौल में जाचा जाना । ತೂಗಲ್ಪಡು, ತೂಕ ಮಾಡಲ್ಪಡು.

**हडप**–वि निगला हुआ, अनुचित रीति से किया हुआ । ನುಂಗಿದ, ಎತ್ತಿ ಹಾಕಿದ, ಗಿಳಂಕೃತ ಮಾಡಿದ, ಅನುಚಿತ ರೀತಿಯಿಂದ ತೆಗೆದು- ಕೊಂಡ.

**हडपना**–सक्रि. खा जाना, अनुचित रीति से ले लेना । ತಿಂದು ಹಾಕು,ನುಂಗಿ ಬಿಡು, ಜೀರ್ಣಿಸಿಕೊಳ್ಳು, ಗಿಳಂಕೃತ ಮಾಡು, ಅನುಚಿತ ರೀತಿಯಿಂದ ತೆಗೆದುಕೊಳ್ಳು.

**हडफूटन**– पु. हड्डियों में पीड़ा । ಎಲು ಬಿನ ನೋವು.

**हडबड़**– स्त्री दे. 'हड़बड़ी' ।

**हड़बडाना**– अक्रि. जल्दी करना, आतुर होना । ತ್ವರೆಮಾಡು, ಗಡಿಬಿಡಿ ಮಾಡು, ಆತುರ ಪಡು. सक्रि. जल्दी करने के लिये प्रेरित करना । ಆತುರ ಪಡಿಸು, ಅವಸರ ಪಡಿಸು, ತ್ವರೆಮಾಡಿಸು,ಗಡಿಬಿಡಿ ಮಾಡಿಸು

**हड़बडिया**– वि उतावला । ಆತುರ ಪಡುವವ, ಗಡಿಬಿಡಿ ಮಾಡುವವ, ದುಡುಕಿನವ, ತ್ವರೆ ಮಾಡುವವ.

**हड़बडी**– स्त्री. उतावलापन, शीघ्रता । ಲಗುಬಗೆ, ಅವಸರ,ತ್ವರೆ,ಗಡಿಬಿಡಿ, ಆತುರ, ಶೀಘ್ರತೆ,ಭರ,ಸಂಭ್ರಮ.

**हडहडाना**– सक्रि उतावलापन से दूसरे को व्यग्र करना । ಅವಸರ ಪಡಿಸು, ಆತುರಪಡಿಸು,ಗಡಿಬಿಡಿಮಾಡಿಸು.

**हडावरि, हड़ावल**– स्त्री हड्डियो का समूह या माला, अस्थिपंजर। ಎಲು ಬಿನ ಸಮೂಹ, ಎಲುವಿನ ಮಾಲೆ, ಅಸ್ಥಿಪಂಜರ, ಎಲುವಿನ ಹಂದರ.

**हडीला**– वि. हड्डीवाला, अत्यंत दुर्बल । ಎಲುಬಿನ, ಎಲುಬುಳ್ಳ, ಬಹಳ ದುರ್ಬಲ.

**हड्डा**–पु बर्रे, मधुमक्खी की तरह का एक कीडा। ಕಣಜದ ಹುಳು, ಹೆದ್ದುಂಬಿ

**हड्डी**– स्त्री. अस्थि, वंश । ಎಲುಬು, ಎಲುವು, ಅಸ್ಥಿ.

**—तोड़ना** = बहुत मारना पीटना । ಬಹಳ ಹೊಡೆ, ಒಳಿತಾಗಿ ಥಳಿಸು, ಎಲುವು ಮುರಿ.

**हड्डियाँ निकल आना**= अति दुर्बल हो जाना । ಬಹಳ ದುರ್ಬಲನಾಗು, ಅಶಕ್ತನಾಗು.

हत– वि मारा हुआ, नष्ट किया हुआ, आशाहीन, रहित । ಕೊಲ್ಲಲ್ಪಟ್ಟ, ಕೊಂದ, ನಾಶ ಮಾಡಿದ, ಹಾಳು ಮಾಡಿದ, ಆಶಾಹೀನ, ರಹಿತ.

हतक– वि. पापी । ಪಾಪಿಷ್ಟ. स्त्री अप्रतिष्ठा । ಅವಮಾನ, ಅನಾದರ.

हतज्ञान– वि. संज्ञारहित, ज्ञानशून्य । ಸಂಜ್ಞಾರಹಿತ, ಎಚ್ಚರವಿಲ್ಲದ, ಜ್ಞಾನಶೂನ್ಯ.

हतदैव– वि. भाग्यहीन, अभागा । ಭಾಗ್ಯಹೀನ, ದುರ್ದೈವಿ.

हतना– सक्रि. वध करना, मारना, नष्ट करना । ಕೊಲ್ಲು, ವಧೆ ಮಾಡು, ಹೊಡೆ, ಪ್ರಹಾರ ಮಾಡು, ನಾಶ ಮಾಡು.

हतप्रभ– वि जिस की कांति नष्ट हो गयी हो । ಕಾಂತಿಹೀನ, ನಿಷ್ಪ್ರಭ.

हतबुद्धि– वि बुद्धिहीन, मूर्ख । ಬುದ್ಧಿ ಹೀನ, ಮೂರ್ಖ

हतभागा, हतभागी, हतभाग्य– वि. ಭಾಗ್ಯಹೀನ, ದುರ್ದೈವಿ, ನಿರ್ಭಾಗ್ಯ.

हतवाना–सक्रि वध कराना। ಕೊಲ್ಲಿಸು

हतवीर्य– वि बलहीन, शक्तिहीन । ಬಲಹೀನ, ಶಕ್ತಿಹೀನ.

हता– स्त्री. व्यभिचारिणी स्त्री । ವ್ಯಭಿಚಾರಿಣಿ,ಕೆಟ್ಟ ಆಚರಣೆಯುಳ್ಳ ಸ್ತ್ರೀ

हताना– सक्रि दे 'हतवाना'।

हताश– वि. निराश । ನಿರಾಶನಾದ, ಆಶೆಗುಂದಿದ.

हताहत– वि मारे गये और घायल । ಗಾಯಗೊಂಡ, ಕೊಲ್ಲಲ್ಪಟ್ಟ.

हतोत्साह– वि जिस को कुछ करने का उत्साह न रह गया हो । ಉತ್ಸಾಹ ಹೀನ, ಉತ್ಸಾಹ ನೀಗಿದ

हत्थ– पु. हाथ । ಕೈ.

हत्था–पु मूठ, खेतों मे पानी पटाने का एक औजार, केले के फलों का गुच्छा, हाथ का छाप । ಹಿಡಿಕೆ,ಹಿಡಿ,ಕಾವು, ನೀರು ಹಾಯಿಸುವ ಹಲಿಗೆಯ ತುಂಡು, ಬಾಳೆಯ ಗೊನೆ, ಕೈ ಮುದ್ರೆ.

हत्थी– स्त्री मूठ । ಹಿಡಿ,ಹಿಡಿಕೆ,ಕಾವು.

हत्थे– क्रिवि. हाथ मे । ಕೈಯಲ್ಲಿ.

हत्या– स्त्री. वध, झंझट । ವಧೆ,ಖೂನಿ, ಕೊಲೆ, ಜಂಜಟ, ರಗಳೆ.

हत्यार, हत्यारा– वि. हत्या करनेवाला । ಕೊಲೆಗಾರ, ಕೊಲೆಗಡಕ.

हत्यारिन– स्त्री हत्या करनेवाला । ಕೊಲೆಪಾತಕಿ, ಕೊಲ್ಲುವವಳು.

हत्यारी– स्त्री. हत्यारिन, हत्या करने का पाप । ಕೊಲೆಪಾತಕಿ, ಕೊಲೆ ಮಾಡುವ ಪಾಪ.

हथ– पु. 'हाथ' शब्द का संक्षिप्त रूप, समस्त पदों में इस का प्रयोग होता है । 'हाथ' ಶಬ್ದದ ಸಂಕ್ಷಿಪ್ತ ರೂಪ, ಸಮಸ್ತ ಪದಗಳಲ್ಲಿ ಇದರ ಪ್ರಯೋಗವಾಗುತ್ತದೆ.

हथकंडा– पु हस्तलाघव, चालाकी । ಹಸ್ತಲಾಘವ, ಗುಪ್ತತಂತ್ರ, ಕೈಚಳಕ.

**हथकडी**– स्त्री. कैदियों के हाथो में पहिराने का लोहे का कडा । ಬೇಡಿ, ಕೈದಿಗಳ ಕೈಯಲ್ಲಿ ತೊಡಿಸುವ ಕಬ್ಬಿಣದ ಬಳೆ, ಸಂಕೋಲೆ.

**हथछुट**– वि जिस को जल्द मार बैठने का अभ्यास हो । ಎರಡನೆಯವರನ್ನು ಬೇಗನೆ ಬಡಿದುಬಿಡುವ ಅಭ್ಯಾಸವುಳ್ಳವ.

**हथधरी**– स्त्री. सहारा लेने की लकड़ी । ಊರುಗೋಲು,ಆಧಾರದಕೋಲು

**हथनाल**–पु. गजनाल । ಆನೆಯಮೇಲೆ ಹೇರುವ ತೋಪು, ಫಿರಂಗಿ

**हथनी, हथिनी**– स्त्री हाथी की मादा । ಹೆಣ್ಣಾನೆ.

**हथफूल**– स्त्री एक गहना, एक प्रकार की अग्निक्रीडा । ಮಣಿಕಟ್ಟಿನಲ್ಲಿ ಧರಿಸುವ ಒಂದು ಆಭರಣ, ಜೇನು, ಒಂದು ಪ್ರಕಾರದ ಬಾಣಬಿರುಸು, ಮದ್ದು ಸುಡುವಿಕೆ, ಅಗ್ನಿಕ್ರೀಡೆ.

**हथफेर**– पु. प्रेम से किसी के शरीर पर हाथ फेरना, किसी का धन उडा लेना, क्षणिक ऋण, अदला-वदला । ಕೈಯಾಡಿಸುವಿಕೆ, ನೇವರಿಸುವಿಕೆ, ಹಣ ಎತ್ತಿಹಾಕುವಿಕೆ, ಕೈಚಳಕ, ಕೈಗಡ.

**हथरकी**–स्त्री. चमड़े की थैली । ಚರ್ಮದ ಚೀಲ.

**हथली**–स्त्री. चरखा चलाने का मुठिया । ಚರಖ ತಿರುಗಿಸುವ ಹಿಡಿಕೆ.

**हथलेवा, हथलेवा**– पु. पाणिग्रहण । ಪಾಣಿಗ್ರಹಣ, ಮದುವಣಿಗನು ವಧುವಿನ ಕೈಯನ್ನು ತನ್ನ ಕೈಯಲ್ಲಿ ಹಿಡಿದುಕೊಳ್ಳುವ ವಿವಾಹ ಸಂಸ್ಕಾರ

**हथवॅास**–पु. पतवार, डाडा । ಚುಕ್ಕಾಣಿ, ಹುಟ್ಟು.

**हथसांकर**– पु दे 'हथफूल'।

**हथसार**– स्त्री हाथी रखने का स्थान । ಗಜಶಾಲೆ.

**हथा**– स्त्री हाथ का छापा । ಪೂಜಾದಿಗಳಲ್ಲಿ ಗೋಡೆಗಳ ಮೇಲೆ ಮಾಡಿದ ಕೈಯ ಬೆರಳುಗಳ ಗುರುತು, ಪಂಜೆಯ ಮುದ್ರೆ, ಕೈಯ ಛಾವ.

**हथिनी**– स्त्री दे. 'हथनी'।

**हथिया**– पु. हस्त नक्षत्र । ಹಸ್ತನಕ್ಷತ್ರ.

**हथियाना**– सक्रि हाथ में लेना या पकडना, अधिकार में करना, धोका देकर दूसरे की वस्तु ले लेना । ಹಿಡಿ, ಹಿಡಿದುಕೊಳ್ಳು, ವಶಮಾಡಿಕೊಳ್ಳು, ಆಕ್ರಮಿಸು, ಅಪಹರಿಸು.

**हथियार**– पु औज़ार, उपकरण, शस्त्र । ಉಪಕರಣ, ಸಲಕರಣೆ, ಆಯುಧ, ಅಸ್ತ್ರಶಸ್ತ್ರ.

**हथियारबंद**– वि शस्त्रधारी । ಶಸ್ತ್ರಧಾರಿ, ಶಸ್ತ್ರ ಹಿಡಿದವ.

**हथेरा**–पु. पानी सींचने का अेक औजार। ನೀರು ಹಾಯಿಸಲು ಉಪಯೋಗಿಸುವ ಮರದ ತಟ್ಟೆ, ನೀರುಣ್ಣಿಸಲು ಉಪಯೋಗಿಸುವ ಹಲಗೆ

**हथेरी**– स्त्री दे 'हथैली'।

**हथेली, हथोरी**– स्त्री. करतल । ಅಂಗೈ, ಕರತಲ, ಅಡಿಗೈ.

**हथेव**– पु हथौडी । ಕೊಡತಿ, ಸುತ್ತಿಗೆ.

**हथौटी**– स्त्री हस्तकौशल, किसी कार्य में लगने का ढंग । ಹಸ್ತಕೌಶಲ, ಕೈ ಚಳಕ, ಕೆಲಸ ಮಾಡುವ ರೀತಿ, ಜಾಣತನ.

**हथौडा**– पु. ठोंकने पीटने का औजार । ಸುತ್ತಿಗೆ, ಕೊಡತಿ.

**हथौडी**– स्त्री छोटा हथौडा।ಚಿಕ್ಕ ಸುತ್ತಿಗೆ, ಚಿಕ್ಕ ಕೊಡತಿ

**हथ्यार**– पु दे 'हथियार'।

**हथ्याना**– सक्रि दे 'हथियाना'।

**हद**– स्त्री. सीमा, मर्यादा, चरम संख्या या परिमाण । ಸೀಮೆ, ಗಡಿ, ಎಲ್ಲೆ, ಮೇರೆ, ಹದ್ದು, ಮಿತಿ, ಮಟ್ಟು, ಪರಮಾವಧಿ ಸಂಖ್ಯೆ ಅಥವಾ ಪರಿಮಾಣ.

**—बांधना** = सीमा निर्धारित करना । ಸೀಮೆ ನಿಶ್ಚಯಿಸು, ಎಲ್ಲೆ ಕಟ್ಟು.

**—से ज्यादा** = बहुत अधिक। ಬಹಳ ಹೆಚ್ಚು, ಮಿತಿಮೀರಿ.

**—व हिसाब नहीं** = अत्यंत । ಮಿತಿಯಿಲ್ಲದ, ಅತ್ಯಂತ, ಸೀಮಾಹೀನ.

**हदबदी**– स्त्री. सरहद, सीमाबंदी । ಸರಹದ್ದು, ಸೀಮೆ, ಮೇರೆಕಲ್ಲು, ಬಾಂದುಗಲ್ಲು.

**हदीस**–स्त्री मुसलमानों का एक धर्मग्रंथ, नयी बात । ಮುಸಲ್ಮಾನರ ಒಂದು ಧರ್ಮಗ್ರಂಥ, ಮೊಹಮ್ಮದ ಪೈಗಂಬರರ ವಚನಸಂಗ್ರಹ.

**हनना**– सक्रि. मार डालना, पीटना । ಕೊಲ್ಲು, ವಧೆಮಾಡು, ಹೊಡೆ, ಬಡಿ

**हनवाना** - सक्रि. हनने का कार्य दूसरे से कराना । ಕೊಲ್ಲಿಸು, ಹೊಡೆಯಿಸು, ಬಡಿಸು.

**हनील**– पु केतकी । ಕೇದಗೆ.

**हनु**–स्त्री चिबुक, ठुड्डी । ಗದ್ದ, ಚಿಬುಕ, ಕದಪು.

**हनोज़**– क्रिवि अभीतक, आजतक । ಈ ತನಕ, ಇನ್ನೂ, ಈವರೆಗೆ.

**हन्त**– अव्य. दे. 'हंत'।

**हन्ता**– पु. हत्यारा । ಕೊಲೆಗಡಕ, ಕೊಲ್ಲುವವ.

**हप**– पु झट से मुँह में लेकर निगलने का शब्द । ನುಂಗುವಿಕೆ

**—कर जाना** = मुँह में डालकर झट से खा जाना । ಠಟಕ್ಕನೆ ನುಂಗಿಬಿಡು, ಗಡಪು ಮಾಡು.

**हपटाना**– अक्रि हाँफना । ತೇಕು, ಏದು, ಮೇಲುಸಿರುಬಿಡು.

**हफ्त**– वि सात । ಏಳು, ಸಪ್ತ.

**हफ्ता**– पु. सप्ताह । ಸಪ್ತಾಹ, ವಾರ.

**हबकना**– अक्रि. खाने या काटने के लिये झट से मुँह खोलना । ಬಾಯಿಬಿಡು, ಏನಾದರೂ ತಿನ್ನಲು ಅಥವಾ ಕಚ್ಚಿಕೊಳ್ಳಲು ಬಾಯಿ ತೆರೆ सक्रि. दाँतो से काट खाना । ಹಲ್ಲಿನಿಂದ ಕಡಿ, ಕಚ್ಚು, ಕಚ್ಚಿಕೊಳ್ಳು.

**हबरदबर, हबरहबर**–क्रिवि. उतावलेपन

से, हड़बड़ी से। ತ್ವರೆಯಿಂದ, ಗಡಿಬಿಡಿಯಿಂದ, ಅವಸರದಿಂದ, ಬೇಗ ಬೇಗನೆ

**हबराना**– अक्रि दे 'हड़बड़ाना'।

**हबश**– पु हबशियो के रहने का देश। ಅಬಿಸೀನಿಯಾ ದೇಶ.

**हबशी**– पु हबश देश का निवासी। ಅಬಿಸೀನಿಯಾ ದೇಶದವ, ಹಬಸೀ, ನಿಗ್ರೋಜನ.

**हबीब**–पु मित्र, प्रिय। ಮಿತ್ರ, ಗೆಳೆಯ, ಪ್ರಿಯ.

**हबूब**-पु बुलबुला, तुच्छ बात। ನೀರಿನ ಗುಳ್ಳೆ, ತುಚ್ಛ ಮಾತು.

**हब्बा**– पु अन्न का दान, बहुत ही अल्प अंश। ಕಣ, ಅಣು, ಚಿಕ್ಕ ತುಂಡು.

**हब्बाडब्बा**–पु. बच्चों की एक बीमारी। ಮಕ್ಕಳ ಒಂದು ರೋಗ.

**हब्शी**– पु दे. 'हबशी'।

**हब्स**–पु बद या कैद करने की अवस्था, कैदखाना, उम्मस। ಬಂಧನ, ಸೆರೆ, ಸೆರೆಯಲ್ಲಿಡುವಿಕೆ, ಸೆರೆಮನೆ, ಕಾರಾಗೃಹ, ಸೆಕೆ, ಗಮ್ಮು.

**हम**– सर्व 'मैं' का बहुवचन। ನಾವು पु अहंकार, घमंड। ಅಹಂಕಾರ, ಅಭಿಮಾನ, ಗರ್ವ.

**हम**– अव्य भी, आपस में। ಕೂಡ, ಸಹ, ಸಂಗಡ, ಪರಸ್ಪರ. प्रत्य एक प्रत्यय जो साथी या शरीक का अर्थ देता है। ಒಂದು ಪ್ರತ್ಯಯ, ಇದು ಶಬ್ದಗಳಿಗೆ ಹತ್ತುವದರಿಂದ ಸಂಗಡಿಗ ಅಥವಾ ಪಾಲುಗಾರ ಎಂಬ ಅರ್ಥವಾಗುತ್ತದೆ. (ಉದಾ .– हमदर्द)

**हमअसर**– वि समकालीन। ಸಮಕಾಲೀನ.

**हमउम्र**– वि समवयस्क। ಓರಿಗೆಯ, ಒಂದೇ ವಯಸ್ಸಿನ.

**हमज़ात**– वि. सजातीय। ಒಂದೇ ಜಾತಿಯ, ಸಜಾತೀಯ.

**हमजुल्फ**–पु साली का पति। ಷಡ್ಡಕ, ಹೆಂಡತಿಯ ಸಹೋದರಿಯ ಗಂಡ

**हमजोली**–पु समवयस्क, साथी। ಸಮವಯಸ್ಕ, ಓರಿಗೆಯವ, ಒಡನಾಡಿ, ಸಂಗಡಿಗ, ಜೊತೆಗಾರ, ಸಂಗಾತಿ.

**हमता**–पु. अहंकार। ಅಹಂಕಾರ, ಗರ್ವ.

**हमदम**– वि घनिष्ठ मित्र। ಘನಿಷ್ಠ ಮಿತ್ರ, ಜೀವದ ಗೆಳೆಯ

**हमदर्द**– पु सहानुभूति रखनेवाला। ಸಹಾನುಭೂತಿಯುಳ್ಳವ.

**हमदर्दी**– स्त्री सहानुभूति। ಸಹಾನುಭೂತಿ.

**हमदीवार**– वि पड़ोसी। ನೆರೆಯವ.

**हमनाम**– वि एक ही सा नाम रखनेवाला। ಒಂದೇ ಹೆಸರುಳ್ಳ.

**हमपेशा**– वि सहव्यवसायी। ಒಂದೇ ಉದ್ಯೋಗ ಮಾಡುವವ, ಸಹೋದ್ಯೋಗಿ.

**हमराह**–वि साथ चलनेवाला। ಸಂಗಡ ನಡೆಯುವ, ಜೊತೆಯ, ಸಹಚರ.

**हमराही**– स्त्री. साथी। ಜೊತೆಗಾರ,

ಸಹಚರ, ಸಂಗಾತಿ.

**हमल**– पु. भार, गर्भ। ಭಾರ, ಗರ್ಭ, ಬಸುರು.

**हमला**– पु आक्रमण, चढाई, आघात। ಆಕ್ರಮಣ, ದಾಳಿ, ಎರಗುವಿಕೆ, ಆಘಾತ, ಹೊಡೆತ.

**हमवतन**– वि. स्वदेशी। ಸ್ವದೇಶದ, ಸ್ವದೇಶಿ.

**हमवार**–वि समतल। ಸಮತಲವಾದ, ತಗ್ಗುದಿನ್ನೆಗಳಿಲ್ಲದ, ಸವಾಟ, ಚಪ್ಪಟೆಯಾದ.

**हमशीर, हमशीरा**– स्त्री. वहन। ಸಹೋದರಿ, ಅಕ್ಕ ಅಥವಾ ತಂಗಿ

**हमसबक़**– वि. साथ में पढ़नेवाला। ಸಹಪಾಠಿ, ಸಹಾಧ್ಯಾಯಿ.

**हमसर**– वि वरावर का, जोड़ का। ಸರಿಜೋಡಿಯ, ಸಮಾನವಾದ, ಓರಿಗೆಯ.

**हमसरी**– स्त्री वरावरी, समानता। ಸಮಾನತೆ, ಸರಿಜೋಡಿ

**हमसाज़**– पु मित्र, दोस्त। ಮಿತ್ರ, ಗೆಳೆಯ, ಜೊತೆಗಾರ.

**हमसाया**– वि पड़ोसी। ನೆರೆಯವ, ಪಕ್ಕದವ.

**हमसिन**– वि. समवयस्क। ಸಮವಯಸ್ಕ, ಓರಗೆಯ.

**हमहमी**– स्त्री. दे. 'हमाहमी'।

**हमा**– वि कुल, पूरा। ಎಲ್ಲ, ಒಟ್ಟು, ಪೂರ್ಣ, ಸಮಸ್ತ.

**हमादाँ**– वि. सर्वज्ञ। ಸರ್ವಜ್ಞ, ಎಲ್ಲ ಬಲ್ಲವ.

**हमाम**– पु. दे 'हम्माम'।

**हमामदस्ता**– पु. दवा आदि कूटने का लोहे का पात्र। ಕಲ್ಪತ್ತು, ಒರಳು, ಕಲಬತ್ತು.

**हमायल**– स्त्री. वह परतला जो गले में पहना जाता है, गले में पहनी हुयी कोई वस्तु। ಕೊರಳಲ್ಲಿ ಧರಿಸುವ ತೊಗಲಿನ ಪಟ್ಟಿ, ಕತ್ತಿಯ ಬಾರು, ಕೊರಳಲ್ಲಿ ಧರಿಸುವ ವಸ್ತು, ತಾಯಿತದಂತೆ ಕೊರಳಲ್ಲಿ ಧರಿಸುವ ಚಿಕ್ಕ ಕುರಾನ.

**हमारा**– सर्व. 'हम' का संबंध कारक रूप। ನಮ್ಮ.

**हमाहमी**– स्त्री. स्वार्थपरता, अहंकार। ಸ್ವಾರ್ಥಪರತೆ, ಅಹಂಕಾರ.

**हमें**– सर्व. हमको। ನಮಗೆ,ನಮ್ಮನ್ನು.

**हमेल**–स्त्री. एक तरह की माला। ಒಂದು ತರದ ಮಾಲೆ, ಪುತ್ಥಳಿ ಸರ.

**हमेव**– पु अभिमान, अहंकार। ಅಭಿಮಾನ, ಅಹಂಕಾರ.

**हमेशा**–क्रिवि. सर्वदा, नित्य। ಯಾವಾಗಲೂ,ಸದಾ, ನಿತ್ಯ, ಸರ್ವದಾ.

**हमेस**– क्रिवि. दे 'हमेशा'।

**हमैं**– सर्व दे. 'हमें'।

**हम्माम**– पु. स्नानागार। ಸ್ನಾನಗೃಹ, ಜಳಕದ ಮನೆ.

**हम्माल**– पु भार ढोनेवाला, कुली। ಹಮಾಲ, ಕೂಲಿಯವ, ಹೊರೆ ಹೊರುವವ, ಗಂಟು ಹೊತ್ತು

ಒಯ್ಯುವವ.

**हया**– स्त्री लज्जा। ಲಜ್ಜೆ, ನಾಚಿಕೆ, ಸಂಕೋಚ.

**हयात**– स्त्री जीवन। ಜೀವನ,ಬಾಳು.

**हयादार**– वि लज्जाशील । ನಾಚು-ವವ,ನಾಚಿಕೆಪಡುವವ, ಸಂಕೋಚ ಪ್ರವೃತ್ತಿಯು.

**हर**– वि प्रत्येक । ಪ್ರತಿಯೊಂದು, ಒಂದೊಂದು.

**हर**– पु महादेव, अग्नि, गदहा, भाग, हल। ಮಹಾದೇವ, ಶಿವ, ಅಗ್ನಿ, ಕತ್ತೆ, ಭಾಗ, ನೇಗಿಲು. वि छीनने वाला, लूटनेवाला, वाहक। ಕಸಿದು ಕೊಳ್ಳುವವ, ಕೊಳ್ಳೆ ಹೊಡೆಯು ವವ,ದೋಚಿಕೊಳ್ಳುವವ,ವಾಹಕ, ಹೊತ್ತುಕೊಂಡು ಹೋಗುವವ.

**हरएँ**– क्रिवि धीरे से । ಸಾವಕಾಶ-ವಾಗಿ, ಮೆಲ್ಲಗೆ.

**हरकत**– स्त्री. गति, चाल,चेष्टा,नटखट-पन। ಗತಿ,ಚಲನೆ, ಕಾರ್ಯ,ಪ್ರವೃತ್ತಿ, ಪ್ರಯತ್ನ, ತುಂಟತನ.

**हरकना**– सक्रि रोकना, मना करना । ತಡೆ, ನಿಲ್ಲಿಸು, ನಿಷೇಧಿಸು.

**हरकारा**– पु चिट्ठीपत्री ले जानेवाला, डाकिया, दूत । ಕಾಗದ ಪತ್ರ ಒಯ್ಯುವವ, ಓಲೆಕಾರ, ಹರಿಕಾರ, ಅಂಚೆಯಾಳು, ದೂತ.

**हरख**– पु हर्ष। ಹರ್ಷ, ಆನಂದ.

**हरखना**– अक्रि आनंदित होना । ಹರ್ಷಿಸು, ಆನಂದಿತನಾಗು.

**हरखाना**– अक्रि दे 'हरखना'। सक्रि. हरखाना। ಆನಂದಗೊಳಿಸು, ಹಿಗ್ಗಿಸು.

**हरगिज़**– क्रिवि कदापि। ಸುತರಾಂ, ಎಂದಿಗೂ.

**हरचंद**–क्रिवि बहुत। ಬಹಳ,ಅನೇಕ.

**हरज**– पु. पारद। ಪಾರಜ, ಪಾದರಸ.

**हरज, हरजा**– पु नुकसान, उपद्रव, झगडा, बाधा। ಹಾನಿ, ನಷ್ಟ,ಉಪ ದ್ರವ, ಗೊಂದಲ, ಜಗಳ, ಬಾಧೆ, ಅಡ್ಡಿ, ವಿಘ್ನ.

**हरजाई**– वि आवारा, दुश्चरित्र स्त्री । ಪೋಲಿ, ಅಲೆಯುವ, ಒಂದೇಕಡೆಗೆ ನಿಲ್ಲದವ, ಅತ್ತಿತ್ತ ತಿರುಗುವವ, ಹಾದರಗಿತ್ತಿ, ಕೆಟ್ಟನಡತೆಯ ಸ್ತ್ರೀ.

**हरजाना**– पु क्षतिपूर्ति । ಹಾನಿ ತುಂಬುವಿಕೆ, ಕ್ಷತಿಪೂರ್ತಿ, ಪರಿ-ಹಾರ ದ್ರವ್ಯ.

**हरट्ट**– वि हट्टाकट्टा। ಗಟ್ಟಿಮುಟ್ಟ, ಕೊಬ್ಬಿದ, ಬಲಿಷ್ಟ.

**हरण**– पु संहार, नाश लूटना, विभाग करना। ಸಂಹಾರ, ನಾಶ, ಕಸಿದು ಕೊಳ್ಳುವಿಕೆ, ದೋಚಿಕೊಳ್ಳುವಿಕೆ, ಕನ್ನ ಹಾಕುವಿಕೆ,ಭಾಗಮಾಡುವಿಕೆ.

**हरताधर्ता**– पु पूर्ण अधिकारी। ಪೂರ್ಣ ಅಧಿಕಾರವುಳ್ಳವ, ರಕ್ಷಣೆ ಹಾಗೂ ನಾಶವನ್ನು ಮಾಡುವ (ಎರಡೂ) ಅಧಿಕಾರವುಳ್ಳವ.

**हरतार, हरताल**–पु. एक खनिजपदार्थ, हडताल। ಹರಿದಳ, ಹರತಾಳ,

ಮುಷ್ಕರ.
**हरतेज**– पु पारद । ಪಾದರಸ, ಪಾರಜ
**हरदिया**– वि हलदी के रंगका, पीला । ಅರಸಿಣ ಬಣ್ಣದ, ಹಳದಿ.
**हरदी**– स्त्री हलदी । ಅರಸಿಣ.
**हरना**– सक्रि छीनना, लूटना, हटाना, दूर करना । ಕಸಿದುಕೊಳ್ಳು, ಹಿಡಿದುಕೊಳ್ಳು, ಅಪಹರಿಸು, ಸುಲಿದುಕೊಳ್ಳು, ತೆಗೆದುಕೊಳ್ಳು, ನಿವಾರಿಸು, ಬೇರೆ ಮಾಡು, ದೂರು ಮಾಡು. अक्रि थकना, हारना । ದಣಿ, ಶಿಥಿಲವಾಗು, ಸೋಲು. पु. मृग । ಚಿಗರೆ, ಜಿಂಕೆ.
**हरनी**– स्त्री मादा हरिण । ಹೆಣ್ಣು ಜಿಂಕೆ, ಹೆಣ್ಣು ಚಿಗರೆ.
**हरनौटा**– पु हरिण का बच्चा । ಚಿಗರೆಯ ಮರಿ, ಜಿಂಕೆಯ ಮರಿ.
**हरपा**– पु. सुनारों का तराजू रखने का डब्बा । ಅಕ್ಕಸಾಲಿಗರ ತಕ್ಕಡಿ ಇಡುವ ಡಬ್ಬಿ.
**हरफ़**– पु अक्षर । ಅಕ್ಷರ, ವರ್ಣ.
**हरफारेवडी, हरफ़ारयोरी**– स्त्री. एक पेड या उसका फल । ಒಂದು ಗಿಡ ಹಾಗೂ ಅದರ ಹಣ್ಣು.
**हरबर**– क्रिवि शीघ्र । ಕೂಡಲೇ, ಬೇಗನೆ, ಶೀಘ್ರವಾಗಿ.
**हरबराना**– अक्रि. शीघ्रता करना, हडबडाना । ತ್ವರೆ ಮಾಡು, ಗಡಿಬಿಡಿ ಮಾಡು, ಆತುರಗೊಳ್ಳು.
**हरबा**– पु हथियार । ಆಯುಧ, ಶಸ್ತ್ರ.
**हरबोंग**– वि उजड्ड । ದಡ್ಡ. ಹೆಡ್ಡ पु. अंधेर, गंवार, मूर्ख, कुशासन । ಅತ್ಯಾಚಾರ, ಮೂರ್ಖ, ದಡ್ಡ, ಹೆಡ್ಡ, ಗಾವಿಲ, ಕೆಟ್ಟ ಆಳಿಕೆ, ಕುಶಾಸನ
**हरम**– पु अंतःपुर । ಅಂತಃಪುರ. स्त्री रखैल, बीबी । ಉಪಪತ್ನಿ, ಇಟ್ಟುಕೊಂಡವಳು, ಹೆಂಡತಿ, ಪ್ರಿಯಳು
**हरमज़दगी**– स्त्री दुष्टता, पाजीपन । ದುಷ್ಟತನ.
**हरमसरा**– पु अंतःपुर । ಅಂತಃಪುರ.
**हरयाल**– स्त्री दे 'हरियाली'।
**हरवल**– स्त्री. हलवाहो को विना व्याज के दिया हुआ धन । ರೈತರಿಗೆ ಬಡ್ಡಿಯಿಲ್ಲದೆ ಕೊಟ್ಟ ಹಣ. पु सेना का अग्रभाग, अगुआ । ಮುಂದಳ, ಸೈನ್ಯದ ಮುಂಭಾಗ, ಮುಖಂಡ, ನಾಯಕ.
**हरवली**–स्त्री. सेना का नेतृत्व । ಸೈನ್ಯದ ನೇತೃತ್ವ, ಸೈನ್ಯಾಧಿಪತ್ಯ.
**हरवा**– पु. हार । ಹಾರ, ಮಾಲೆ. वि हलका, हरुआ । ಹಗುರಾದ.
**हरवाना**– सक्रि. हराना । ಸೋಲಿಸು. अक्रि. शीघ्रता करना । ಆತುರ ಪಡು, ಗಡಿಬಿಡಿ ಮಾಡು.
**हरवाह, हरवाहा**–पु. हल चलानेवाला । ರೈತ, ಉಳುವವ, ಭೂಮಿ ಸಾಗು ಮಾಡುವವ. ಬೇಸಾಯಗಾರ.
**हरवाही**–स्त्री हरवाहे का काम या उसकी मजदूरी । ಆರಂಭ, ಸಾಗುವಳಿ, ನೇಗಿಲು ಹೊಡೆಯುವ ಕೆಲಸ

ಅಥವಾ ಕೆಲಸದ ಕೂಲಿ

**हरष**–.पु. हर्ष । ಹರ್ಷ, ಆನಂದ, ಸಂತೋಷ.

**हरषना**– अक्रि प्रसन्न होना । ಪ್ರಸನ್ನನಾಗು, ಆನಂದಿತನಾಗು, ಸಂತೋಷಗೊಳ್ಳು.

**हरषाना**– अक्रि दे 'हरषना'। सक्रि प्रसन्न करना । ಹರ್ಷಗೊಳಿಸು, ಆನಂದಪಡಿಸು.

**हरस, हरसा**– पु. दे 'हरिस'।

**हरसिंगार**– पु. परजाता। ಪಾರಿಜಾತ.

**हरहा**– पु. भेड़िया । ತೋಳ. वि हैरान करनेवाला । ವ್ಯಾಕುಲಗೊಳಿಸುವ, ತುಂಟ.

**हरहाई**–स्त्री वह नटखट गाय जो इधर उधर भागती फिरती है । ತುಂಟ ಆಕಳು, ಅತ್ತಿತ್ತ ಓಡಿ ಹೋಗುವ ಆಕಳು.

**हरहार**–पु शिव का हार, सर्प। ಮಹಾದೇವನ ಹಾರ, ಸರ್ಪ.

**हरॉस**– स्त्री हलका ज्वर, भय, दु.ख । ಮಂದ ಜ್ವರ, ಭಯ, ಅಂಜಿಕೆ, ದುಃಖ.

**हरा**–वि. सब्ज, घास या पत्ती के रंग का, प्रसन्न, प्रफुल्ल, कच्चा, ताजा, सजीव । ಹಸುರಾದ, ಹರಿತ, ಹಚ್ಚಗಿರುವ ಹುಲ್ಲು ಬಣ್ಣದ, ಪ್ರಸನ್ನ, ಆನಂದಿತ, ಪ್ರಫುಲ್ಲ, ಪಕ್ವವಾಗದ, ತಾಜಾ, ನವ, ಹೊಸ, ಸಜೀವ. पु. हराचारा, हार। ಹಸಿರು ಮೇವು, ಹಾರ, ಮಾಲೆ स्त्री पार्वतीजी । ಪಾರ್ವತೀದೇವಿ.

**—बाग**– पु मृगतृष्णा । ಮೃಗಜಲ, ವ್ಯರ್ಥವಾದ ಆಶೆ.

**—भरा** वि प्रफुल्ल, नवीन । ಪ್ರಫುಲ್ಲವಾದ,ನಳನಳಿಸುವ, ಕಳಕಳಿಸುವ.

**हराई**– स्त्री हार, हरे होने का भाव या स्थिति । ಸೋಲು, ಸೋಲುವಿಕೆ, ಹಸುರು, ಹಸುರಾಗಿರುವಿಕೆ.

**हराना**– सक्रि परास्त करना, थकाना । ಸೋಲಿಸು, ವಿಫಲ ಪಡಿಸು, ಪರಾಜಯಗೊಳಿಸು, ದಣಿಸು.

**हरापन**–पु हरे होने का भाव। ಹಸುರು, ಹಸುರಾಗಿರುವಿಕೆ.

**हराम**– वि निषिद्ध, अनुचित, बुरा । ನಿಷಿದ್ಧವಾದ, ಅನುಚಿತ, ಕೆಟ್ಟ, ದೂಷಿತ. पु वह वस्तु या बात जिसका धर्म शास्त्रों में निषेध हो, सूअर । ಧರ್ಮ ವಿರುದ್ಧ ಕೆಲಸ, ಅನಾಚಾರ, ಅಧರ್ಮ, ಹಂದಿ.

**—का** = मुफ्तका, जो बेईमानी से प्राप्त हो । ಪುಕ್ಕಟೆಯ, ಅಧರ್ಮದಿಂದ ದೊರಕಿಸಿದ, ಅನಾಚಾರದಿಂದ ಗಳಿಸಿದ.

**हरामकार**– पु व्यभिचारी, लंपट । ವ್ಯಭಿಚಾರಿ, ನಿಷಿದ್ಧ ಕೆಲಸವನ್ನು ಮಾಡುವವ, ಲಂಪಟ.

**हरामकारी**– स्त्री. व्यभिचार । ವ್ಯಭಿಚಾರ, ಹಾದರ, ಪಾಪ.

**हरामख़ोर**– वि पाप की कमाई खाने-

वाला, मुफ्तखोर, निकम्मा। ಪಾಪಾರ್ಜನೆಯಿಂದ ಜೀವಿಸುವವ, ತಿಂದು ತಿರುಗುವವ, ಉಂಡಾಡಿ, ನಿರುದ್ಯೋಗಿ, ಆಲಸಿ.

हरामज़ादा– पु दोगला, दुष्ट। ವರ್ಣಸಂಕರ, ಜಾರಪುತ್ರ, ಹಾದರದ ಮಗ, ದುಷ್ಟ.

हरामज़ादी–स्त्री. दोगली। ಜಾರಪುತ್ರಿ, ಹಾದರದ ಮಗಳು.

हरामी–वि. व्यभिचार से उत्पन्न, दुष्ट। ಹಾದರದಿಂದ ಹುಟ್ಟಿದ, ಜಾರಜ, ದುಷ್ಟ.

हरारत– स्त्री. गर्मी, ताप, हलका ज्वर। ಧಗೆ, ಬೇಗೆ, ಕಾವು, ಮಂದಜ್ವರ.

हरारा– पु. आवेश, जोश, तेजी। ಆವೇಶ, ಹುರುಪು, ತೀವ್ರತೆ.

हरावल– पु सेनाका अग्रभाग, अगुआ। ಸೈನ್ಯದ ಅಗ್ರಭಾಗ, ಮುಂದಳ, ನಾಯಕ.

हरास– पु. ह्रास, दु ख, निराशा, भय। ಹ್ರಾಸ, ಕ್ಷತಿ, ಹಾನಿ, ದುಃಖ, ನಿರಾಶೆ, ಅಂಜಿಕೆ, ಭಯ.

हराहरि– स्त्री. थकावट। ದಣಿವು, ಬೇಸರ.

हरि– पु. विष्णु, इंद्र, अग्नि, बंदर, सूर्य, चंद्र, यम, कोयल, घोड़ा, मोर, सर्प, वायु, किरण, एक संवत्सर। ವಿಷ್ಣು, ಇಂದ್ರ, ಅಗ್ನಿ, ಮಂಗ, ಸೂರ್ಯ, ಚಂದ್ರ, ಯಮ, ಕೋಗಿಲೆ, ಕುದುರೆ, ನವಿಲು, ಸರ್ಪ, ವಾಯು, ಕಿರಣ, ಒಂದು ಛಂದಸ್ಸು

हरिअर– वि हरित, हरा। ಹಚ್ಚಗಿನ, ಹಸುರಾದ.

हरिअरी, हरिआली– स्त्री. हरापन, हरियाली। ಹಚ್ಚಗಿರುವಿಕೆ, ಹಸುರು, ಪೈರು, ಹುಲ್ಲು, ಬೆಳೆ, ಗಿಡಬಳ್ಳಿಗಳು ಮುಂತಾದವುಗಳ ಸಮೂಹ.

हरिचदन– पु. चादनी, एक प्रकार का चंदन, कमल केशर। ಬೆಳದಿಂಗಳು, ಚಂದ್ರಿಕೆ, ಒಂದು ತರದ ಚಂದನ, ಪದ್ಮಪರಾಗ, ಕಮಲ ಕೇಶರ

हरिजाई– स्त्री दे ‘हरजाई’।

हरिजान– पु. गरुड। ಗರುಡ.

हरिण, हरिन–पु. मृग। ಮೃಗ, ಚಿಗರೆ, ಜಿಂಕೆ.

हरिणी, हरिनी– स्त्री. मादा हरिन। ಹೆಣ್ಣು ಚಿಗರೆ, ಹೆಣ್ಣು ಜಿಂಕೆ.

हरित–वि. हरा, बदामी। ಹಸುರಾದ, ಹಚ್ಚಗಿರುವ, ಹಳದಿ, ಬದಾಮೀ ಬಣ್ಣದ. पु सेना, हरियाली, शाक भाजी। ಸೈನ್ಯ, ಸೇನೆ, ಪೈರುಪಚ್ಚೆ, ಸೊಪ್ಪು, ತರಕಾರಿ, ಕಾಯಿಪಲ್ಯ.

हरिद्रा– स्त्री. हल्दी, मंगल, जंगल, सीसा। ಅರಿಶಿಣ, ಮಂಗಲ, ಅರಣ್ಯ, ಕಾಡು, ಸೀಸಕ, ಸೀಸ.

हरिन,हरिनी– दे ‘हरिण’, ‘हरिणी’।

हरियर– वि. दे. ‘हरिअर’।

हरियराना– अकि हरा होना। ಹಸುರಾಗು, ಹಚ್ಚಗಾಗು.

हरियाई– स्त्री. दे. ‘हरियाली’।

हरियान– पु गरुड । ಗರುಡ.

हरियाना– अकि हरा होना । ಹಸು-ರಾಗು, ಹಚ್ಚಗಾಗು

हरियारी, हरियाली– स्त्री. हरे हरे पेड़ पौधों का समूह या विस्तार, हरेपन का विस्तार, हरा चारा । ಹಸುರು ಪೈರು, ಹುಲ್ಲು, ಬೆಳೆ, ಗಿಡಬಳ್ಳಿಗಳು ಮುಂತಾದವುಗಳ ಸಮೂಹ, ಹಚ್ಚಗಿರುವಿಕೆ, ಹಸುರು, ಹಸುರು ಮೇವು.

हरिसौरभ– पु कस्तूरी । ಕಸ್ತೂರಿ.

हरिवाहन– पु गरुड । ಗರುಡ.

हरिस, हरीस– स्त्री हल की वह लकड़ी जिसमें जूआ बांधते हैं । ನೇಗಿಲ ಈಸು.

हरिसिंगार– पु दे 'हरसिंगार' ।

हरीतकी– स्त्री हर्रे । ಅಳಲೆಕಾಯಿ.

हरीफ़– वि शत्रु, दुश्मन, धूर्त, प्रतिद्वंद्वी, समान व्यवसाय करनेवाला । ಶತ್ರು, ವೈರಿ, ಧೂರ್ತ, ಪ್ರತಿದ್ವಂದ್ವಿ, ಸಮವ್ಯವಸಾಯಿ, ಸಮಾನ ಉದ್ಯೋಗ ಮಾಡುವವ.

हरीर–पु रेशम, रेशमी कपड़ा। ರೇಷ್ಮೆ, ರೇಷ್ಮೆ ಬಟ್ಟೆ.

हरीरा– पु एक पेय विशेष । ಒಂದು ತರದ ಪಾಯಸ. वि. हरा, ताजा, आनंदित । ಹಚ್ಚಗಿರುವ, ಹಸು-ರಾದ, ತಾಜಾ, ನವ, ಆನಂದಿತ

हरीरी– वि. रेशमी । ರೇಷ್ಮೆಯ.

हरील– पु. दे 'हरावल' ।

हरुअ, हरुआ–वि हलका। ಹಗುರಾದ.

हरुआना– अकि हलका होना, शीघ्रता करना । ಹಗುರಾಗು, ತ್ವರೆಮಾಡು, ಚಟುವಟಿಕೆ ತೋರು

हरुए– क्रिवि धीरेसे । ನಾವಕಾಶವಾಗಿ, ಮೆಲ್ಲ ಮೆಲ್ಲಗೆ.

हरूफ– पु 'हर्फ' का बहुवचन ।

हरे–पु. हरि शब्द का संबोधन का रूप, हलका । 'ಹರಿ' ಶಬ್ದದ ಸಂಬೋಧನ ರೂಪ, ಹಗುರಾದ. क्रिवि धीरे से । ಸಾವಕಾಶವಾಗಿ, ನಿಧಾನವಾಗಿ

हरेरी– स्त्री दे 'हरियाली' ।

हरेवा– पु हरे रंग की एक चिड़िया । ಹಸುರು ಗಿಳಿ.

हरै हरै–क्रिवि धीरे धीरे । ಸಾವಕಾಶವಾಗಿ, ನಿಧಾನವಾಗಿ, ಮೆತ್ತಗೆ

हरैया– वि हरनेवाला । ಅಪಹರಿಸುವವ, ದೂರ ಮಾಡುವವ.

हरौल– पु दे 'हरावल' ।

हर्ज– पु बाधा, हानि, उपद्रव, झगड़ा । ಅಡ್ಡಿ, ತೊಡಕು, ಅಡಚಣೆ,ಬಾಧೆ, ಕುಂದು,ಹಾನಿ, ನಷ್ಟ, ಉಪದ್ರವ, ಜಗಳ.

हर्ता, हर्तार– पु हरण करनेवाला, संहारक । ಅಪಹರಿಸುವವ, ನಾಶ ಮಾಡುವವ, ಸಂಹರಿಸುವವ.

हर्फ– पु अक्षर । ಅಕ್ಷರ.

हर्म्य– पु राजभवन । ರಾಜಭವನ, ಪ್ರಾಸಾದ, ಅರಮನೆ.

हर्रै– स्त्री. दे 'हड़'।

हर्ष– पु आनंद, प्रफुल्लता। ಆನಂದ, ಹರ್ಷ, ಸಂತೋಷ.

हर्षक– वि आनंद देनेवाला। ಆನಂದಿಸುವ, ಹರ್ಷಿಸುವ.

हर्षाना– अक्रि. प्रसन्न होना। ಪ್ರಸನ್ನನಾಗು, ಆನಂದಿತನಾಗು. सक्रि. अनंदित करना। ಹರ್ಷಗೊಳಿಸು, ಪ್ರಸನ್ನ ಮಾಡು.

हर्षित–वि. आनंदित,प्रसन्न। ಆನಂದಿತ, ಪ್ರಸನ್ನ.

हल–पु. खेत जोतने का यंत्र। ನೇಗಿಲು.

—जोतना= हल चलाना, खेती करना। ಹರಗು, ಉಳು, ಸಾಗು ಮಾಡು.

हल–पु. समस्या की मीमामा या निराकरण, कठिग कार्य को सरल करना, धुलना, उत्तर निकालना। ಸಮಸ್ಯೆ ಬಿಡಿಸುವಿಕೆ,ಒಗಟು ಒಡೆಯುವಿಕೆ, ಕಠಿಣ ಕಾರ್ಯವನ್ನು ಸುಲಭ ಮಾಡುವಿಕೆ, ಕರಗುವಿಕೆ, ಉತ್ತರ ತೆಗೆಯುವಿಕೆ.

हलकंप– पु. व्याकुलता, हलचल। ವ್ಯಾಕುಲತೆ, ಗಾಬರಿ, ಗದ್ದಲ, ಧಾಂಧಲೆ.

हलक– पु. कंठ। ಕಂಠ, ಕುತ್ತಿಗೆ, ಗಂಟಲುನಾಳ.

हलकई– स्त्री. हलकापन, तुच्छता। ಕ್ಷುದ್ರತನ, ಲಘುತ್ವ, ತುಚ್ಛತೆ, ಹಗುರತನ.

हलकना– अक्रि हिलना, लहराना। ಅಲ್ಲಾಡು,ಅಲುಗಾಡು, ತುಳುಕು, ತೆರೆಗಳೇಳು.

हलका–वि. कम वजनका, पतला, छोटा, ओछा, जो कठिग न हो, महीन, घटिया, मंद। ಹಗುರಾದ, ತೆಳುವಾದ,ಚಿಕ್ಕ, ನಣ್ಣ, ಕ್ಷುದ್ರ,ಹೀನ, ನೀಚ, ಸುಲಭ, ಸರಳವಾದ,ಸಯವಾದ, ಕಡಿಮೆಯಾದ, ಕೀಳು ತರದ.

—करना = अपमानित करना। ಅಪಮಾನ ಮಾಡು

हलकाई– स्त्री हलकापन, ओछापन। ಕ್ಷುದ್ರತನ, ಹಗುರುತನ, ಲಘುತ್ವ, ತುಚ್ಛತೆ, ನೀಚತನ.

हलकान– वि. द 'हैरान'।

हलकाना–सक्रि हिलोरा देना, हिलाना, बोझ कम करना। ಅಲೆ ಎಬ್ಬಿಸು, ತೆರೆ ಎಬ್ಬಿಸು, ಅಲ್ಲಾಡಿಸು, ಹಗುರು ಮಾಡು. अक्रि वजन कम होना। ಹಗುರಾಗು, ಲಘುವಾಗು.

हलकापन– पु हलका होने का भाव, ओछापन, अप्रतिष्ठा, नीचता। ಹಗುರುತನ, ಕ್ಷುದ್ರತನ, ಅಪಮಾನ, ನೀಚತನ

हलकारा– पु दे. 'हरकारा'।

हलकोरा– पु. तरंग, पानी की लहर। ಅಲೆ, ತೆರೆ, ತರಂಗ.

हलचल– स्त्री. अधीरता, व्यग्रता, घबड़ाहट, खलबली, कप। ಅಧೀರತೆ, ಗಾಬರಿ, ಗೊಂದಲ, ಗಡಿಬಿಡಿ,

ವ್ಯಗ್ರತೆ, ಚಳವಳಿ, ಆಂದೋಲನ, ಅಲ್ಲೋಲಕಲ್ಲೋಲ, ದಾಂಧಲೆ, ಉಪದ್ರವ, ಕಂಪನ, ನಡುಕ.

**हलगी**— स्त्री हलदी । ಅರಿಶಿಣ

**हलजीवी**-- वि किसान । ಒಕ್ಕಲಿಗ, ನೇಗಿಲ ಹೊಡೆದು ಹೊಲ ಸಾಗು ಮಾಡಿ ಜೀವಿಸುವವ.

**हलजुता**— पु. तुच्छ किसान, गँवार । ಹೀನ ಒಕ್ಕಲಿಗ, ಹೆಡ್ಡ, ಮಂಕ.

**हलद, हलदी**— स्त्री हरिद्रा। ಅರಿಶಿಣ.

**हलधर**— पु बलराम, किसान । ಬಲರಾಮ, ಒಕ್ಕಲಿಗ.

**हलना**— अक्रि हिलना, घुसना। ಅಲ್ಲಾಡು, ತೂಗಾಡು, ಹೋಗು, ಒಳ ನೇರು, ನುಸುಳು.

**हलपाणि**-- पु बलरामजी। ಬಲರಾಮ.

**हलफ़**— पु सौगंध । ಆಣೆ, ಶಪಥ, ಪ್ರತಿಜ್ಞೆ.

**हलफनामा**— पु शपथ के साथ लिखा हुआ कागज । ಪ್ರತಿಜ್ಞಾಪತ್ರ.

**हलफ़न्**— क्रिवि शपथपूर्वक। ಪ್ರತಿಜ್ಞಾಪೂರ್ವಕ, ಆಣೆಮಾಡಿ.

**हलफा**— पु हिलोरा, लहर। ಅಲೆ,ತೆರೆ.

**हलबस**— पु दे. 'हलचल'।

**हलबलाना**— अक्रि. घबराना । ಗಾಬರಿಯಾಗು,ವ್ಯಾಕುಲನಾಗು,ಕಂಗೆಡು. सक्रि दूसरे को घबराहट में डालना। ಗಾಬರಿಗೊಳಿಸು,ಕಳವಳಗೊಳಿಸು, ವ್ಯಾಕುಲಗೊಳಿಸು, ಕಂಗೆಡಿಸು.

**हलभल, हलभली**— स्त्री. हलचल, घबराहट, हड़बड़ी । ಗೊಂದಲ, ಸಡಗರ, ಆಂದೋಲನ, ಗಾಬರಿ, ತ್ವರೆ, ಅವಸರ, ಗಡಿಬಿಡಿ.

**हलमुख**— पु हल का फार । ನೇಗಿಲ ಹಲ್ಲು.

**हलराना**—सक्रि हिलाना, डुलाना, प्यार से हाथपर झुलाना। ಕೈಯಲ್ಲಿ ಹಿಡಿದು ಪ್ರೀತಿಯಿಂದ ಅಲ್ಲಾಡಿಸು, ಮುದ್ದಾಡು, ಕೈಯಲ್ಲಿ ಹಿಡಿದು ತೂಗಾಡಿಸು.

**हलवत**— स्त्री. वर्ष में प्रथम बार खेत मे हल ले जाने की रस्म । ವರ್ಷದಲ್ಲಿ ಮೊದಲುಬಾರಿ ಹೊಲಕ್ಕೆ ನೇಗಿಲು ಒಯ್ಯುವ ಪದ್ಧತಿ.

**हलवा**— पु हलुवा । ಹಲ್ವ, ಒಂದು ಪ್ರಸಿದ್ಧ ಮಿಠಾಯಿ.

**हलवाइन**— स्त्री हलवाई की स्त्री । ಮಿಠಾಯಿಗಾರತಿ, ಮಿಠಾಯಿಗಾರನ ಹೆಂಡತಿ.

**हलवाई**— पु. मिठाई बनाने और बेचने वाला । ಮಿಠಾಯಿಗಾರ, ಮಿಠಾಯಿ ತಯಾರಿಸುವವ, ಮಿಠಾಯಿ ಮಾರುವವ.

**हलवाह, हलवाहा**—पु हल चलानेवाला, हल चलाने का काम करनेवाला मजदूर या नौकर । ಕೃಷಿವಲ,ರೈತ, ಆರಂಬಗಾರ, ಬೇಸಾಯಗಾರ, ನೇಗಿಲು ಹೊಡೆಯುವ ಆಳು.

**हलहलाना**— सक्रि कँपाना, हिलाना । ಅಲ್ಲಾಡಿಸು, ತುಳುಕಾಡಿಸು, ನಡು

ಗಿಸು, ಕುಲುಕು.

**हला**– स्त्री. सखी, पृथ्वी, जल। ಗೆಳತಿ, ಪೃಥ್ವಿ, ನೀರು, ಜಲ.

**हलाक**– वि मारा हुआ, विनष्ट, थका हुआ। ಕೊಲ್ಲಲ್ಪಟ್ಟ, ವಧೆಯಾದ, ಹಾಳಾದ, ವಿನಷ್ಟ, ದಣಿದ, ಶಿಥಿಲ ವಾದ.

**हलाकत**–स्त्री. विनाश, मृत्यु। ವಿನಾಶ, ವಧೆ, ಮೃತ್ಯು, ಸಾವು.

**हलाकान**–वि. हैरान,परेशान। ಕಂಗೆಟ್ಟ, ವ್ಯಾಕುಲಗೊಂಡ, ವ್ಯಗ್ರ.

**हलाकानी**– स्त्री परेशानी, व्यग्रता। ವ್ಯಾಕುಲತೆ, ವ್ಯಗ್ರತೆ, ಕಂಗೆಡಿಕೆ.

**हलाकी**– स्त्री दे. 'हलाकत'।

**हलाकू**–वि वध करनेवाला। ಕೊಲ್ಲುವ, ವಧೆ ಮಾಡುವ, ಹೊಡೆಯುವ, ನಾಶಕ.

**हलाभला**– पु निर्णय। ನಿರ್ಣಯ, ತೀರ್ಪು, ತೀರ್ಮಾನ,ಮುಕ್ತಾಯ.

**हलाल**– वि धर्मसंगत। ಧರ್ಮಸಂಗತ ವಾದ, ಯೋಗ್ಯವಾದ, ನ್ಯಾಯ ವಾದ. पु. वह पशु जिसका मास खाने की मुसलमानी धर्म पुस्तक में आज्ञा हो। ಮುಸಲ್ಮಾನೀ ಧರ್ಮದ ಅನುಸಾರವಾಗಿ ಯಾವ ಪಶುವಿನ ಮಾಂಸವು ತಿನ್ನಲು ಯೋಗ್ಯವಾಗಿ ರುವದೋ ಆ ಪಶು.

—करना = पशु को धीरे धीरे गला घोट कर मारना। ಮುಸಲ್ಮಾನೀ ಧರ್ಮದ ಅನುಸಾರವಾಗಿ ತಿನ್ನಲು ಪಶುವನ್ನು ಸಾವಕಾಶವಾಗಿ ಕುತ್ತಿಗೆ ಒತ್ತಿ ಕೊಲ್ಲುವದು.

**हलालखोर**–पु मेहनत की कमाई खाने वाला, भंगी। ಪರಿಶ್ರಮ ಮಾಡಿ ಹೊಟ್ಟೆ ತುಂಬಿಕೊಳ್ಳುವವ, ಪಾಡು ಪಟ್ಟು ಕೆಲಸ ಮಾಡಿ ಗಳಿಸುವವ, ಭಂಗಿ, ಜಲಗಾರ.

**हलालखोरिन**– स्त्री. हलालखोर की स्त्री। ಭಂಗಿಯ ಹೆಂಡತಿ, ಜಲಗಾರತಿ.

**हलाहल**– पु. समुद्रमंथन के समय निकाला हुआ प्रचंड विष। ಸಮುದ್ರ ಮಂಥನದ ಕಾಲಕ್ಕೆ ಹುಟ್ಟಿದ ಪ್ರಖರವಾದ ವಿಷ.

**हली**– पु. बलराम। ಬಲರಾಮ.

**हलीम**– वि सहनशील, कोमल और गंभीर स्वभाववाला। ಸಹನಶೀಲ, ಸಾತ್ವಿಕ ಸ್ವಭಾವದ, ಗಂಭೀರ ಹಾಗೂ ಕೋಮಲ ಸ್ವಭಾವದ.

**हलुआ,हलुवा**– पु मोहनभोग। ಹಲ್ವ.

**हलुका**– वि. दे 'हलका'।

**हलोर**– स्त्री. हलोरा–पु लहर, हिलोर। ಅಲೆ, ತರಂಗ, ತೆರೆ.

**हलोरना**– सकि हिलाना, डुलाना, मथना, अन्न को फटकना। ಅಲ್ಲಾಡಿಸು, ಅಲೆ ಎಬ್ಬಿಸು, ಮಥಿಸು, ಕಡೆ, ತೇರು, ಸಾಣಿಸು.

**हलोरा**– पु. दे. 'हलोर'।

**हल्ला**– पु हमला, शोरगुल, कोलाहल, चिल्लाहट। ಆಕ್ರಮಣ, ದಾಳಿ, ಗದ್ದಲ, ಕೋಲಾಹಲ, ಕೂಗಾಟ,

ಚೀರಾಟ, ಬೊಬ್ಬೆ, ಒದರಾಟ.

हवन– पु होम, आहुति । ಹೋಮ, ಆಹುತಿ.

हवनी–स्त्री. होमकुंड । ಹೋಮಕುಂಡ.

हवलदार– पु. एक फौजी या मुल्की नौकर । ಸೈನ್ಯದ ಅಥವಾ ಮುಲ್ಕೀ ಉದ್ಯೋಗಸ್ಥ.

हवस– स्त्री कामना, तृष्णा । ಆಶೆ, ಬಯಕೆ, ತೃಷ್ಣೆ.

हवा–स्त्री वायु । ಗಾಳಿ,ವಾಯು,ಹವೆ

—खाना = टहलना, विफल होना । ತಿರುಗಾಡು, ಅಡ್ಡಾಡು, ವಿಫಲ-ನಾಗು

—से बातें करना= बहुत तेज दौडना । ಬಹಳ ವೇಗವಾಗಿ ಓಡು.

—हो जाना = भाग जाना या गायब हो जाना । ಓಡಿಹೋಗು, ಮಾಯವಾಗು.

हवाई– वि हवा में उड़नेवाला, बेवुनियाद । ಗಾಳಿಯ, ವಾಯುವಿನ, ಗಾಳಿಯಲ್ಲಿ ಹಾರಾಡುವ, ತಳಹದಿ ಇಲ್ಲದ. स्त्री. एक आतशबाजी । ಒಂದು ತರದ ಬಾಣ ಬಿರುಸು, ಒಂದು ತರದ ಮದ್ದು, ಆಕಾಶ ಬಾಣ **मुँहपर हवाइयाँ उड़ना**= भय, शोक या अपमान के कारण चेहरा फीका पड़ जाना । ಭಯ, ಶೋಕ ಅಥವಾ ಅಪಮಾನದ ಕಾರಣದಿಂದ ಮುಖ ಕಳೆಗುಂದು, ವಿವರ್ಣವಾಗು.

हवाई जहाज़–पु वायुयान । ವಿಮಾನ, ಏರೋಪ್ಲೇನ್.

हवादार– वि जिसमे हवा आती हो । ಗಾಳಿಯಾಡುವ, ಗಾಳಿಯುಳ್ಳ.

हवाल– पु दे 'अहवाल'।

हवालदार– पु दे. 'हवलदार'।

हवाला– पु उल्लेख, उदाहरण, दृष्टांत, सुपुर्दगी, अधिकार । ಉಲ್ಲೇಖ, ಉದಾಹರಣೆ, ಉದ್ಧೃತ ವಾಕ್ಯ, ಆಧಾರ, ದೃಷ್ಟಾಂತ, ಒಪ್ಪಿಸುವಿಕೆ, ಅಧಿಕಾರ, ವಶ.

**(किसीके) हवाले करना** = सौंपना । ಒಪ್ಪಿಸು, ವಶಕ್ಕೆ ಕೊಡು.

हवालात– स्त्री नजरवंदी, अभियुक्त की वह सादा कैद जो मुकदमा चलाने के पहले दी जाती है, ऐसे अभियुक्तो को रखने का मकान । ಕಾವಲು, ನಜರುಬಂದಿ, ಕಾವಲಿನಲ್ಲಿಡುವಿಕೆ, ವಿಚಾರಣೆಯ ಮುಂಚೆ ಬಂಧನದಲ್ಲಿರಿಸುವಿಕೆ, ಸೆರೆಮನೆ.

हवास–पु इंद्रिय, होश, ज्ञान। ಇಂದ್ರಿಯ, ಎಚ್ಚರ, ಜ್ಞಾನ, ಸಂವೇದನೆ.

हवि– पु वह द्रव्य जिस की आहुति अग्नि में दी जावे । ಹೋಮದ ವಸ್ತು.

हवेली– स्त्री पक्का बडा मकान, पत्नी, स्त्री । ಭವನ, ಅರಮನೆ, ಹರ್ಮ್ಯ, ಸೌಧ, ಪತ್ನಿ, ಸ್ತ್ರೀ, ಹೆಂಡತಿ.

हशामत– स्त्री बडाई, ऐश्वर्य, विभूति । ದೊಡ್ಡಿಸ್ತಿಕೆ, ಮಹತ್ವ, ಗೌರವ,

ಐಶ್ವರ್ಯ, ವೈಭವ, ವಿಭೂತಿ.

हसद– स्त्री. डाह । ಅಸೂಯೆ, ದ್ವೇಷ, ಮತ್ಸರ, ಹಗೆ.

हसन– वि अच्छा, उत्तम । ಒಳ್ಳೆಯ, ಉತ್ತಮವಾದ. पु. उत्तमता, भलाई, सौंदर्य । ಉತ್ಕೃಷ್ಟತೆ, ಒಳ್ಳೆಯದು, ಕಲ್ಯಾಣ, ಸೌಂದರ್ಯ

हसन– पु. परिहास । ಪರಿಹಾಸ, ನಗೆಚಾಟಿಕೆ, ಗೇಲಿ.

हसरत– स्त्री अफसोस, दुख, कामना, लालसा । ದುಃಖ, ವ್ಯಸನ, ಬಯಕೆ, ಇಚ್ಛೆ.

हसीन–वि. खूबसूरत, सुंदर । ಸುಂದರ, ಚೆಲುವ.

हस्त– पु. हाथ, कर, सूंड । ಕೈ, ಹಸ್ತ, ಕರ, ಸೊಂಡಿಲು.

हस्तकौशल– पु. हाथ से काम करने की निपुणता, कारीगरी । ಹಸ್ತಕೌಶಲ್ಯ, ಶಿಲ್ಪ, ಕೈಕೆಲಸ.

हस्तक्षेप–पु किसी काम मे हाथ डालना । ಯಾವದೊಂದು ಕೆಲಸದಲ್ಲಿ ಕೈ ಹಾಕುವಿಕೆ, ಹಸ್ತಕ್ಷೇಪ.

हस्तगत– वि. प्राप्त । ಪ್ರಾಪ್ತ, ಕೈಗೆ ಬಂದ, ದೊರೆತ.

हस्तलिपि– स्त्री हाथ की लिखावट । ಕೈಬರಹ.

हस्ताक्षर– पु. दस्तखत । ಕೈಬರಹ, ಸಹಿ, ರುಜು.

हस्ती– स्त्री. अस्तित्व, जीवन, संपत्ति । ಅಸ್ತಿತ್ವ, ಇರುವಿಕೆ, ಜೀವನ, ಸಂಪತ್ತು.

हस्ती– पु हाथी । ಆನೆ.

हस्ब–क्रिवि. अनुसार । ಅನುಸಾರವಾಗಿ.

हहर– स्त्री. कँपकँपी, डर । ನಡುಕ, ಭಯ, ಅಂಜಿಕೆ.

हहरना–अक्रि. कांपना, डरना, चौंकना । ನಡುಗು, ಅಂಜು, ಭಯಪಡು, ಗಾಬರಿಗೊಳ್ಳು, ಬೆರಗಾಗು, ಬೆಚ್ಚು.

हहराना– सक्रि कँपाना, डराना । ನಡುಗಿಸು, ಹೆದರಿಸು. अक्रि दे 'हहरना'।

हहलना– अक्रि दे 'हहरना'।

हहलाना– सक्रि. दे. 'हहराना'।

हहा– स्त्री विनयसूचक शब्द, विनती, हँसने का शब्द, ठट्ठा । ವಿನಯ ಸೂಚಕ ಶಬ್ದ, ವಿನಂತಿ, ದೈನ್ಯ, ನಗುವಿಕೆ.

हाँ–अव्य. स्वीकृति अथवा सम्मति सूचक शब्द । ಹೌದು, ಸೈ, ಹೂ, ಅಹುದು.

हाँक– स्त्री. टेर, पुकारने का शब्द, ललकार, गर्जन, दुहाई । ಕೂಗುವಿಕೆ, ಒದರುವಿಕೆ, ಕೂಗಿ ಕರೆಯುವ ಶಬ್ದ, ಕರೆಯುವಿಕೆ, ಯುದ್ಧಕ್ಕೆ ಕರೆಯುವಿಕೆ, ಗರ್ಜನೆ, ಕೇಕೆ, ಸಹಾಯಕ್ಕೆ ಕರೆಯುವಿಕೆ.

हाँकना–सक्रि. हटाना, खदेड़ना, चलाना, चिल्लाकर पुकारना, ललकारना, पंखा झलना । ಅಟ್ಟು, ಓಡಿಸು, ತರುಬು, ಕೂಗು, ಕರೆ, ಯುದ್ಧಕ್ಕೆ ಕರೆ, ಆಹ್ವಾನಿಸು, ಕೇಕೆ ಹಾಕು, ಬೀಸ-

ಣಿಕೆ ಬೀಸು, ಬೀಸಣಿಕೆಯಿಂದ ಗಾಳಿ ಹಾಕು.

हाँका– पु. टेर, ललकार, गर्जन, हॉकने की क्रिया । ಕೂಗು, ಆಹ್ವಾನ, ಗರ್ಜನೆ, ಕೇಕೆ, ಅಟ್ಟುವಿಕೆ, ಹೊಡೆಯುವಿಕೆ.

हाँगी– स्त्री. स्वीकृति । ಸ್ವೀಕೃತಿ, ಹೂಗುಟ್ಟುವಿಕೆ.

हाँडना–अक्रि व्यर्थ इधर उधर घूमना। ಅಲೆದಾಡು,ವ್ಯರ್ಥವಾಗಿ ತಿರುಗಾಡು.

हॉडी– स्त्री दे 'हँडी'।

हाँता– वि परित्यक्त, छोडा हुआ । ಪರಿತ್ಯಕ್ತ, ಬಿಟ್ಟ, ದೂರೀಕರಿಸಿದ.

हाँपना, हॉफना– अक्रि दौडने आदि के कारण सास का वेग से चलना । ತೇಕು, ಏದು, ಮೇಲುಸಿರು ಬಿಡು.

हॉफा–पु हॉफी– स्त्री. हॉफने की क्रिया या भाव। ತೇಕುವಿಕೆ, ಏದುವಿಕೆ, ಮೇಲುಸಿರು.

हाँसल– पु. एक तरह का घोड़ा । ಒಂದು ತರದ ಕುದುರೆ.

हाँसी– स्त्री. हँसी, मजाक, निंदा, बदनामी। ನಗೆಚಾಟಿಕೆ, ವಿನೋದ, ಗೇಲಿ, ನಿಂದೆ, ಉಪಹಾಸ, ಅಪಕೀರ್ತಿ.

हाँ हॉ– अव्य निषेध सूचक शब्द । ನಿಷೇಧ ಸೂಚಕ ಶಬ್ದ.

हा, हाइ– स्त्री. पीडायुक्त ध्वनि । ತ್ರಾಸದ ಧ್ವನಿ, ಕ್ರಂದನ, ಅಳು.

हाई– स्त्री. हालत, तरीका, ढंग। ಸ್ಥಿತಿ, ರೀತಿ, ಬಗೆ, ತರಹ.

हाऊ– पु वच्चो को डराने का शब्द, बावा, हौवा। ಮಕ್ಕಳನ್ನು ಅಂಜಿಸುವ ಶಬ್ದ, ಸೃಷ್ಟಿಯ ಆದಿ ಸ್ತ್ರೀ

हाकिम– पु शासक, वडा अफसर । ಶಾಸಕ, ಆಳುವವ, ದೊರೆ, ದೊಡ್ಡ ಅಧಿಕಾರಿ

हाकिमी–स्त्री. शासन, हाकिम का काम। ಶಾಸನ, ಆಳಿಕೆ, ಅಧಿಕಾರ,ಆಳುವ ಕೆಲಸ. वि हाकिम या शासन संवंधी। ಶಾಸಕನ ಅಥವಾ ಶಾಸನ ಸಂಬಂಧದ.

हाजत– स्त्री हवालात, मलत्याग करना, इच्छा, ख्वाहिश । ಬಂಧನದಲ್ಲಿರಿಸುವಿಕೆ, ನಜರು ಬಂದಿ, ಬಂಧನ, ಮಲತ್ಯಾಗ, ಇಚ್ಛೆ, ಅಭಿಲಾಷೆ, ಬಯಕೆ.

हाज़मा–पु. पाचनशक्ति। ಪಚನಶಕ್ತಿ.

हाज़िक– वि. प्रवीण, दक्ष । ಪ್ರವೀಣ, ಬುದ್ಧಿವಂತ, ದಕ್ಷ.

हाज़िम– वि. पचानेवाला, पाचक । ಅರಗಿಸುವ, ಪಚನ ಮಾಡುವ, ಪಾಚಕ.

हाज़िमा– पु दे. 'हाजमा'।

हाज़िर– वि उपस्थित, तैयार। ಉಪಸ್ಥಿತ, ಹಾಜರಿರುವ, ಮುಂದಿರುವ, ವಿದ್ಯಮಾನ, ಸಿದ್ಧವಾದ, ತಯಾರಾದ.

हाज़िरजवाब– वि वात का अच्छा जवाव देनेमें होशियार। ಬೇಗನೆ

ಉತ್ತರಕೊಡುವದರಲ್ಲಿ ನಿಪುಣ.

हाज़िरी– स्त्री उपस्थिति, अंगरेजों का दोपहर के समय का भोजन। ಮುಂದೆ ಇರುವಿಕೆ, ಉಪಸ್ಥಿತಿ, ಹಾಜರಿ, ಇಂಗ್ಲಿಷರ ಮಧ್ಯಾಹ್ನದ ಊಟ.

हाजी– पु निंदक, नक्काल, वह जो हाज कर आया हो। ನಿಂದಕ, ನಿಂದಿಸುವವ, ನಕಲಿಯುವ, ಮಕ್ಕಾನಗರಕ್ಕೆ ತೀರ್ಥಯಾತ್ರೆಗಾಗಿ ಹೋಗಿಬಂದವ.

हाट– स्त्री दूकान, बाजार लगने का दिन। ಅಂಗಡಿ, ಪೇಟೆ, ಸಂತೆ, ಸಂತೆಯದಿನ

हाटक– पु सुवर्ण। ಸುವರ್ಣ, ಬಂಗಾರ.

हाड– स्त्री. अस्थि, कुलीनता। ಎಲುವು, ಎಲುಬು, ಅಸ್ಥಿ, ಕುಲೀನತೆ.

हाडा– पु दे 'हड्डा'।

हाता–पु घिरी हुई जगह, घेरा। ಆವರಿಸಿದ ಸ್ಥಳ, ಬೇಲಿ ಹಾಕಿದ ಪ್ರದೇಶ, ಗೋಡೆಯಿಂದ ಸುತ್ತುಗಟ್ಟಿದ ಪ್ರದೇಶ, ವರ್ತುಲ, ಮಂಡಲ. वि. त्यागा हुआ। ತ್ಯಜಿಸಿದ, ತೆಗೆದೊಗೆದ, ಬಿಟ್ಟ, ತೊರೆದ.

हातिफ–पु. आकाशवाणी, पुकारनेवाला। ಆಕಾಶವಾಣಿ, ಕರೆಯುವವ, ಕೂಗುವವ.

हातिम– वि कुशल, दाता, उदार। ಕುಶಲ, ನಿಪುಣ, ಉದಾರ, ಕೊಡುಗೈ, ದಾನಶೀಲ.

हाथ– पु. कर। ಕೈ, ಕರ, ಹಸ್ತ.

—आना = प्राप्त होना। ಸಿಗು, ದೊರೆ, ಪ್ರಾಪ್ತವಾಗು.

—उठाना = मारना, अभिवादन करना। ಹೊಡೆ, ಬಡಿ, ನಮಸ್ಕರಿಸು

—ऊंचा होना = दान देने में उद्यत होना। ದಾನ ಕೊಡಲು ಪ್ರವೃತ್ತನಾಗು.

—कट जाना = असहाय हो जाना। ಅಸಹಾಯನಾಗು, ನಿಸ್ಸಹಾಯಕನಾಗು.

—का सच्चा = प्रामाणिक, निशानेबाज। ಪ್ರಾಮಾಣಿಕ, ವಿಶ್ವಾಸಿಕ, ಗುರಿ ಹಿಡಿಯುವವ.

—की मैल = तुच्छ वस्तु। ತುಚ್ಛ ವಸ್ತು.

—खाली होना = धनहीन होना। ಕೈ ಬರಿದಾಗು, ಹಣವಿಲ್ಲದಾಗು, ನಿರ್ಧನನಾಗು.

—खींच लेना = देना बंद कर देना, अलग हो जाना। ಕೊಡುವದನ್ನು ನಿಲ್ಲಿಸು, ಬೇರೆಯಾಗು

—जमना = अभ्यास होना। ಅಭ್ಯಾಸವಾಗು, ರೂಢಿಯಾಗು.

—जोडना = प्रणाम करना। ನಮಸ್ಕರಿಸು.

—धोना = खो देना। ಕಳಕೊಳ್ಳು.

—धोकर पीछे पडना = जी जान से लग जाना। ತನುಮನಗಳಿಂದ ಕೆಲಸದಲ್ಲಿ ತೊಡಗು.

—पकड़ना = सहारा देना, विवाह करना। ಆಶ್ರಯ ಕೊಡು, ಕೈಹಿಡಿ,

ಪಾಣಿಗ್ರಹಣ ಮಾಡು, ಮದುವೆ ಯಾಗು

—पर हाथ धरे बैठना = निठल्ले बैठना। ನಿರುದ್ಯೋಗಿಯಾಗಿರು, ಯಾವ ಕೆಲಸವನ್ನೂ ಮಾಡದಿರು.

—पसारना या फैलाना = याचना करना। ಕೈಯೊಡ್ಡು, ಬೇಡು, ಯಾಚಿಸು.

—पांव फूलना = व्यग्र होना। ವ್ಯಾಕುಲಗೊಳ್ಳು, ಗಾಬರಿಯಾಗು.

—पांव हिलाना = मेहनत करना। ಪರಿಶ್ರಮ ಮಾಡು, ಕಷ್ಟಪಡು.

—फेरना = हड़प लेना। ನುಂಗಿಬಿಡು, ಎತ್ತಿಹಾಕು, ಕಳವು ಮಾಡು.

—मलना = पछताना। ಪಶ್ಚಾತ್ತಾಪ ಪಡು.

—मारना या साफ करना= चुरा लेना, लूटना। ಕಳವು ಮಾಡು, ಎತ್ತಿ ಹಾಕು, ಸುಲಿದುಕೊಳ್ಳು.

—में होना = वश में होना। ಅಧೀನವಾಗಿರು, ವಶದಲ್ಲಿರು.

—रंगना = उत्कोच लेना। ಲಂಚ ತೆಗೆದುಕೊಳ್ಳು.

—लगना = प्राप्त होना। ಸಿಗು, ದೊರಕು,ಪ್ರಾಪ್ತವಾಗು, ಕೈಸೇರು.

—लगाना=आरभ करना। ಕೈಹಚ್ಚು, ಕೆಲಸ ಆರಂಭಿಸು.

हाथों हाथ = देखते देखते, साथ साथ। ನೋಡು ನೋಡುವಷ್ಟರಲ್ಲಿ, ಕೂಡಲೆ, ತ್ವರೆಯಿಂದ.

हाथों हाथ लेना=आदर किया जाना। ಆದರಿಸು, ಆದರದಿಂದ ಬರಮಾಡಿಕೊಳ್ಳು.

हाथकंडा– पु. दे 'हथकंडा'।

हाथगान, हाथफूल– पु एक आभूषण। ಮೇಲುಗೈಯಲ್ಲಿ ಧರಿಸುವ ಒಂದು ಆಭರಣ.

हाथा– पु मूठ, पंजे की छाप का चिह्न। ಹಿಡಿ, ಕಾವು, ಹಿಡಿಕೆ, ಕೈಯ ಚಿಹ್ನೆ, ಕೈಬೆರಳಿನ ಗುರುತು.

हाथापाई, हाथाबांही– स्त्री मुठभेड़, धौलधप्पड़। ಕೈ ಕೈ ಹತ್ತುವಿಕೆ, ಹೊಡೆದಾಟ, ಮಾರಾಮಾರಿ, ಗುದ್ದಾಟ.

हाथी– पु हस्ती। ಆನೆ, ಹಸ್ತಿ, ಗಜ. स्त्री हाथका अवलंबन। ಕೈಯ ಆಧಾರ.

हाथीख़ाना– पु हाथी बाधनेका स्थान। ಗಜಶಾಲೆ.

हाथीदांत– पु हस्तिदंत। ಹಸ್ತಿದಂತ, ಆನೆಯ ಕೋರೆ ಹಲ್ಲು.

हाथीनाल– स्त्री. एक तरह की पुराने चाल की तोप। ಆನೆಯ ಮೇಲೆ ಹೇರುವ ಒಂದು ತರದ ಹಳೆಯ ಪದ್ಧತಿಯ ತೋಪು.

हाथीपांव– पु 'फीलपाव' नामक रोग। ಆನೆಗಾಲು, ಒಂದು ರೋಗ.

हाथीवान– पु महावत। ಮಾವುತ, ಮಾವಟಿಗ, ಆನೆ ನಡಿಸುವವ.

हादसा, हादिसा– पु दुर्घटना, नयी-

वात । ಸಂಕಟ, ಆಪತ್ತು, ದುರ್ಘಟನೆ, ಸವಪ್ರಸಂಗ.

हादी– पु मार्गदर्शक, नेता । ಮಾರ್ಗದರ್ಶಕ, ನಾಯಕ, ಮುಖಂಡ.

हान– स्त्री दे 'हानि'। पु त्याग । ತ್ಯಾಗ.

हानि– स्त्री. नाश, क्षय, अनिष्ट, घाटा । ನಾಶ, ಕ್ಷಯ, ಅನಿಷ್ಟ, ನಷ್ಟ, ಹಾನಿ, ಕೊರತೆ, ಕೆಡಕು.

हानिकारक, हानिकारी– वि अनिष्टकारक । ಅನಿಷ್ಟಕಾರಕ, ಹಾನಿಕಾರಕ, ಕೆಡಕುಮಾಡುವ.

हाफ़िज– पु. वह मुसलमान जिसे कुरान कंठस्थ हो, रक्षक । ಕುರಾನನ್ನು ಕಂಠಸ್ಥ ಮಾಡಿದವ, ರಕ್ಷಕ.

हाफ़िजा– पु. स्मरणशक्ति । ಸ್ಮರಣಶಕ್ತಿ.

हामिला– वि. गर्भवती । ಗರ್ಭವತಿ.

हामी– वि. सहायक । ಸಹಾಯಕ स्त्री. स्वीकारोक्ति । ಸ್ವೀಕೃತಿ, ಒಪ್ಪಿಕೊಳ್ಳುವಿಕೆ.

—भरना = कोई काम करना, मंजर करना । ಒಪ್ಪಿಕೊಳ್ಳು, ಸ್ವೀಕರಿಸು.

हाय– अव्य. दुःख सूचित करने का शब्द, आह । ದುಃಖಸೂಚಕ ಶಬ್ದ, ಅಯ್ಯೋ ! स्त्री. पीडा, दुःख, कष्ट । ಪೀಡೆ, ದುಃಖ, ಕಷ್ಟ.

हायतोबा– स्त्री. रोना चिल्लाना । ಚೀರಾಟ, ಅಳುವಿಕೆ, ಹಾಹಾಕಾರ.

हायन– पु. वर्ष । ವರ್ಷ, ಸಂವತ್ಸರ.

हायल–वि घायल, मूर्छित, रोकनेवाला । ಗಾಯಗೊಂಡ, ಮೂರ್ಛಿತನಾದ, ತಡೆಯುವ, ನಡುವೆಬರುವ, ಮಧ್ಯೆ ಬರುವ.

हायहाय– स्त्री. पीडा, दुःख, झंझट । ಪೀಡೆ, ದುಃಖ, ಕಷ್ಟ, ತ್ರಾಸ, ರಗಳೆ, ಗೊಂದಲ.

हार– पु माला । ಮಾಲೆ, ಹಾರ. स्त्री. पराजय । ಪರಾಜಯ, ಸೋಲು. वि. चुरानेवाला, नष्ट करनेवाला, सुंदर । ಕಳವು ಮಾಡುವವ, ನಾಶ ಮಾಡುವವ, ಸುಂದರ.

हार-जीत– स्त्री पराजय-जय । ಸೋಲು-ಗೆಲುವು.

हारक–पु धूर्त, चोर, हरण करनेवाला, हार, माला, भाजक । ಧೂರ್ತ, ಚೋರ, ಮೋಸಗಾರ, ಕಳ್ಳ, ಹರಣ ಮಾಡುವವ, ಹಾರ, ಮಾಲೆ, (ಗಣಿತದಲ್ಲಿ) ಭಾಜಕ.

हारगुटिका– स्त्री. माला का दाना । ಮಾಲೆಯ ಮಣಿ.

हारना– अक्रि पराभूत होना, थकना, निराश होना । ಅಪಜಯವಾಗು, ಸೋಲಾಗು, ದಣಿ, ಬಲಗುಂದು, ನಿರಾಶನಾಗು सक्रि गंवाना, छोड देना, नष्ट करना । ಕಳಕೊಳ್ಳು, ಬಿಟ್ಟುಬಿಡು, ನಾಶಮಾಡು.

हारल– पु दे 'हारिल'।

हारा– प्रत्य. प्राचीन हिन्दी का एक प्रत्यय जो वाला अर्थ में प्रयोग होना

है। ಪ್ರಾಚೀನ ಹಿಂದಿಯ ಒಂದು ಪ್ರತ್ಯಯ. ಅದು 'ಮಾಡುವವ', 'ಕಾರ'ಎಂಬ ಅರ್ಥದಲ್ಲಿ ಪ್ರಯೋಗಿಸಲ್ಪಡುತ್ತದೆ. ಉದಾ.-'लकड़-हरा'। स्त्री. मद्य। ಮದ್ಯ.

हारि– स्त्री पराजय, समूह, पथिक। ಪರಾಜಯ, ಸೋಲು, ಸಮೂಹ, ಪಥಿಕ.

हारित– वि हारा हुआ, वंचित, खोया हुआ। ಸೋತ, ಕಳಕೊಂಡ. पु सुग्गा, हरा रंग। ಗಿಳಿ, ಹಸುರು ಬಣ್ಣ.

हारिल– पु एक चिडिया। ಒಂದು ಜಾತಿಯ ಪಕ್ಷಿ.

हारी–वि हरण करनेवाला, लूटनेवाला, मोहित करनेवाला, वसूल करनेवाला, सुंदर। ಹರಣ ಮಾಡುವವ, ಅಪಹರಿಸುವವ, ಮೋಹಿತ ಪಡಿಸುವ, ವಸೂಲ ಮಾಡುವವ, ಸುಂದರ, ಮನೋಹರ.

हारीत–पु एक प्रकार का कबूतर, चोर, लुटेरा। ಒಂದು ತರದ ಪಾರಿವಾಳ, ಕಳ್ಳ, ಸುಲಿಗೆಗಾರ, ದರೋಡೆಖೋರ, ಕೊಳ್ಳೆಗಾರ.

हारुक–पु हरण करनेवाला, छीननेवाला। ಹರಣ ಮಾಡುವವ, ಅಪಹರಿಸುವವ

हारौल– पु सेना का अग्रभाग। ಮುಂದಳ, ಸೈನ್ಯದ ಮುಂಭಾಗ.

हार्द– पु. अभिप्राय, स्नेह। ಅಭಿಪ್ರಾಯ, ಸ್ನೇಹ.

हार्दिक– वि हृदयका। ಹೃದಯದ, ಹೃದಯದಿಂದ ಹೊರಟ.

हार्दिक्य– पु मित्रता। ಮಿತ್ರತ್ವ, ಸ್ನೇಹ, ಗೆಳೆತನ.

हाल– स्त्री लोहे का वह पट्टा जो पहिये के दोरेपर चढाया जाता है, हिलने की किया, हलचल। ಚಕ್ರದ ಪಟ್ಟಿ, ಗಾಲಿಯ ಸುತ್ತಲೂ ಬಿಗಿಯುವ ಕಬ್ಬಿಣದ ಪಟ್ಟಿ, ಗಾಲಿಯ ಕಟ್ಟು, ಕಂಪನ, ನಡುಗುವಿಕೆ

हाल– पु दशा, समाचार, विवरन, कथा, ईश्वर में तल्लीनता। ಸ್ಥಿತಿ, ಪರಿಸ್ಥಿತಿ, ಇರುವು, ಇರುವಿಕೆ, ಸುದ್ದಿ, ಸಮಾಚಾರ, ವಿವರಣೆ, ಕತೆ, ದೇವರಲ್ಲಿ ತಲ್ಲೀನತೆ वि. उपस्थित, वर्तमान, चलता। ಉಪಸ್ಥಿತ, ಇರುವ, ವರ್ತಮಾನ, ನಡೆಯುತ್ತಿರುವ. अव्य. अभी। ಈಗ, ಸದ್ಯಕ್ಕೆ, ಕೂಡಲೆ.

—में = सद्य। ಸದ್ಯದಲ್ಲಿ.

हालगोला– पु गेंद। ಚೆಂಡು.

हालडोल– पु कंपन, हलचल। ಅಲುಗಾಟ, ಚಲನೆ, ಕಂಪನ, ಚಳುವಳಿ.

हालत– स्त्री. दशा। ಸ್ಥಿತಿ, ಪರಿಸ್ಥಿತಿ, ಗತಿ.

हालना– अक्रि. हिलना। ಅಲುಗಾಡು, ಚಲಿಸು, ಬಳುಕು, ಅಲುಗು.

हालरा– पु बच्चों को लेकर हिलाना, झोंका। ಮಕ್ಕಳನ್ನು ಕೈಯಲ್ಲಿ

ತೆಗೆದುಕೊಂಡು ಅಲ್ಲಾಡಿಸುವಿಕೆ, ಜೋಲಾಟ, ತೆರೆ, ಅಲೆ.

हालहूल– स्त्री शोरगुल, हल्लागुल्ला, हलचल। ಗದ್ದಲ, ಚೀರಾಟ, ಚಳುವಳಿ, ಆಂದೋಲನ, ಸಡಗರ.

हालाँकि– अव्य यद्यपि। ಆದಾಗ್ಯೂ, ಯದ್ಯಪಿ.

हाला– स्त्री. मद्य। ಮದ್ಯ, ಸೆರೆ.

हालाडोला–पु. हलचल। ಗತಿ, ಕಂಪನ, ಆಂದೋಲನ.

हालात– स्त्री. 'हाल' का बहुवचन। ಸ್ಥಿತಿಗತಿ.

हालाहल– पु दे 'हलाहल'।

हालाहाली– स्त्री. जल्दी। ತ್ವರೆ, ಅವಸರ, ಗಡಿಬಿಡಿ, क्रिवि. जल्दीमें। ತ್ವರೆಯಾಗಿ, ಅವಸರದಿಂದ, ಗಡಿಬಿಡಿಯಿಂದ, ಬೇಗನೆ, ಶೀಘ್ರವಾಗಿ.

हाली– क्रिवि. जल्दी। ಬೇಗನೆ, ತ್ವರೆಯಾಗಿ, ಶೀಘ್ರವಾಗಿ.

हाव– पु. आकर्षण करनेवाली चेष्टायें। ಒಯ್ಯಾರ, ಬೆಡಗು, ಹಾವಭಾವ

हावभाव– पु नाजनखरा। ಒಯ್ಯಾರ, ಬೆಡಗು, ಅಂಗಚೇಷ್ಟೆ, ಒನಪು.

हावला-बावला– वि पागल। ಹುಚ್ಚ, ಮರುಳ, ಉನ್ಮತ್ತ.

हाशिया– पु. किनारा, कोर, गोट, हाशिए या किनारे पर का लेख। ಅಂಚು, ಪಂಡೆ, ಕಡೆ, ಪಕ್ಕ, ದಿಕ್ಕು, ಗೋಟು, ಕರೆ, ಕಾಗದ ಬರೆಯುವಾಗ ಅಂಚಿನಲ್ಲಿ ಬಿಡುವ ಸ್ಥಳ, ಮಾರ್ಜಿನ್ನು, ಅಂಚಿನಲ್ಲಿ ಬರೆದ ಲೇಖ ಅಥವಾ ಟಿಪ್ಪಣಿ.

हास– पु. हँसने की क्रिया या भाव, हँसी। ನಗುವಿಕೆ, ನಗು, ನಗಚಾಟಿಕೆ, ವಿನೋದ.

हासक– पु हँसनेवाला। ನಗುವವ.

हास्दि– वि. ईर्ष्यालु, अशुभचिंतक। ಮತ್ಸರವಡುವವ, ಅಸೂಯೆ ಪಡುವವ, ಅಶುಭ ಚಿಂತಕ, ಶತೃ.

हासिल–पु. उपज, लाभ, लगान, गणित की क्रिया का फल। ಹುಟ್ಟುವಳಿ, ಉತ್ಪತ್ತಿ, ಲಾಭ, ರಾಜ್ಯಕರ, ತೆರಿಗೆ, (ಗಣಿತದಲ್ಲಿ) ಲಬ್ಧಾಂಕ. वि प्राप्त। ಪ್ರಾಪ್ತ, ಸಿಕ್ಕ, ದೊರೆತ.

—करना = प्राप्त करना। ದೊರಕಿಸು, ಗಳಿಸು

हास्य– पु हँसी। ನಗಚಾಟಿಕೆ, ವಿನೋದ, ಹಾಸ್ಯ.

हास्यास्पद– पु हास्यका विषय, जिस को देखकर लोग हँस पडे। ಹಾಸ್ಯದ ವಿಷಯ, ನಗೆ ಬರುವ ಸಂಗತಿ, ಹಾಸ್ಯಾಸ್ಪದ.

हास्योत्पादक– वि. हास्यजनक। ನಗೆ ಹುಟ್ಟಿಸುವ, ನಗೆ ಬರುವ.

हाहंत–अव्य शोकसूचक शब्द। ಶೋಕ ಸೂಚಕ ಶಬ್ದ

हाहा– पु. हसने का शब्द, गिड़गिड़ाने का शब्द। ನಗುವಿಕೆ, ಅಂಗಲಾಚುವಿಕೆ, ದೈನ್ಯದಿಂದ ಬೇಡುವಿಕೆ.

हाहाकार– पु. घबराहट की चिल्लाहट।

ಗೋಳಾಟ, ಚೀರಾಟ, ಹಾಹಾ-ಕಾರ.

**हाहाठीठी**– स्त्री हँसी-दिल्लगी । ನಗ-ಚಾಟಿಕೆ, ವಿನೋದ, ಪರಿಹಾಸ

**हाही**– स्त्री कुछ पाने की उत्कट इच्छा। ಯಾವನೊಂದು ವಸ್ತುವನ್ನು ದೊರಕಿಸುವ ಬಲವಾದ ಇಚ್ಛೆ.

**हाहू**– पु कोलाहल। ಗದ್ದಲ, ಕೋಲಾಹಲ, ಗಲಾಟೆ.

**हाहूबेर**– पु जंगली बेर । ಕಾಡು ಬೋರೆ ಹಣ್ಣು.

**हिंकटना, हिंकरना**–अक्रि हिनहिनाना। ಕೆನೆಯು, ಕಿಳಿರು, ಹೇಕರಿಸು, (ಕುದುರೆ) ಒದರು.

**हिंकार**– पु गायके रंभाने का शब्द, शेर की आवाज। ಆಕಳ ಕೂಗು, ಹಸುವಿನ ಕೂಗು, ಸಿಂಹದ ಗರ್ಜನೆ.

**हिंगली**– स्त्री एक प्रकार की तमाखू। ಒಂದು ತರದ ಹೊಗೆಸೊಪ್ಪು, ಒಂದು ತರದ ತಂಬಾಕು.

**हिंगु**– पु हीग। ಹಿಂಗು.

**हिंगोट**– पु. एक वृक्ष। ಹೊಂಗೆ ಮರ.

**हिंछा**– स्त्री इच्छा। ಇಚ್ಛೆ.

**हिंडन**– पु घूमना - फिरना । ತಿರು-ಗಾಟ, ಸಂಚಾರ, ಅಡ್ಡಾಡುವಿಕೆ.

**हिंडोर, हिंडोरना, हिंडोरा**– पु. झूला। ಉಯ್ಯಾಲೆ, ತೂಗುಮಣೆ, ತೊಟ್ಟಿಲು.

**हिंडोरी**– स्त्री. छोटा झूला । ಚಿಕ್ಕ ಉಯ್ಯಾಲೆ, ಚಿಕ್ಕ ತೊಟ್ಟಿಲು.

**हिंडोलना, हिंडोला**– पु दे 'हिंडोर'।

**हिंद**– पु हिंदुस्तान, संयुक्तप्रांत । ಹಿಂದುಸ್ತಾನ, ಭಾರತ ದೇಶ, ಸಂಯುಕ್ತಪ್ರಾಂತ.

**हिंदवी**– स्त्री हिंदी भाषा । ಹಿಂದೀ ಭಾಷೆ.

**हिंदी**– वि हिंदुस्तान का। ಹಿಂದುಸ್ತಾನದ, ಭಾರತ ದೇಶದ, ಭಾರತೀಯ. स्त्री. हिंद की भाषा। ಹಿಂದೀಭಾಷೆ, ಹಿಂದುಸ್ತಾನದ ಭಾಷೆ.

**हिंदुस्तान, हिंदुस्थान**– पु भारतवर्ष । ಭಾರತ ದೇಶ, ಹಿಂದುಸ್ತಾನ.

**हिंदुस्तानी, हिंदुस्थानी**– वि भारतीय। ಭಾರತೀಯ, ಹಿಂದುಸ್ತಾನದ. पु. भारतवासी । ಹಿಂದುಸ್ತಾನದ ನಿವಾಸಿ, ಭಾರತೀಯ ಮನುಷ್ಯ. स्त्री हिंदुस्तान की भाषा। ಹಿಂದುಸ್ತಾನದ ಭಾಷೆ, ಹಿಂದೀ ಅಥವಾ ಹಿಂದುಸ್ತಾನೀ ಭಾಷೆ

**हिंदू**– पु. आर्य धर्मानुयायी । ಆರ್ಯ ಧರ್ಮದ ಅನುಯಾಯಿ, ಹಿಂದು, ಹಿಂದು ಧರ್ಮದವ.

**हिंदोरना**– सक्रि घंघोलना । ಕಲಕು, ಪ್ರವಾಹಿ ಪದಾರ್ಥದಲ್ಲಿ ಕೈ ಹಾಕಿ ಅಲ್ಲಾಡಿಸು.

**हिंदोस्तान**– पु. दे 'हिंदुस्तान'।

**हिंदोल**– पु. दे. 'हिंडोर'।

**हिंव, हिंवार**– पु हिम, पाला। ಹಿಮ, ಮಂಜು.

हिंस– स्त्री. घोडे का हिनहिनाना । ಕೆನೆಯುವಿಕೆ, ಹೇಕರಿಸುವಿಕೆ.

हिंसक– वि. घातक, हत्यारा, हानि पहुंचानेवाला । ಕೊಲೆಗಾರ, ಘಾತಕ, ಕೊಲೆಗಡಕ, ಕ್ರೂರ, ಹಿಂಸ್ರ, ಕೇಡು ಮಾಡುವವ.

हिंसा– स्त्री हत्या, कष्ट देना, हानि पहुंचाना । ವಧೆ, ಹಿಂಸೆ, ಕೊಲ್ಲುವಿಕೆ, ತ್ರಾಸ ಕೊಡುವಿಕೆ, ಪೀಡನೆ, ಕೇಡು ಮಾಡುವಿಕೆ.

हिंसात्मक– वि. हिंसा से युक्त । ಹಿಂಸಾತ್ಮಕ, ಹಿಂಸೆಯುಳ್ಳ.

हिंसालु– वि मारनेवाला, हिंसा करनेवाला । ಕೊಲ್ಲುವವ, ಹಿಂಸೆ ಮಾಡುವವ.

हिंस्र– वि. घातक, हिंसाशील । ಹಿಂಸ್ರ, ಕೊಲ್ಲುವವ.

हिअ. हिआ– पु हृदय । ಹೃದಯ, ಎದೆ.

हिआउ, हिआव–पु. साहस । ಸಾಹಸ, ಎದೆಗಾರಿಕೆ.

हिकमत–स्त्री. उपाय, विद्या, कलाकौशल, चाल, हकीमी, वैद्यक । ಉಪಾಯ, ಯುಕ್ತಿ, ವಿದ್ಯೆ, ಕಲಾಕೌಶಲ್ಯ, ನಿಪುಣತೆ, ರೀತಿ, ಪದ್ಧತಿ, ವೈದ್ಯ ವೃತ್ತಿ, ವೈದ್ಯನ ಕೆಲಸ.

हिकमती–वि. दार्शनिक, चतुर । ತತ್ವಜ್ಞಾನಿ, ನಿಪುಣ, ಚತುರ.

हिकायत– स्त्री. कहानी, किस्सा । ಕತೆ, ಪ್ರಸಂಗ, ಕಥಾನಕ.

हिक्का– पु. हिचकी । ಬಿಕ್ಕು, ಬಿಕ್ಕಳಿಕೆ.

हिचक, हिचकिचाहट–स्त्री आगापीछा । ಹಿಂಜರಿಯುವಿಕೆ, ಹಿಂದೆ ಮುಂದೆ ನೋಡುವಿಕೆ, ಸಂದೇಹ.

हिचकना– अक्रि आगापीछा करना, सशंक होना । ಹಿಂಜರಿ, ಹಿಂದೆ ಮುಂದೆ ನೋಡು, ಹಿಂತೆಗೆ, ಸಂದೇಹಗೊಳ್ಳು.

हिचकिचाना– अक्रि. दे. 'हिचकना' ।

हिचकिचाहट– स्त्री दे 'हिचक' ।

हिचकिची– स्त्री. आगापीछा, हिचकी । ಹಿಂಜರಿಯುವಿಕೆ, ಸಂದೇಹ, ಬಿಕ್ಕಳಿಕೆ.

हिचकी– स्त्री. पेट की वायु का कंठ में से धक्का देते हुए निकलना । ಬಿಕ್ಕಳಿಕೆ, ಬಿಕ್ಕು.

हिचरमिचर– पु. आगापीछा । ಹಿಂಜರಿಯುವಿಕೆ, ಸಂದೇಹ ಪಡುವಿಕೆ, ಹಿಂದೆ ಮುಂದೆ ನೋಡುವಿಕೆ

हिजडा हिजरा–पु. नपुंसक । ನಪುಂಸಕ.

हिजरत– स्त्री. देशत्याग । ದೇಶತ್ಯಾಗ.

हिजरी– स्त्री. हजरत मुहम्मद का मक्का छोडकर मदीना जाना, वह सन जो उस तिथि से चला था । ಮಹಮ್ಮದ ಪೈಗಂಬರನು ಮಕ್ಕಾ ಪಟ್ಟಣವನ್ನು ಬಿಟ್ಟು ಮದೀನಾ ಪಟ್ಟಣಕ್ಕೆ ಹೋದದ್ದು, ಆ ತಿಥಿಯಿಂದ ನಡೆಯುತ್ತ ಬಂದ ಶಕೆ, ಹಿಜರೀ ಶಕೆ.

हिजाब– पु परदा, ओट, लज्जा, लिहाज । ಪರದೆ, ತೆರೆ, ಮುಸುಕೆ,

ಮರೆ, ಲಜ್ಜೆ, ನಾಚಿಕೆ, ಸಂಕೋಚ, ದಾಕ್ಷಿಣ್ಯ.

हिज्जे– पु किसी शब्द के वर्णों का पृथक्करण । ವರ್ಣವಿನ್ಯಾಸ, ಅಕ್ಷರ ವಿನ್ಯಾಸ.

हिज्र–पु. वियोग, विछोह । ವಿಯೋಗ, ಅಗಲುವಿಕೆ, ವಿರಹ.

हित– पु. लाभ, कल्याण । ಹಿತ, ಲಾಭ, ಕಲ್ಯಾಣ. वि लाभदायक, अनुकूल, उपकारी । ಲಾಭದಾಯಕ, ಅನುಕೂಲ, ಒಳ್ಳೆಯ ವ್ಯವಹಾರ ಮಾಡುವವ, ಉಪಕಾರಿ.

हितकर, हितकारी– वि लाभ पहुंचानेवाला, उपयोगी, स्वास्थ्यकर । ಹಿತಕರವಾದ, ಲಾಭದಾಯಕವಾದ, ಉಪಯೋಗವುಳ್ಳ, ಹಿತವಾಗುವ, ಆರೋಗ್ಯಕ್ಕೆ ಹಿತಕರವಾದ.

हितचिंतक– पु. भला चाहनेवाला । ಹಿತಚಿಂತಕ, ಹಿತ ಬಯಸುವವ, ಶುಭೇಚ್ಛು.

हितता– स्त्री भलाई । ಕಲ್ಯಾಣ, ಹಿತ, ಲಾಭ.

हितवचन– पु कल्याण का उपदेश । ಹಿತವಚನ, ಹಿತ ನುಡಿಗಳು, ಕಲ್ಯಾಣಕಾರಕ ಉಪದೇಶ.

हितवादी– वि भलाई की बात करनेवाला । ಹಿತವನ್ನು ನುಡಿಯುವವ, ಕಲ್ಯಾಣಕಾರಕ ಮಾತುಗಳನ್ನು ಹೇಳುವವ.

हिताई– स्त्री संबंध, नाता । ಸಂಬಂಧ, ಬಾಂಧವ್ಯ, ಆಪ್ತತ್ವ, ನೆಂಟಸ್ತಿಕೆ.

हिताना– अक्रि. अनुकूल होना, अच्छा लगना । ಅನುಕೂಲವಾಗು, ಹಿತವಾಗು, ಒಳ್ಳೆಯದೆನಿಸು.

हिताहित–पु. भलाई बुराई । ಒಳಿತು ಕೆಡಕು, ಲಾಭಹಾನಿ, ಹಿತಾಹಿತ.

हिती, हितु, हितू–पु शुभाकांक्षी, मित्र, स्नेही, संबंधी । ಶುಭೇಚ್ಛು, ಹಿತವನ್ನು ಬಯಸುವ, ಮಿತ್ರ, ಗೆಳೆಯ, ನೆಂಟ, ಸಂಬಂಧಿಕ.

हितेच्छु– वि. कल्याण माननेवाला । ಹಿತ ಬಯಸುವವ.

हितैषी– पु दे. 'हितू'। वि भला चाहनेवाला । ಹಿತೈಷಿ, ಹಿತ ಬಯಸುವ.

हिदायत– स्त्री मार्गदर्शन, आदेश । ಮಾರ್ಗದರ್ಶನ, ಉಪದೇಶ, ಆದೇಶ, ಬುದ್ಧಿವಾದ.

हिनहिनाना– अक्रि घोड़े का बोलना । ಕೆನೆಯು, ಕಿಳಿರು, ಹೇಕರಿಸು.

हिनहिनाहट– स्त्री. घोड़े की बोली । ಹೇಕರಿಸುವಿಕೆ, ಕೆನೆಯುವಿಕೆ.

हिना– स्त्री मेंहदी । ಮದರಂಗಿ.

हिफ़ाज़त– स्त्री रक्षा, देखरेख । ರಕ್ಷಣೆ, ಕಾಪಾಡುವಿಕೆ, ಜೋಪಾನ.

हिफ्ज–वि. कंठस्थ, ज़बानी । ಕಂಠಸ್ಥ, ಬಾಯಿಪಾಠವಾದ. पु. हिफाजत, अदब । ರಕ್ಷಣೆ, ಜೋಪಾನ, ಶಿಷ್ಟಾಚಾರ, ಸಂಕೋಚ.

हिब्बा–पु पुरस्कार, दान । ಪುರಸ್ಕಾರ,

ಇನಾಮು, ದಾನ.

हिब्बानामा– पु दानपत्र। ದಾನಪತ್ರ.

हिमंचल– पु हिमाचल। ಹಿಮಾಲಯ ಪರ್ವತ.

हिमंत– पु हेमंत ऋतु । ಹೇಮಂತ ಋತು

हिम– पु वर्फ, पाला, तुषार, जाडा । ಬರ್ಫ, ಹಿಮ, ಮಂಜು, ಇಬ್ಬನ್ನಿ, ತುಷಾರ, ಚಳಿಗಾಲ.

हिमऋतु– स्त्री जाडे का ऋतु । ಚಳಿಗಾಲ.

हिमकर, हिमकिरण– पु चंद्रमा । ಚಂದ್ರ.

हिमाक़त– स्त्री मूर्खता। ಮೂರ್ಖತನ, ದಡ್ಡತನ.

हिमाचल, हिमाद्रि–पु हिमालय पर्वत। ಹಿಮಾಲಯ ಪರ್ವತ.

हिमानी– स्त्री वर्फ, ओस । ಬರ್ಫ, ಹಿಮ, ಮಂಜು.

हिमायत–स्त्री मदद, रक्षा। ಸಹಾಯ, ಬೆಂಬಲ, ರಕ್ಷಣೆ, ಸಮರ್ಥನೆ.

हिमायती–वि पक्षपाती, समर्थक, रक्षक। ಪಕ್ಷಪಾತಿ, ಸಮರ್ಥಕ, ಸಹಾಯಕ, ರಕ್ಷಕ.

हिम्मत–स्त्री साहस, विक्रम । ಸಾಹಸ, ಧೈರ್ಯ, ಎದೆಗಾರಿಕೆ, ಪರಾಕ್ರಮ.

—हारना = साहस छोडना । ಎದೆಗುಂದು, ಧೈರ್ಯ ಬಿಡು.

हिम्मतवार, हिम्मती– वि साहसी । ಸಾಹಸಿ, ಪರಾಕ್ರಮಿ.

हिय– पु. हृदय । ಹೃದಯ, ಎದೆ.

—हारना = साहस छोडना । ಎದೆಗುಂದು.

हियरा, हिया– पु. हृदय, छाती । ಹೃದಯ, ಎದೆ.

हियाव–पु साहस। ಸಾಹಸ,ಉತ್ಸಾಹ.

—पडना = साहस होना । ಸಾಹಸ ಮಾಡು, ಧೈರ್ಯವಾಗು.

हिरकना– अक्रि. सटना, पासमें जाना। ಹತ್ತಿಕೊಳ್ಳು, ಅಂಟಿಕೊಳ್ಳು, ಸಮೀಪ ಹೋಗು.

हिरकाना– सक्रि. पास में ले जाना, सटाना ।

हिरगनी– स्त्री. एक प्रकार की बढिया कपास । ಒಂದು ತರದ ಒಳ್ಳೆಯ ಹತ್ತಿ.

हिरण– पु. हरिण, सोना, वीर्य, कौडी । ಜಿಗರೆ, ಜಿಂಕೆ, ಸುವರ್ಣ, ಬಂಗಾರ, ವೀರ್ಯ, ಕವಡೆ.

हिरण्मय– वि. सोने का बना हुआ । ಬಂಗಾರದ, ಬಂಗಾರದಿಂದಾದ.

हिरण्य– पु सुवर्ण, धतूरा, वीर्य, कौडी, धन, चादी, अमृत, तत्व, ज्ञान । ಸುವರ್ಣ, ಬಂಗಾರ, ಧತ್ತೂರಿ, ವೀರ್ಯ, ಕಾಡಿ, ಧನ, ಹಣ, ಬೆಳ್ಳಿ, ಅಮೃತ, ತತ್ವ, ಜ್ಞಾನ.

हिरदय, हिरदा– पु हृदय। ಹೃದಯ.

हिरन– पु हरिण, मृग । ಜಿಗರೆ,ಜಿಂಕೆ

—हो जाना = वेग से भाग जाना । ವೇಗದಿಂದ ಓಡಿ ಹೋಗು.

**हिरनी**– स्त्री मादा हिरन । ಹೆಣ್ಣು ಜಿಗರೆ.

**हिरनौटा**– पु. हिरन का बचा । ಜಿಗರೆ ಮರಿ, ಜಿಂಕ ಮರಿ

**हिरफ़त**– स्त्री हस्तकौशल, हुनर, चालाकी । ಹಸ್ತಕೌಶಲ್ಯ, ಕಲೆ, ಕೈಕೆಲಸ, ಕೈಚಳಕ, ಜಾಣ್ಮೆ, ಧೂರ್ತತನ, ಠಕ್ಕು

**हिरमज़ी, हिरमिज़ी**– स्त्री एक प्रकार की लाल मिट्टी । ಒಂದು ತರದ ಕೆಂಪು ಮಣ್ಣು.

**हिरस**– पु ईर्ष्या । ಈರ್ಷೆ,ಮೇಲಾಟ, ಸ್ಪರ್ಧೆ.

**हिराना**–अक्रि खो जाना, मिटना,हक्का-बक्का रहना, भूल जाना । ಕಳೆದು ಹೋಗು, ಅಳಿ, ನಷ್ಟವಾಗು,ಗಾಬರಿಯಾಗು, ಚಕಿತನಾಗು, ಮರೆತು ಹೋಗು. सक्रि खोना, भूलना । ಕಳಕೊಳ್ಳು, ಮರೆ.

**हिरावल**– पु सेनाका अगला भाग । ಮುಂದಳ, ಅಗ್ರ ಸೈನ್ಯ.

**हिरास**– स्त्री भय, निराशा । ಭಯ, ಅಂಜಿಕೆ, ನಿರಾಶೆ

**हिरासत**– स्त्री नजरबंदी, कैद, पहरा। ಕಾವಲಲ್ಲಿರಿಸುವಿಕೆ, ನಜರುಬಂದಿ, ಸೆರೆ ಪಹರೆ, ಕಾವಲು

**हिरासाँ**–वि भयभीत, निराशा। ಭಯಭೀತ, ಅಂಜಿದ, ನಿರಾಶನಾದ, ಭಗ್ನಾಶ.

**हिरौंजी**– स्त्री दे 'हिरमजी'।

**हिरौल**– पु दे 'हरावल'।

**हिर्स**– स्त्री लालच, स्पर्धा । ಆಶೆ, ಬಯಕೆ,ಲೋಭ,ಸ್ಪರ್ಧೆ,ಮೇಲಾಟ.

**हिलकना** अक्रि हिचकी या सिसकी लेना, सट जाना । ಬಿಕ್ಕು, ನರಳು, ಹತ್ತಿಕೊಳ್ಳು, ಹೊಂದಿಕೊಳ್ಳು

**हिलकी**–स्त्री हिचकी, सिसकी। ಬಿಕ್ಕು, ಬಿಕ್ಕುವಿಕೆ, ನರಳುವಿಕೆ

**हिलकोर, हिलकोरा**–पु तरंग, लहर । ತರಂಗ, ತೆರೆ, ಅಲೆ.

**हिलकोरना**– सक्रि. लहराना, पानीको हिलाकर तरंगें उठाना। ತೆರೆಗಳನ್ನೆಬ್ಬಿಸು, ಅಲೆ ಎಬ್ಬಿಸು,ಅಲ್ಲಾಡಿಸು.

**हिलग**– स्त्री संबंध, प्रेम । ಸಂಬಂಧ, ನೇರಿಕೆ, ಪ್ರೇಮ.

**हिलगना**– अक्रि अटकना, लगना, सटना, हिलमिल जाना । ಸಿಕ್ಕಿಕೊಳ್ಳು, ಅಂಟಿಕೊಳ್ಳು, ಹೊಂದಿಕೊಳ್ಳು,ಹೊಂದಿಕೆಯಾಗು,ಕೂಡು, ಸೇರು, ಮಿಳಿತವಾಗು, ಪಳಗು.

**हिलगाना**– सक्रि अटकाना, फँसाना, परचाना । ಸಿಕ್ಕಿಸು, ಸೇರಿಸು, ತೊಡರಿಸು, ಪರಿಚಯ ಮಾಡಿಸು, ಪಳಗಿಸು.

**हिलना**– अक्रि डोलना, सरकना, ढीला होना, कँपना, लहराना, झूमना । ಅಲ್ಲಾಡು,ಅಲುಗಾಡು,ಸಡಿಲಾಗು, ಕಂಪಿಸು, ನಡುಗು, ಬಳುಕು, ಮಣಿದಾಡು, ಹರಿದಾಡು

**—मिलना** = परचना । ಪಳಗು,

ಹೊಂದಿಕೊಳ್ಳು
हिलसा– स्त्री एक तरह की मछली । ಒಂದು ತರದ ಮೀನು.
हिलाना– सक्रि चलायमान करना, डुलाना, कँपाना, झुलाना, परचाना, प्रवेश करना । ಅಲ್ಲಾಡಿಸು, ಅಲು-ಗಿಸು, ಸರಿದಾಡಿಸು, ನಡುಗಿಸು, ಬಳುಕಿಸು, ತೂಗಾಡಿಸು, ಪ್ರೀತಿ ಹುಟ್ಟಿಸು, ಪಳಗಿಸು, ಹೊಂದಿಕೆಯಾಗು, ಸೇರಿಸು, ಪ್ರವೇಶ ಮಾಡಿಸು.
हिलाल– पु. दूज का चंद्रमा । ಬಿದಿ-ಗೆಯ ಚಂದ್ರ.
हिलोर, हिलोरा– पु. तरंग, लहर । ತೆರೆ, ಅಲೆ, ತರಂಗ.
हिलोरना– सक्रि. दे ' हिलकोरना ' ।
हिलोल, हिल्लोल– पु लहर । ಅಲೆ, ತೆರೆ, ತರಂಗ.
हिल्लोलन– पु. लहराना, झूलना । ಅಲೆಗಳೇಳುವಿಕೆ, ತೂಗಾಡುವಿಕೆ.
हिवँ– पु. हिम, पाला । ಹಿಮ, ಮಂಜು, ಇಬ್ಬನಿ.
हिवँर, हिवाँर– पु. पाला । ಹಿಮ, ಮಂಜು.
हिसका– पु ईर्ष्या, डाह । ಸ್ಪರ್ಧೆ, ಮೇಲಾಟ, ಅಸೂಯೆ, ಮತ್ಸರ.
हिसखा– पु. दे. ' हिसका ' ।
हिसाब– पु गणित, दर, रीति, लेखा। ಗಣಿತ, ಲೆಕ್ಕ, ಎಣಿಕೆ, ದರ, ಧಾರಣೆ, ರೀತಿ, ಸ್ಥಿತಿ, ಲೆಕ್ಕಾಚಾರ, ಆಯ-ವ್ಯಯದ ಲೆಕ್ಕ
—किताब = आयव्यय का व्योरा । ಲೆಕ್ಕಪಕ್ಕ, ಲೆಕ್ಕದ ವಿವರಣೆ, ಲೆಕ್ಕಾಚಾರ.
—देना = जमाखर्च का व्योरा बताना। ಲೆಕ್ಕ ಒಪ್ಪಿಸು, ಜಮಾ-ಖರ್ಚಿನ ವಿವರಣೆ ಕೊಡು.
—से = संयम से, लिखे हुए व्योरे के मुताबिक। ಸಂಯಮದಿಂದ, ಲೆಕ್ಕದಿಂದ, ತಪಶೀಲಿನ ಅನುಸಾರವಾಗಿ, ವಿವರಣೆಗನುಸಾರವಾಗಿ.
हिसाबी– वि हिसाब जाननेवाला, गणितज्ञ, नियमानुसार, ठीक। ಲೆಕ್ಕಿಗ, ಲೆಕ್ಕ ಬಲ್ಲವ, ಗಣಿತಜ್ಞ, ನಿಯಮಾನುಸಾರವಾದ, ಲೆಕ್ಕದ, ಸರಿಯಾದ.
हिसार–पु. किला, शहरपनाह। ಕೋಟೆ, ದುರ್ಗ, ದುರ್ಗದ ಗೋಡೆ.
हिसिषा– स्त्री. स्पर्धा, ईर्ष्या । ಸ್ಪರ್ಧೆ, ಮೇಲಾಟ, ಪೈಪೋಟಿ.
हिस्सा– पु भाग, अंश, टुकडा, विभाग, खंड, साझा। ಭಾಗ, ಅಂಶ, ತುಂಡು, ವಿಭಾಗ, ಖಂಡ, ಅಂಗ, ಪಾಲು.
हिस्सादार, हिस्सेदार– वि साझेदार । ಪಾಲುಗಾರ, ಭಾಗಸ್ಥ.
हिस्सेदारी– स्त्री साझेदारी । ಪಾಲು-ಗಾರಿಕೆ.
हिहि– अव्य हँसने का शब्द । ನಗುವ ಶಬ್ದ.
हिहियाना– अक्रि. हिनहिनाना । ಕೆನೆ

